# ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಲೋಕಣ್ಣ ಭಜಂತ್ರಿ

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು

**ಲೋಕಣ್ಣ ಭಜಂತ್ರಿ**



ಮಾರ್ಗದರ್ಶಕರು

**ಡಾ. ವಾಸುದೇವ ಬಡಿಗೇರ**

ಪ್ರಾಧ್ಯಾಪಕರು




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೮

## ಸಂಶೋಧಕರ ಘೋಷಣಾ ಪತ್ರ

**ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ.ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ಲೋಕಣ್ಣ ಭಜಂತ್ರಿ**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 17/10/2018

# ಮಾರ್ಗದರ್ಶಕರ ದೃಢೀಕರಣ ಪತ್ರ

**ಲೋಕಣ್ಣ ಭಜಂತ್ರಿ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

17/10/18

**ಡಾ. ವಾಸುದೇವ ಬಡಿಗೇರ**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 17/10/2018

## ಪರಿವಿಡಿ

# ಅಧ್ಯಾಯ: ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩. ಅಧ್ಯಯನದ ಸಮೀಕ್ಷೆ
೧.೪. ಅಧ್ಯಯನದ ವಿಧಾನ
೧.೫. ಅಧ್ಯಯನದ ಸ್ವರೂಪ

ಅಧ್ಯಾಯ: ಒಂದು

# ಪ್ರಸ್ತಾವನೆ

ಬಾಗಲಕೋಟೆಯು ಪೌರಾಣಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಮಹತ್ವನ್ನು ಪಡೆದುಕೊಂಡ ಉತ್ತರ ಕರ್ನಾಟಕದ ಪ್ರಮುಖವಾದ ಜಿಲ್ಲೆಯಾಗಿದೆ. ಕೃಷ್ಣ, ಘಟಪ್ರಭಾ ಹಾಗೂ ಮಲಪ್ರಭಾ ನದಿಗಳ ಆಶ್ರಯದಲ್ಲಿ ಹರಡಿಕೊಂಡಿರುವ ಜಿಲ್ಲೆಯು ಸುತ್ತಮುತ್ತಲಿನ ಪ್ರದೇಶವು ಸಹಸ್ರಾರು ವರ್ಷಗಳಿಂದಲೂ ಜನಜೀವನ, ಜನವಸತಿ ಚಟುವಟಿಕೆಗಳಿಂದ ಕೂಡಿದಂತಹ ಪ್ರದೇಶವಾಗಿದೆ. ಈ ನದಿಗಳ ಕೊಳ್ಳದಲ್ಲಿ ನದಿಬಯಲು ಪ್ರದೇಶದಲ್ಲಿ ಆದಿ ಹಳೆಯ ಶಿಲಾಯುಗದ ಅನೇಕ ನೆಲೆಗಳನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಖ್ಯಾಡ, ಢಾಣಕ ಶಿರೂರು, ಬಾದಾಮಿ, ಪಟ್ಟದಕಲ್ಲು, ಐಹೊಳೆ ಹಾಗೂ ಅನಗವಾಡಿ ಇತ್ಯಾದಿ ಪರಿಸರದಲ್ಲಿ ಆದಿ ಹಳೆಯ ಶಿಲಾಯುಗದ ಮಹತ್ವದ ಕುರುಹುಗಳು ಅಥವಾ ಪ್ರಾಚ್ಯಾವಶೇಷಗಳು ಲಭ್ಯವಾಗಿವೆ. ಈ ಮಹತ್ವದ ನೆಲೆಗಳನ್ನು ಗುರುತಿಸುವಲ್ಲಿ ರಾಬರ್ಟ್ ಬ್ರೂಸ್ ಫುಟ್, ಆರ್.ವಿ.ಜೋಶಿ, ಆರ್.ಎಸ್.ಪಪ್ಪು ಮುಂತಾದ ವಿದ್ವಾಂಸರು ಕ್ಷೇತ್ರಕಾರ್ಯ ಮಾಡಿ ನೆಲೆಗಳನ್ನು ಗುರುತಿಸಿ ದಾಖಲಿಸಿದ್ದಾರೆ.[೧] ಈ ನೆಲೆಗಳ ಕುರಿತಂತೆ ಇಂದಿಗೂ ಸಹ ಸಂಶೋಧನೆಗಳು ಮುಂದುವರೆದಿದ್ದು ಗಮನಾರ್ಹವಾಗಿದೆ.

ಶಾತವಾಹನರ ಕಾಲದ ನಗರ, ಹಳ್ಳಿಗಳಾದ ಮರೋಳು ಈ ಸಮಯದಲ್ಲಿ ದೊಡ್ಡ ನೆಲೆಯಾಗಿತ್ತು. ಐಹೊಳೆಯಲ್ಲಿ ರಾವಳಪಡಿಯ ಸಮೀಪ ಮತ್ತು ಇತರ ಕೆಲವೆಡೆ ಶಾತವಾಹನ ಕಾಲದ ಇಟ್ಟಿಗೆಯ ಕಟ್ಟಡಗಳ ಅವಶೇಷಗಳು ದೊರೆತಿವೆ.[೨] ಇತಿಹಾಸ ಪ್ರಸಿದ್ಧ ಚಾಲುಕ್ಯರ ರಾಜಧಾನಿ ಬಾದಾಮಿ ಬಾಗಲಕೋಟೆ ಜಿಲ್ಲೆಯಲ್ಲಿರುವುದು ಹೆಮ್ಮೆಯ ಪ್ರತೀಕ. ಬಾದಾಮಿ ಚಾಲುಕ್ಯರು ಕರ್ನಾಟಕವನ್ನು ಕೇಂದ್ರವನ್ನಾಗಿಸಿಕೊಂಡು ಗೋದಾವರಿಯಿಂದ ಕಾವೇರಿಯವರೆಗೆ ವಿಸ್ತಾರ ಹೊಂದಿದ ಮಹಾ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಮುಂದೆ ರಾಷ್ಟ್ರಕೂಟರು ಚಾಲುಕ್ಯರನ್ನು ಅಧಿಕಾರದ ಗದ್ದುಗೆಯಿಂದ ಇಳಿಸಿ ಅಧಿಕಾರಕ್ಕೆ ಬಂದು ತಮ್ಮ ಪ್ರಭುತ್ವವನ್ನು

ಸ್ಥಾಪಿಸಿ, ಬಾಗಲಕೋಟೆ ಜಿಲ್ಲೆಯ ಮೇಲೆ ಹಿಡಿತ ಸಾಧಿಸಿದರು. ೧೦ನೇ ಶತಮಾನದಲ್ಲಿ ಕಲ್ಯಾಣ ಚಾಳುಕ್ಯರು ರಾಷ್ಟ್ರಕೂಟರನ್ನು ದಮನ ಮಾಡಿ ತಾವು ಅಧಿಕಾರವನ್ನು ಪಡೆದುಕೊಂಡರು. ಅದರಂತೆ ಕಳಚುರಿಗಳು ಮತ್ತು ಸೇವುಣರು ಶಾಸನಗಳು ಸಹ ಬಾಗಲಕೋಟೆ ಪ್ರದೇಶದಲ್ಲಿ ದೊರೆತಿದ್ದು, ನಂತರ ವಿಜಯನಗರ ರಾಜ್ಯ ಸ್ಥಾಪನೆಯಾದಾಗ ಷಾಹಿ ರಾಜ್ಯವೂ ಉದಯವಾದುದರಿಂದ ಸೈನಿಕ ಚಟುವಟಿಕೆಗಳು ಬಾದಾಮಿಯಲ್ಲಿ ಗೋಚರಿಸುತ್ತದೆ. ಮುಂದುವರೆದು ಆದಿಲ್‌ಷಾಹಿ ಹಿಡಿತದಲ್ಲಿಯೂ ಸಹ ಬಾಗಲಕೋಟೆ ಜಿಲ್ಲೆ ಇದ್ದಿತು. ಆದಿಲ್‌ಶಾಹಿ ತನ್ನ ಮಗಳ ಬಳೆಗಾಗಿ ಉಂಬಳಿಯಾಗಿ 'ಬಂಗಡಿ ಕೂಟ' ಪ್ರದೇಶ ದತ್ತಿಯಾಗಿ ನೀಡಿದ್ದನು. 'ಬಂಗಡಿಕೂಟ' ಮುಂದುವರೆದು ಬಾಗಲಕೋಟೆ ಯಾಗಿದೆ. ನಂತರದಲ್ಲಿ ಬ್ರಿಟಿಷರು ಸಂಪೂರ್ಣ ಹಿಡಿತವನ್ನು ಬಾಗಲಕೋಟೆ ಜಿಲ್ಲೆಯ ಮೇಲೆ ಸಾಧಿಸಿದರು. ಆ ಸಮಯದಲ್ಲಿ ಕಲಾದಗಿಯು ಜಿಲ್ಲಾ ಕೇಂದ್ರವಾಗಿತ್ತು.

೧೯ನೇ ಶತಮಾನದಲ್ಲಿ ಬಾದಾಮಿ–ಐಹೊಳೆ–ಪಟ್ಟದಕಲ್ಲು ಪ್ರದೇಶಗಳಲ್ಲಿ ದೇಗುಲಗಳ ಸಮೂಹ ಕಲಾ ಇತಿಹಾಸಕಾರರ ಗಮನವನ್ನು ಸೆಳೆಯತೊಡಗಿದವು. ಮೆಡೋಸ್ ಟೈಲರ್ ೧೮೬೬ರಲ್ಲಿ ಐಹೊಳೆ ಪಟ್ಟದಕಲ್ಲುಗಳಲ್ಲಿರುವ ದೇವಾಲಯಗಳ ಮೊದಲ ಛಾಯಾಚಿತ್ರ ಗಳನ್ನು ತನ್ನ ಆರ್ಕಿಟೆಕ್ಚರ್ ಇನ್ ಧಾರವಾಡ ಎಂಡ್ ಮೈಸೂರ್ ಪುಸ್ತಕದಲ್ಲಿ ಟಿಪ್ಪಣಿಗಳೊಂದಿಗೆ ಪ್ರಕಟಿಸಿದ್ದಾನೆ. ಜೇಮ್ಸ್ ಫರ್ಗುಸನ್ ಅವುಗಳ ಮೇಲೆ ವಾಸ್ತುಶಿಲ್ಪ ಇತಿಹಾಸ ದೃಷ್ಟಿಯಿಂದ ಅವಲೋಕನಗಳನ್ನು ಅದೇ ಪುಸ್ತಕದಲ್ಲಿ ಮಾಡಿದ್ದಾರೆ. ಅಲ್ಲಿಂದ ಮುಂದಕ್ಕೆ ಜೇಮ್ಸ್ ಬರ್ಗ್ಸ್ ಬಹು ವಿವರಪೂರ್ಣವಾದ ಅಧ್ಯಯನಗಳನ್ನು ತನ್ನ 'ರಿಪೋರ್ಟ್ ಆನ್ ಬೆಳಗಾಂವ್ ಎಂಡ್ ಕಲಾದಗಿ ಡಿಸ್ಟ್ರಿಕ್ಟ್ ವರದಿಗಳಲ್ಲಿ ಪ್ರಕಟಿಸಿದ್ದಾನೆ.[೩] ನಂತರದಲ್ಲಿ ಯುನೆಸ್ಕೋ ಸಂಸ್ಥೆ ಕರ್ನಾಟಕದಲ್ಲಿ ಗುರುತಿಸಿರುವ ಎರಡೇ ಎರಡು ವಿಶ್ವಪರಂಪರೆಯ ನೆಲೆಗಳಲ್ಲಿ ಒಂದು ಪಟ್ಟದಕಲ್ಲು–ಬಾಗಲಕೋಟೆ ಜಿಲ್ಲೆಯಲ್ಲಿರುವುದು ನಾಡಿನ ಹೆಮ್ಮೆಯ ಸಂಗತಿ.

ಕ್ರಿ.ಶ.೧೮೭೬ರಲ್ಲಿ ರಾಬರ್ಟ್ ಬ್ರೂಸ್‌ಫೂಟ್‌ರು ಕಲಾದಗಿ ಹತ್ತಿರ ಜಲಜ ಶಿಲೆಯನ್ನು ಕಂಡು ಹಿಡಿದು ಅದಕ್ಕೆ ಕಲಾದಗಿ ವರ್ಗ ಎಂದು ಹೆಸರಿಟ್ಟನು. ಸುಣ್ಣದಕಲ್ಲಿನ ಸಂಗ್ರಹ ಬಹು ಹೆಚ್ಚಾಗಿರುವುದರಿಂದ ಕಲಾದಗಿ ವರ್ಗವು ಆರ್ಥಿಕವಾಗಿ ಬಹುಮುಖ್ಯವಾದುದು. ಶೆಲ್ಲಿಕೇರಿ, ಅಂಕಲಗಿ ಹಾಗೂ ನೀರಲಕೇರಿ ಗ್ರಾಮಗಳಲ್ಲಿ ಸುಣ್ಣದ ಕಲ್ಲಿನ ವಿಶಾಲವಾದ ಗಣಿಗಳಿವೆ. ಇದೇ ಕಾರಣಕ್ಕೆ ಕಲಾದಗಿ, ಲೋಕಾಪುರ, ಬಾಗಲಕೋಟೆ ಪ್ರದೇಶಗಳಲ್ಲಿ ಸಿಮೆಂಟ್ ಕಾರ್ಖಾನೆಗಳು ಸ್ಥಾಪನೆಗೊಂಡಿವೆ. ಲೋಕಾಪುರದ ಸುಣ್ಣದ ಕಲ್ಲು, ಡೋಲೋಮೈಟ್ ಶಿಲೆ ವಿಶ್ವಪ್ರಸಿದ್ಧವಾದುದರಿಂದ ಇಂದು, ಲೋಕಾಪುರ ಸಿಮೆಂಟ್, ಡಾಲ್ಮಿಯಾ, ಜೆ.ಕೆ.,

ವಿಜಯಶಕ್ತಿ, ಕಾಟವಾ ಸಿಮೆಂಟ್ ಕಾರ್ಖಾನೆಗಳು ವ್ಯವಸ್ಥಿತವಾಗಿ ಇಂದಿಗೂ ಸಹ ಕಾರ್ಯನಿರ್ವಹಿಸುತ್ತಿವೆ.

ಬಾಗಲಕೋಟೆ ಜಿಲ್ಲೆಯಲ್ಲಿ ಬ್ರಿಟಿಷರು ಬಾದಾಮಿ ಪ್ರದೇಶಕ್ಕೆ ಮುತ್ತಿಗೆ ಹಾಕಿ ವಶಪಡಿಸಿಕೊಂಡ ಮೇಲೆ ಇಡೀ ಜಿಲ್ಲೆಯಲ್ಲಿ ತಮ್ಮ ಹಿಡಿತ ಸಾಧಿಸಿದರು. ಮುಖ್ಯವಾಗಿ ಸಂಪದ್ಭರಿತ ಪ್ರದೇಶಗಳ ಮೇಲೆ ದಾಳಿ, ಆರ್ಥಿಕ ಲಾಭ ಹಾಗೂ ಅಧಿಕಾರದ ವಿಸ್ತರಣೆ ಇವು ಬ್ರಿಟಿಷರಿಗಿದ್ದಂತ ಮುಖ್ಯ ಉದ್ದೇಶಗಳು. ಬ್ರಿಟಿಷರ ಆಡಳಿತದ ಕಾಲಾವಧಿಯೇ ವಸಾಹತು ಕಾಲವೆಂದು ಅರ್ಥೈಸ ಲಾಗಿದೆ. ಬ್ರಿಟಿಷ್ ಅಧಿಕಾರಿಗಳು ಎಲ್ಲಿಂದರಲ್ಲಿ ಸ್ಮಾರಕಗಳನ್ನು ನಿರ್ಮಿಸಲಿಲ್ಲ. ಅಂದರೆ ತಮಗೆ ಯೋಗ್ಯ ಪರಿಸರ, ಮೂಲಭೂತ ಸೌಕರ್ಯ, ಗೌಪ್ಯ ಸಭೆ ನಡೆಸಲು ಸ್ಥಳದ ಆಯ್ಕೆ, ಗಲಾಟೆ, ಪ್ರತಿರೋಧ ತಪ್ಪಿಸಿಕೊಳ್ಳಲು ತಮಗೆ ರಕ್ಷಣೆ ಒದಗಿಸುವ ಪ್ರದೇಶಗಳಲ್ಲಿ ಅದು ತಮಗೆ ಯೋಗ್ಯವಾಗುವ ರೀತಿಯಲ್ಲಿ ಸ್ಮಾರಕಗಳನ್ನು ನಿರ್ಮಿಸಿದರು. ಅದರಂತೆ ಈಗಾಗಲೇ ಸ್ಥಳೀಯವಾಗಿ ನಿರ್ಮಾಣ ಗೊಂಡಿರುವ ಪ್ರಾಚೀನ ಸ್ಮಾರಕಗಳು, ದೇವಾಲಯಗಳು, ಮೂರ್ತಿಶಿಲ್ಪಗಳು, ಪ್ರಾಚ್ಯಾವಶೇಷಗಳುನ್ನು ಸಂರಕ್ಷಿಸಿ ಕಾಪಾಡುವ ಕೆಲಸಕಾರ್ಯವನ್ನು ಕೂಡಾ ಶಿರಸಾವಹಿಸಿ ಮಾಡಿದರು. ಇದರಿಂದ ಬ್ರಿಟಿಷರ ಈ ಮಹತ್ವದ ಕೆಲಸದಿಂದಾಗಿ ಪುರಾತನ ಸ್ಮಾರಕಗಳು ಇಂದಿಗೂ ಸಹ ನೋಡುವ ಭಾಗ್ಯಶಾಲಿಗಳಾಗಿದ್ದೇವೆ.

ವಸಾಹತು ಕಾಲ ಅಥವಾ ವಸಾಹತುಶಾಹಿ ಎಂದರೆ ಬ್ರಿಟಿಷರು ಭಾರತದ ಮೇಲೆ ಹಿಡಿತ ಸಾಧಿಸಿ ತಮ್ಮ ಬೇಕು ಬೇಡಿಕೆಗಳ ಪೂರೈಕೆಗಾಗಿ ನೆಲೆನಿಂತು ಆಡಳಿತ ಸಾಗಿಸುವ ನೀತಿಗೆ ಸರಳ ಅರ್ಥದಲ್ಲಿ ವಸಾಹತುಶಾಹಿ ಎಂದು ಕರೆಯಬಹುದು. ಬ್ರಿಟಿಷರು ಭಾರತಕ್ಕೆ ಕೇವಲ ವ್ಯಾಪಾರಕ್ಕಾಗಿ ಬಂದು ಇಲ್ಲೇ ನೆಲೆ ನಿಂತು ಆರ್ಥಿಕ, ರಾಜಕೀಯ ಪ್ರಬಲ ಶಕ್ತಿಗಳಾಗಿ ರೂಪುಗೊಂಡು ದರ್ಪದಿಂದ ಆಡಳಿತವನ್ನು ನಡೆಸಿದರು. ತಮಗೆ ಅನುಕೂಲಕರ ಪ್ರದೇಶಗಳಿಗೆ ತಲುಪಲು ರಸ್ತೆ, ರೈಲು ಮಾರ್ಗ ಪ್ರಾರಂಭಿಸಿದರು. ತಾವು ನೆಲೆಸಿರುವ ಸ್ಥಳಗಳಲ್ಲಿ ಅನೇಕ ರೀತಿಯ ಸ್ಮಾರಕಗಳನ್ನು ಯುರೋಪ ಶೈಲಿ ಹಾಗೂ ಭಾರತ ಯುರೋಪ ಮಿಶ್ರಿತ ಶೈಲಿಯಲ್ಲಿ ಸ್ಮಾರಕಗಳನ್ನು ನಿರ್ಮಿಸಿದರು. ವ್ಯಾಪಾರ ವಹಿವಾಟು ನಡೆಸಲು ವ್ಯಾಪಾರ ಆಯಕಟ್ಟಿನ ಪ್ರದೇಶಗಳಾದವು. ಆಡಳಿತಕ್ಕಾಗಿ ಆಡಳಿತ ಭವನ, ಕಟ್ಟಡಗಳು, ಪ್ರಾರ್ಥನೆಗಾಗಿ ಕ್ರೈಸ್ತ ಚರ್ಚ್‌ಗಳು, ಅಧಿಕಾರಿಗಳ ವಸತಿಗಾಗಿ ನಿರೀಕ್ಷಣಾ ಬಂಗಲೆ, ರಸ್ತೆ, ರೈಲು ಸಂಪರ್ಕದ ಅಡಚಣೆ ಮಾಡುತ್ತಿದ್ದ ನದಿ, ಹಳ್ಳಕೊಳ್ಳಗಳಿಂದ ಸುಗಮ ಸಂಚಾರಕ್ಕೆ ಸೇತುವೆಗಳು, ಶಿಕ್ಷಣಕ್ಕಾಗಿ ಶಾಲೆಗಳು, ಆರೋಗ್ಯ ತಪಾಸಣೆಗಾಗಿ ಆಸ್ಪತ್ರೆ ಇತ್ಯಾದಿ ಸ್ಮಾರಕಗಳ ಅಥವಾ ಕಟ್ಟಡಗಳನ್ನು ಬ್ರಿಟಿಷರು ತಮಗೆ ಅನುಕೂಲಕರವಾದ ಪ್ರದೇಶಗಳಲ್ಲಿ ನಿರ್ಮಿಸಿದರು.

ಯುರೋಪಿಯನ್ನರಾದ ಬ್ರಿಟಿಷರು ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರ ಭಾರತಕ್ಕೆ ವ್ಯಾಪಾರಕ್ಕಾಗಿ ಬಂದು ಇಲ್ಲಿಯೇ ಕೈಗಾರಿಕಾ ಕಾರ್ಖಾನೆಗಳನ್ನು ಸ್ಥಾಪಿಸಿ ಇಲ್ಲಿ ಸಿದ್ಧಪಡಿಸಿದ ವಸ್ತುಗಳಿಗೆ ವ್ಯಾಪಾರ ವಹಿವಾಟಿಗಾಗಿ ಸ್ಪರ್ಧೆಯು ಏರ್ಪಟ್ಟಿತು. ಈ ಸೂಕ್ತ ಸಮಯದಲ್ಲಿ ಕ್ರೈಸ್ತ ಮಿಷನರಿಗಳು ಗೋವಾ ಪ್ರದೇಶವನ್ನು ಪ್ರಮುಖ ಧಾರ್ಮಿಕ ಕೇಂದ್ರವನ್ನಾಗಿಸಿಕೊಂಡು ಭಾರತದಾದ್ಯಂತ ಕ್ರೈಸ್ತಧರ್ಮವನ್ನು ಪ್ರಚಾರ ಮಾಡಲು ಆರಂಭಿಸಿದರು. ಈ ಸಮಯದಲ್ಲಿ ಬಾಗಲಕೋಟೆ ಜಿಲ್ಲೆಯ ಗುಳೇದಗುಡ್ಡ, ಕಟಗಿನಹಳ್ಳಿ, ಆಸಂಗಿ, ಸುಮಡ್ಡಿ ಪ್ರದೇಶಗಳಿಗೆ ವೈಗ್ಲೆ ಬಾಸೆಲ್ ಮಿಷನ್ ಕ್ರೈಸ್ತ ಮಿಷನರಿಯ ಪ್ರಚಾರಕನಾಗಿ ಜಿಲ್ಲೆಗೆ ಆಗಮಿಸಿದನು. ಆ ಸಮಯದಲ್ಲಿ ಈ ಪ್ರದೇಶಗಳಲ್ಲಿ ಕ್ರೈಸ್ತಧರ್ಮದ ಪ್ರಸಾರ ಮಾಡುತ್ತಾ ಅಲ್ಲಲ್ಲಿ ಏಸುವಿನ ಹೆಸರಿನ ಮೇಲೆ ಪ್ರಾರ್ಥನೆಯನ್ನು ಮಾಡಿ ಜನರ ಮನಸ್ಸನ್ನು ಗೆದ್ದನು.

ಆದಿಲ್‌ಶಾಹಿಯ ಕಾಲದಲ್ಲಿ ಬಾಗಲಕೋಟೆಯಲ್ಲಿ ಕೈಗಾರಿಕೆ ಪ್ರಮುಖ ಉದ್ಯಮವಾಗಿತ್ತು. ಬಾದಾಮಿಯ ಬಳಿ ಕಬ್ಬಿಣ ತಯಾರಿಸುವ ಕಾರ್ಖಾನೆಯಿತ್ತು. ೧೮೯೫ರಲ್ಲಿ ಹುನಗುಂದದಲ್ಲಿ ಹತ್ತಿ ಜನ್ನಿಂಗ್ ಕಾರ್ಖಾನೆ ಪ್ರಾರಂಭವಾಯಿತು. ೧೯೦೮ರಲ್ಲಿ ಬಾಗಲಕೋಟೆಯಲ್ಲಿ ಸೃಷ್ಟಿ ಸರ್ವೋತ್ತೇಜ ಮಂಡಲ ಎಂಬ ಸಂಸ್ಥೆಯನ್ನು ಜಯರಾಮ ನರಗುಂದ, ಗೋವಿಂದಭಟ್ಟ ಮುಂತಾದವರು ಸ್ಥಾಪಿಸಿ ರೋಣ ತಾಲ್ಲೂಕಿನ ಮೆಣಸಗಿಯಲ್ಲಿ ದೇಶೀಯ ಸಕ್ಕರೆ ಕಾರ್ಖಾನೆ ಪ್ರಾರಂಭಿಸಿದರು. ಆದರೆ ಆ ಸಂಸ್ಥೆ ಹೆಚ್ಚು ಕಾಲ ಮುಂದುವರೆಯಲಿಲ್ಲ.[೪] ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ ಈ ಉದ್ದಿಮೆ ಮತ್ತಷ್ಟು ಅಭಿವೃದ್ಧಿಯತ್ತ ಸಾಗಿತು. ಅದರಂತೆ ಬಾಗಲಕೋಟೆ ಜಿಲ್ಲೆಯ ಪ್ರಮುಖವಾಗಿ ಹತ್ತಿ ಬೆಳೆಯುವ ತಾಲೂಕುಗಳೆಂದರೆ ಹುನಗುಂದ(೧೯೧೮ ಹೆಕ್ಟರ್) ಹಾಗೂ ಜಮಖಂಡಿ(೨೯೮೯ ಹೆಕ್ಟರ್). ಹುನಗುಂದಲ್ಲಿ ೧೮೯೫ರಲ್ಲಿಯೇ ಹತ್ತಿ ಜಿನ್ನಿಂಗ್ ಕಾರ್ಖಾನೆ ಪ್ರಾರಂಭವಾಯಿತು. ಜಿಲ್ಲೆಯ ಹತ್ತಿ ಗಿರಣಿಗಳಲ್ಲಿ ಪ್ರಮುಖವಾದು ಬಾಗಲಕೋಟೆ ಕೋ-ಆಪರೇಟಿವ್ ಸ್ಪಿನ್ನಿಂಗ್ ಮಿಲ್ಸ್ ಹಾಗೂ ರಬಕವಿ ಬನಹಟ್ಟಿ ಸಹಕಾರಿ ಗಿರಣಿ ನಿಯಮಿತ, ಬನಹಟ್ಟಿಯನ್ನು ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಕ್ಯಾಂಪಬೆಲ್ ವರ್ಣಿಸಿದ್ದಾನೆ.[೫] ಬ್ರಿಟಿಷರು ಈ ಭಾಗದಲ್ಲಿ ಹತ್ತಿ ಬೆಳೆಯುವ ಪ್ರಕ್ರಿಯೆಯ ಉದ್ದಿಮೆಕ್ಕೆ ನೂತನ ಸ್ಪರ್ಶ ನೀಡಿದರು. ಇದರಿಂದ ಆರ್ಥಿಕತೆಯ ಕ್ರೂಡೀಕರಣ ವಾಗುವುದನ್ನು ಗಮನಿಸಿದ ಬ್ರಿಟಿಷರು ಇಲ್ಲಿ ಮೊಕ್ಕಾಂ ಹೂಡಲು ಸಹಾಯವಾಯಿತು.

ಭಾರತದಲ್ಲಿ ನೆಲೆಯೂರಿದ್ದ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಶೋಷಣೆ, ದಬ್ಬಾಳಿಕೆಯ ಆಗರವಾಗಿತ್ತು. ಇದನ್ನು ಗಮನಿಸಿದ ಬ್ರಿಟನ್ನಿನ ಮಹಾರಾಣಿ ವಿಕ್ಟೋರಿಯಾ ಕ್ರಿ.ಶ.೧೮೫೮ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ರದ್ದುಗೊಳಿಸಿ, ಭಾರತದ

ಆಡಳಿತವನ್ನು ಇಂಗ್ಲೆಂಡಿನ ಚಕ್ರವರ್ತಿಗೆ ಹಸ್ತಾಂತರಿಸಲಾಯಿತು. ಈ ಮಹತ್ವದ ಬೆಳವಣಿಗೆಯಿಂದ ಬ್ರಿಟಿಷರು ತಮ್ಮ ನೆಲೆಯನ್ನು ಭಾರತದಲ್ಲಿ ಸುಭದ್ರಗೊಳಿಸಿ ಭಾರತೀಯ ಕಲಾಪ್ರಕಾರ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ನೂತನ ಪ್ರಭಾವವನ್ನು ಯುರೋಪಿನ ಶೈಲಿಯು ಅಜರಾಮರವಾಗಿಸಿತು. ೧೯ನೆಯ ಶತಮಾನದಲ್ಲಿ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿಯೂ ಮಹತ್ವದ ಪ್ರಭಾವದ ಪ್ರತಿಫಲವಾಗಿ ಯುರೋಪಿನ ಪುರಾತನ ಶೈಲಿಗಳಾದ ಗಾಥಿಕ್ ಅಥವಾ ಗೋಥಿಕ್ ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳು ದೇಶಿ ಶೈಲಿಯನ್ನು ಸಂಮಿಶ್ರಣಗೊಳಿಸಿ ಇಂಡೋ–ಯುರೋಪ ವಾಸ್ತುಶೈಲಿಯು ಬಳಕೆಗೆ ಬರತೊಡಗಿತು. ಪಾಶ್ಚಾತ್ಯರ ಕಲಾ ಶೈಲಿಗಳಲ್ಲಿ ಆಡಳಿತಾತ್ಮಕ ಕಟ್ಟಡಗಳು, ರಕ್ಷಣಾ ಕಟ್ಟಡಗಳು, ಧಾರ್ಮಿಕ ಕಟ್ಟಡಗಳು, ಶೈಕ್ಷಣಿಕ ಸಂಸ್ಥೆಗಳು ಮತ್ತು ಸಾರ್ವಜನಿಕ ಕಟ್ಟಡಗಳು ಅನುಕೂಲಕರ ಪ್ರದೇಶಗಳಲ್ಲಿ ನಿರ್ಮಾಣವಾಗತೊಡಗಿದವು. ಇದಕ್ಕೆ ಬಹಳ ಮುಖ್ಯ ಕಾರಣವೆನೆಂದರೆ ಕಟ್ಟಡಗಳ ವಿನ್ಯಾಸಕಾರರು ಐರೋಪ್ಯರಾಗಿದ್ದರು. ಐರೋಪ್ಯದ ಇಂಜನಿಯರುಗಳು ನೀಲನಕ್ಷೆ ಮತ್ತು ಕಟ್ಟಡಗಳ ರಚನೆ, ವಿನ್ಯಾಸವನ್ನು ಯುರೋಪಿಯನ್ ಶೈಲಿಯಲ್ಲಿ ತಯಾರಿಸುತ್ತಿದ್ದರು.

ವಸಾಹತು ಕಾಲದಲ್ಲಿ ಅಂದರೆ ವಸಾಹತುಶಾಹಿ ಪ್ರಭುತ್ವದ ವಿಸ್ತರಣೆಯಲ್ಲಿ ಕಟ್ಟಡಗಳನ್ನು ಯುರೋಪಿಯನ್ ಶೈಲಿಗಳಲ್ಲಿ ವಿನ್ಯಾಸಗೊಳಿಸಿ, ವಸಾಹತು ಶೈಲಿಯ ಮಾದರಿಯಲ್ಲಿ ನಿರ್ಮಿಸುವುದು ವಸಹಾತುಶಾಹಿಯ ವಿಸ್ತರಣೆಯ ಸಂಕೇತವಾಗಿದೆ.[೬] ದಿನಕಳೆದಂತೆ ಪಾಶ್ಚಾತ್ಯ ಕಲಾಶೈಲಿಯ ಗುಂಗಿನಿಂದ ಕ್ರಮೇಣವಾಗಿ ಹೊರಬಂದು ಮತ್ತೆ ದೇಶಿಯ, ಕಲಾಶೈಲಿಯ ಕಟ್ಟಡಗಳನ್ನು ನಿರ್ಮಿಸುವ ಬಯಕೆ ಬಂದಿತಾದರೂ ಸಹ ಕೆಲವೊಂದು ಸಾರಿ ಮತ್ತೆ ಯುರೋಪ ಮತ್ತು ಭಾರತೀಯ ಸಂಮ್ಮಿಶ್ರ ಶೈಲಿಯಲ್ಲಿ ಕಟ್ಟಡಗಳು ನಿರ್ಮಾಣವಾದವು. ಇಂತಹ ಸಂದಿಗ್ಧ ಸಮಯದಲ್ಲಿ ನಿರ್ಮಾಣಗೊಂಡ ಕಟ್ಟಡಗಳು ಸಂಪೂರ್ಣವಾಗಿ ಹಿಂದೂ ಶೈಲಿಯಲ್ಲಾಗಲಿ, ಪೂರ್ಣವಾಗಿ ಮಹಮ್ಮದೀಯ ಶೈಲಿಯಲ್ಲಾಗಲಿ ಅಥವಾ ಯುರೋಪಿಯನ್ ಶೈಲಿಯಲ್ಲಾಗಲಿ ಕಟ್ಟುವುದು ಕಾಲದ ವಿರುದ್ಧ, ದೇಶದ ವಿರುದ್ಧಗಳೆಂಬ ದೋಷಕ್ಕೆ ಕಾರಣ ವಾಗುವುದೆಂಬ ಕಾರಣದಿಂದ ಇವೆಲ್ಲವನ್ನು ಸಮನ್ವಯಿಸಿ 'ಆಧುನಿಕ ಶೈಲಿ' ಎಂದು ಕರೆಯ ಲಾಯಿತು.[೭] ಈ ಆಧುನಿಕ ಅಥವಾ ಸಮಿಶ್ರ ಶೈಲಿಯ ಹಲವಾರು ಕಟ್ಟಡಗಳು ಬಾಗಲಕೋಟೆ ಜಿಲ್ಲೆಯಲ್ಲಿ ಕೆಲವು ಪ್ರದೇಶಗಳಲ್ಲಿ ಇಂದಿಗೂ ಕಾರ್ಯನಿರ್ವಹಿಸುತ್ತವೆ. ಅದರಂತೆ ಕೆಲವು ಕಟ್ಟಡಗಳ ಜೀರ್ಣೋದ್ಧಾರ ಗೊಂಡು ನೂತನವಾಗಿ ಕೆಲವೊಂದು ಕಟ್ಟಡಗಳು ದಿನದಿಂದ ದಿನಕ್ಕೆ ಅವಸಾನದತ್ತ ಭಾರವಾದ ದಾಪುಗಾಲನ್ನಿಡುತ್ತಿವೆ. ಹಾಗಾಗಿ ನಶಿಸುತ್ತಿರುವ ವಸಾಹತು ಕಟ್ಟಡಗಳಿಗೆ ಜೀರ್ಣೋದ್ಧಾರದ ಕಾಯಕಲ್ಪ, ಆಧುನಿಕ ಸ್ಪರ್ಶದ ಕೆಲಸ ನಡೆಯವುದು ಅವಶ್ಯಕವಾಗಿದೆ.

ಮಾನವ ತನ್ನ ವಾಸಕ್ಕಾಗಿ ಕಟ್ಟಿಕೊಂಡಿದ್ದು ಮನೆ, ವಸತಿ, ಗೃಹವಾಸ್ತುವಾಯಿತು. ತನ್ನ ಇಚ್ಚೆಗನುಸಾರವಾಗಿ ಧಾರ್ಮಿಕ ನಂಬಿಕೆಗನುಗುಣವಾಗಿ ಕಟ್ಟಿದ್ದು ದೇವಾಲಯ ವಾಸ್ತು ಅಥವಾ ಧಾರ್ಮಿಕ ವಾಸ್ತುಶಿಲ್ಪವೆಂದು ಪ್ರಸಿದ್ಧಿಯಾಯಿತು. ಆದರೆ ಜಗತ್ತಿನಲ್ಲಿ ಸಾವಿರಾರು ಮತಧರ್ಮಗಳಿವೆ. ಅವುಗಳಿಗಾಗಿ ಪ್ರತ್ಯೇಕ ವಾಸ್ತು ಹೆಸರಿನಿಂದಲೇ ಗುರುತಿಸಿ ನಿರ್ಮಿಸಲಾಗಿದೆ. ಅಂದರೆ ಬೌದ್ಧರು–ಚೈತ್ಯಗೃಹವೆಂದು, ಹಿಂದೂಗಳು–ದೇವಾಲಯವೆಂದು, ಜೈನರು–ಬಸದಿವೆಂದು, ಮುಸ್ಲಿಂರು– ಮಸೀದಿವೆಂದು ಹಾಗೂ ಕ್ರೈಸ್ತರು–ಚರ್ಚ್‌ವೆಂದು ಹಾಗೂ ಇತರ ಮತದವರು ತಮಗೆ ಅನುಕೂಲಕರವಾಗುವ ರೀತಿಯಲ್ಲಿ ಕಟ್ಟಡಗಳನ್ನು ನಿರ್ಮಿಸಿಕೊಂಡರು. ಇವೆಲ್ಲಾ ವಾಸ್ತು ರಚನೆಗಳು ಪ್ರಕೃತಿಗೆ ಹೊಂದಿಕೊಂಡು ಸಮತೋಲನದಲ್ಲಿ ನಿರ್ಮಾಣಗೊಂಡಿವೆ.

೧೮ ಮತ್ತು ೧೯ನೆಯ ಶತಮಾನದಲ್ಲಿ ಮುಂಬೈ ಕರ್ನಾಟಕ ಪ್ರಾಂತ್ಯದಲ್ಲಿ ವಸಾಹತು ಕಾಲದ ಸ್ಮಾರಕಗಳು ಅಥವಾ ಕಟ್ಟಡಗಳ ನಿರ್ಮಾಣದ ಕಾರ್ಯ ಬಾರಿ ಶರವೇಗದಲ್ಲಿ ಜರುಗಿತು. ಬೆಳಗಾವಿ, ಧಾರವಾಡ, ವಿಜಯಪುರ, ಬಾಗಲಕೋಟೆ ಇತ್ಯಾದಿ ಜಿಲ್ಲೆಗಳಲ್ಲಿ ಬ್ರಿಟಿಷರ ಆಡಳಿತ ಸಂಪೂರ್ಣವಾಗಿ ಭದ್ರವಾಯಿತು. ಈ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ನಿರ್ಮಾಣ ಗೊಂಡಿರುವ ವಸಾಹತು ಕಾಲದ ಸ್ಮಾರಕಗಳು ಅಥವಾ ಕಟ್ಟಡಗಳ ರಚನಾ ವಿನ್ಯಾಸ ನಿರ್ಮಿಸಲು ಮೂಲ ಉದ್ದೇಶ, ಬಳಸಿರುವ ಕಚ್ಚಾ ಸಾಮಗ್ರಿಗಳು, ತಂತ್ರಜ್ಞರು, ಶ್ರಮಿಕರು ಹಾಗೂ ಪ್ರಸ್ತುತದಲ್ಲಿ ವಸಾಹತು ಕಟ್ಟಡಗಳಿಂದ ಜನಸಾಮಾನ್ಯರಿಗೆ ಏನು ಉಪಯೋಗ?, ಕಟ್ಟಡಗಳ ವಿಸ್ಮಯವಾದ ತಾಂತ್ರಿಕತೆ ಇತ್ಯಾದಿ ಅಂಶಗಳನ್ನು ಗಮನದಲ್ಲಿಟ್ಟು ಕೊಂಡು ಸ್ಥಳೀಯರಿಂದ ಮಾಹಿತಿ ಸಂಗ್ರಹಿಸಲು ಕ್ಷೇತ್ರಕಾರ್ಯ ಕೈಗೊಂಡು, ಆನುಷಂಗಿಕ ಆಕರಗಳಿಂದ ತಲಸ್ಪರ್ಶಿಯವಾಗಿ ವಿಭಿನ್ನ ದೃಷ್ಟಿಕೋನ ಗಳಿಂದ ಪರಿಚಯ ಮಾಡಿಕೊಡುವುದರ ಜೊತೆಗೆ ಚಾರಿತ್ರಿಕ ಅಂಶಗಳನ್ನು ಅಧ್ಯಯನದಲ್ಲಿ ದಾಖಲಿಸಲು ಸಾಧ್ಯವಾದಷ್ಟು ಪ್ರಯತ್ನಿಸಲಾಗಿದೆ. ಇನ್ನೂ ಹಲವಾರು ರೀತಿಯ ವಿಭಿನ್ನ ನೆಲೆಯಲ್ಲಿ ವಸಾಹತು ಕಾಲದ ಸ್ಮಾರಕಗಳ ಕುರಿತು ಅಧ್ಯಯನಿಸುವುದು ಸಹ ಅವಶ್ಯಕತೆವಿದೆ ಎಂಬ ಅಭಿಪ್ರಾಯವನ್ನು ಸಹ ವ್ಯಕ್ತಪಡಿಸುತ್ತೇನೆ.

## ೧.೧. ಅಧ್ಯಯನದ ಉದ್ದೇಶ

ಬಾಗಲಕೋಟೆ ಜಿಲ್ಲೆಯ ಕುರಿತಂತೆ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುವಂತಹ ಕೆಲವು ಗ್ರಂಥಗಳು ಬಿಡಿಯಾದ ಲೇಖನಗಳು, ಸಂಶೋಧನ ಕಿರುಪ್ರಬಂಧಗಳು ಪ್ರಕಟವಾಗಿವೆ. ಆದರೆ ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳಾದ ಚರ್ಚ್, ಸಮಾಧಿ ಸ್ಮಾರಕ, ಅಣೆಕಟ್ಟು, ಸೇತುವೆ, ಆಸ್ಪತ್ರೆ, ನಿರೀಕ್ಷಣಾ ಮಂದಿರ, ರೈಲ್ವೆ ಸೇತುವೆ, ಶಾಲೆ, ಅನಾಥಾಶ್ರಮ, ಅಂಚೆ ಕಚೇರಿ, ಬ್ರಿಟಿಷರ ವಸತಿಗೃಹ,

ರೈಲ್ವೆ ನಿಲ್ದಾಣ, ಸೆರೆಮನೆ, ನ್ಯಾಯಾಲಯ ಇತ್ಯಾದಿಗಳನ್ನು ಗಮನದಲ್ಲಿಟ್ಟುಕೊಂಡು ಇವುಗಳ ಬೆಳವಣಿಗೆಯನ್ನು ಪೂರ್ಣ ಪ್ರಮಾಣದಲ್ಲಿ ಚಿತ್ರಿಸುವ ಮತ್ತು ದಾಖಲಿಸುವ ಪ್ರಯತ್ನವು ಸಮರ್ಪಕವಾಗಿ ನಡೆದಿಲ್ಲ. ಹಾಗಾಗಿ ಈ ಮೇಲಿನ ವಸಾಹತು ಕಾಲದ ಸ್ಮಾರಕಗಳನ್ನು ದಾಖಲಿಸುವ, ಚಾರಿತ್ರಿಕ ಹಾಗೂ ಸಾಂಸ್ಕೃತಿಕವಾಗಿ ಅಧ್ಯಯನಿಸುವ ಉದ್ದೇಶದಿಂದ "ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು" ಎಂಬ ವಿಷಯವನ್ನು ಆಯ್ದುಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

ಭಾರತದಲ್ಲಿ ಬ್ರಿಟಿಷರ ಆಡಳಿತಾವಧಿಯಲ್ಲಿ ನಿರ್ಮಾಣವಾದಂತಹ ವಸಾಹತು ಕಾಲದ ಅನೇಕ ಸ್ಮಾರಕಗಳು ಅಧ್ಯಯನದಿಂದ ಹಾಗೂ ಸಂಶೋಧನೆಯಿಂದ ನಿರ್ಲಕ್ಷಿಸಲ್ಪಟ್ಟಿವೆ. ಏಕೆಂದರೆ ೧೯೪೭ರ ವರೆಗೂ ಬ್ರಿಟಿಷರು ಭಾರತೀಯರನ್ನು ಗುಲಾಮರಂತೆ ನಡೆಸಿಕೊಂಡು ಆಳ್ವಿಕೆ ಮಾಡಿದ್ದಾರೆ ಎಂಬುದು ಕೆಲವು ಇತಿಹಾಸಕಾರರ ಅಭಿಪ್ರಾಯವಾಗಿದೆ. ಇದರಿಂದ ಭಾರತೀಯರಲ್ಲಿ ಬ್ರಿಟಿಷರ ಬಗ್ಗೆ ವಿರೋಧದ ಹಿನ್ನೆಲೆಯು ಇದಕ್ಕೆ ಕಾರಣವಾಗಿರಬಹುದು. ಹಾಗಾಗಿ ಬ್ರಿಟಿಷರು ನಿರ್ಮಿಸಿದಂತಹ ವಸಾಹತು ಕಾಲದ ಸ್ಮಾರಕಗಳು ಅನಾಥವಾಗಿವೆ. ಬ್ರಿಟಿಷರಿಂದ ಭಾರತೀಯರ ಮೇಲೆ ಗುಲಾಮಗಿರಿ ಪದ್ಧತಿ ಇದ್ದಿತ್ತು ಎಂಬುದರ ಕುರಿತು ಈಗಾಗಲೇ ಹಲವಾರು ಚರ್ಚೆಗಳು ನಡೆದು ಹೋಗಿವೆ. ಆದರೆ ಪ್ರಸ್ತುತದಲ್ಲಿ ಈ ವಿಷಯವು ಇನ್ನೂ ಸೂಕ್ಷ್ಮವಾಗಿ ಗ್ರಹಿಸಿ ಚರ್ಚಿಸಬೇಕಾದ ಅವಶ್ಯಕತೆಯಿದೆ ಎಂಬ ಅಂಶವು ಇಲ್ಲಿ ಮಹತ್ವದ್ದಾಗಿದೆ. ಸ್ಥಳೀಯರು ಬ್ರಿಟಿಷರನ್ನು 'ಅಂಗ್ರೇಜಿಯರು', ಕೆಂಪು ಮಾರಿಯವರು ಎಂದು ಕರೆಯುತ್ತಿದುದ್ದು ಅವರ ಮೇಲಿನ ಸಿಟ್ಟಿನಿಂದಾಗಿಯೇ ಇರಬಹುದು. ಬ್ರಿಟಿಷರು ಕೆಲವು ಸ್ಮಾರಕಗಳನ್ನು ತಮಗಾಗಿ ತಮ್ಮ ಅನುಕೂಲಕ್ಕಾಗಿ ನಿರ್ಮಿಸಿಕೊಂಡರೆ, ಕೆಲವು ಸ್ಮಾರಕಗಳನ್ನು ಸಾರ್ವಜನಿಕರ ಅನುಕೂಲಕ್ಕಾಗಿ ನಿರ್ಮಿಸಿದ್ದು ಇಲ್ಲಿ ಗಮನಾರ್ಹವಾದದ್ದು. ಬ್ರಿಟಿಷರು ನಿರ್ಮಿಸಿದಂತಹ ಸ್ಮಾರಕಗಳು ಉತ್ತಮ ಗುಣಮಟ್ಟ ಹೊಂದಿದ್ದು, ಪರಿಸರಕ್ಕೆ ತಕ್ಕಂತೆ ಹೊಂದಾಣಿಕೆಯಾಗಿದೆ. ಜನರಿಗೆ ಸುವ್ಯವಸ್ಥಿತ ಆಡಳಿತ ನೀಡುವುದು, ಶಿಕ್ಷಣ, ಸಾರಿಗೆ, ಆರೋಗ್ಯ, ಅಂಚೆ ಕಚೇರಿ ಸೌಕರ್ಯ, ಸಾರಿಗೆ ಸಂಪರ್ಕ ಸೌಕರ್ಯ ಇತ್ಯಾದಿ ಸೌಲಭ್ಯಗಳನ್ನು ಜನಸಮುದಾಯಕ್ಕೆ ನೀಡುವುದರ ಸಲುವಾಗಿ ಬ್ರಿಟಿಷರು ವಸಾಹತು ಕಾಲದಲ್ಲಿ ಹಲವಾರು ಸ್ಮಾರಕಗಳನ್ನು ನಿರ್ಮಾಣ ಮಾಡಿದ್ದಾರೆ. ಜಮಖಂಡಿ ಮತ್ತು ಮುಧೋಳ ಸಂಸ್ಥಾನಿಕರು ಜನಸಮುದಾಯಕ್ಕೆ ಹಲವಾರು ಸೌಲಭ್ಯ ಒದಗಿಸುವ ದೃಷ್ಟಿಕೋನವನ್ನು ಇಟ್ಟುಕೊಂಡು ಹಲವಾರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಅಂತಹ ಸ್ಮಾರಕಗಳ ಕುರಿತು ಅಧ್ಯಯನಿಸಿ, ದಾಖಲಿಸಿ ಜನರಲ್ಲಿ ಸ್ಮಾರಕಗಳ ಕುರಿತು ಜಾಗೃತಿಯನ್ನು ಮೂಡಿಸಿ ಸಂರಕ್ಷಣೆಯನ್ನು ಮಾಡುವುದು ಉದ್ದೇಶವನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಬಾಗಲಕೋಟೆ ಜಿಲ್ಲೆಯಲ್ಲಿ ಕಂಡುಬರುವ ವಸಾಹತು ಕಾಲದ ಪ್ರತಿಯೊಂದು ಸ್ಮಾರಕದ ರಚನೆ, ವಿನ್ಯಾಸ, ಉದ್ದೇಶ, ತಂತ್ರಗಾರಿಕೆ, ಶೈಲಿಯ ಲಕ್ಷಣಳು, ಸ್ಥಿತಿಗತಿ, ಅನುಕೂಲ ಹಾಗೂ ಅನಾನುಕೂಲದ ಕುರಿತು ಕ್ಷೇತ್ರಕಾರ್ಯದ ಮೂಲಕ ಮಾಹತಿಯನ್ನು ಸಂಗ್ರಹಿಸಿ ವಿಶ್ಲೇಷಿಸಿ, ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ವಸಾಹತು ಕಾಲದ ಸ್ಮಾರಕಗಳ ನಿರ್ಮಾಣ, ಬೆಳವಣಿಗೆ, ಚರಿತ್ರೆ ವಾಸ್ತುಶಿಲ್ಪಕಲೆಯ ಲಕ್ಷಣಗಳು, ಸ್ಮಾರಕಗಳ ರಕ್ಷಣೆಗೆ ರೂಪುರೇಶೆಗಳನ್ನು ಹಾಕಲಾಗಿದೆ. ಅದರಂತೆ ಅಲಕ್ಷಿತ ಸ್ಥಳೀಯ ಚರಿತ್ರೆಯನ್ನು ಪುನಃ ಕಟ್ಟಿಕೊಡುವುದರ ಜೊತೆಗೆ ಸ್ಮಾರಕಗಳನ್ನು ಉಳಿಸಿ, ಸಂರಕ್ಷಿಸಿ ಮುಂದಿನ ಯುವ ಜನಾಂಗಕ್ಕೆ ಅಧ್ಯಯನ ಮಾಡಲು ಅವಕಾಶ ಕಲ್ಪಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿಸಿಕೊಂಡು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

ಸ್ಥಳೀಯ ಅಂದರೆ ದೇಶಿ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ವಿದೇಶಿಯ ಯುರೋಪ ಕಲೆ ಮತ್ತು ವಾಸ್ತುಶಿಲ್ಪವು ಹೇಗೆ ಪರಿಣಾಮವನ್ನು ಬೀರಿದೆ. ಅದರಂತೆ ಯುರೋಪ ಕಲೆ ಮತ್ತು ವಾಸ್ತುಶಿಲ್ಪವು ಸ್ಥಳೀಯ ಕಲೆ ಮತ್ತು ವಾಸ್ತುಶಿಲ್ಪದೊಂದಿಗೆ ಸಮ್ಮಿಶ್ರಣಗೊಳ್ಳಲು ಕಾರಣಗಳೇನು? ಇದಕ್ಕೆ ಸಂಸ್ಕೃತಿಯು ಯಾವ ಯಾವ ಬಗೆಯಲ್ಲಿ ಬದಲಾವಣೆಯನ್ನು ಹೊಂದಿತ್ತು. ಅದರಿಂದ ವಸಾಹತು ಕಾಲದ ಸಂದರ್ಭದಲ್ಲಿ ಹೇಗೆ ಪ್ರಭಾವವನ್ನು ಬೀರಿತು ಎಂಬ ಮಹತ್ವದ ವಿಚಾರಗಳನ್ನು ದಾಖಲಿಸಿಕೊಂಡು ಚರ್ಚಿಸಿ, ವಿಶ್ಲೇಷಿಸಲಾಗಿದೆ.

ಭಾರತದಲ್ಲಿ ಬ್ರಿಟಿಷರ ಆಡಳಿತಾವಧಿಯಲ್ಲಿ ಯುರೋಪಿನ ಕಲಾಶೈಲಿಗಳಲ್ಲಿ ಕಟ್ಟಡಗಳು ನಿರ್ಮಾಣಗೊಂಡಿವೆ. ಇದಕ್ಕೆ ದೇಶದಲ್ಲಿ ಪೂರಕವಾದಂತಹ ವಾತಾವರಣ ಮುಖ್ಯ ಕಾರಣವಾಗಿದೆ. ಯುರೋಪ ರಾಷ್ಟ್ರಗಳಲ್ಲಿ ಪ್ರಚಲಿತವಾಗಿದ್ದ ವಾಸ್ತು ಕಲಾ ಶೈಲಿಗಳಾದ ಗಾಥಿಕ್, ಡೋರಿಕ್, ಐನೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳ ಪ್ರಭಾವ ಹಾಗೂ ಸ್ಥಳೀಯವಾಗಿ ದೊರೆಯುವ ಪರಿಕರಗಳ ಜೊತೆಗೆ ಶ್ರಮಿಕರನ್ನು ಬಳಸಿಕೊಂಡು ಯುರೋಪಿನ ಇಂಜನಿಯರುಗಳು ಐರೋಪ್ಯ ಶೈಲಿಯ ಕಟ್ಟಡಗಳ ನಿರ್ಮಾಣ ಮಾಡುವಾಗ ತಂತ್ರಜ್ಞಾನವನ್ನು ಹೇಗೆ ಕಾರ್ಯರೂಪಕ್ಕೆ ತಂದು ಕಟ್ಟಡಗಳನ್ನು ನಿರ್ಮಿಸಿದರು ಎಂಬದುದರ ಕುರಿತು ಕ್ಷೇತ್ರಕಾರ್ಯಾಧಾರಿತವಾಗಿ ಹಾಗೂ ಲಭ್ಯವಿರುವ ಆಕರಗಳಿಂದ ಕ್ರೋಢೀಕರಿಸಿದ ಮಾಹಿತಿಯ ಆಧಾರದ ಮೇಲೆ ಚರ್ಚಿಸಿ ಪ್ರಸ್ತುತ ಅಧ್ಯಯನದಲ್ಲಿ ಸಾಧ್ಯವಾದಷ್ಟು ಪ್ರಯತ್ನಿಸಲಾಗಿದೆ. ಜಿಲ್ಲೆಯಲ್ಲಿ ನಿರ್ಮಾಣವಾದಂತಹ ವಸಾಹತು ಕಾಲದ ಸ್ಮಾರಕಗಳ ರಚನೆ, ವಿನ್ಯಾಸ, ತಲನಕ್ಷೆ ಮಾತ್ರ ಯುರೋಪಿನ ಇಂಜನಿಯರುದ್ದಾಗಿದ್ದು, ಆದರೆ ಇಡಿಯಾದ ಸ್ಮಾರಕಗಳನ್ನು ನಿರ್ಮಿಸಲು ಸ್ಥಳೀಯ ಜನಸಮುದಾಯ, ಶ್ರಮಿಕವರ್ಗದವರನ್ನು ಗುರುತಿಸಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಸಾಮಾನ್ಯವಾಗಿ ಯಾವುದೇ ಒಂದು ಸಂಶೋಧನೆಯು ಸ್ಪಷ್ಟವಾಗಿ ಯಶಸ್ಸು ಕಾಣಬೇಕೆಂದರೆ ಅದಕ್ಕೆ ಒಂದು ನಿರ್ದಿಷ್ಟವಾದ ಚೌಕಟ್ಟು, ವ್ಯಾಪ್ತಿ ಇರುವುದು ಬಹುಮುಖ್ಯವಾದ ಅಂಶವಾಗಿದೆ. ಸಂಶೋಧನೆಗೆ ವ್ಯಾಪ್ತಿಗಳಿಲ್ಲದ ಅಧ್ಯಯನವು ಗೊಂದಲದಗೂಡಾಗಿ ಸಂಶೋಧನೆಯನ್ನು ದಾರಿ ತಪ್ಪಿಸುತ್ತದೆ. ಅಲ್ಲದೇ ಸಂಶೋಧನೆಯು ಯಶಸ್ವಿಯಾಗುವುದು ಸಹ ಅಸಾಧ್ಯವಾದದ್ದು. ಪ್ರಸ್ತುತ "ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು" ಎಂಬ ಶೀರ್ಷಿಕೆಯ ಸಂಶೋಧನೆಯ ವ್ಯಾಪ್ತಿಯು ಬಾಗಲಕೋಟೆ ಜಿಲ್ಲೆಯ ಭೌಗೋಳಿಕ ಪ್ರದೇಶವನ್ನು ಒಳಗೊಂಡಿದೆ.

ಬಾಗಲಕೋಟೆ ಜಿಲ್ಲೆಯ ಆರು ತಾಲೂಕುಗಳಾದ ಬಾಗಲಕೋಟೆ, ಬಾದಾಮಿ, ಬೀಳಗಿ, ಹುನಗುಂದ, ಜಮಖಂಡಿ, ಮುಧೋಳ ಹಾಗೂ ಹೋಬಳಿಗಳು, ಜಿಲ್ಲೆಯ ಗ್ರಾಮಪಂಚಾಯತಿಗಳು ಹಾಗೂ ಗ್ರಾಮ ಪಂಚಾಯಿತಿಗಳ ಆಡಳಿತ ವ್ಯಾಪ್ತಿಗೊಳಪಟ್ಟ ಹಳ್ಳಿಗಳನ್ನು ಕೂಡಿಕೊಂಡು ಅಖಂಡ ಬಾಗಲಕೋಟೆ ಜಿಲ್ಲೆ ಭೌಗೋಳಿಕ ವ್ಯಾಪ್ತಿಗೆ ಸಂಶೋಧನೆಯನ್ನು ಸೀಮಿತಗೊಳಿಸಲಾಗಿದೆ. ಭಾರತಕ್ಕೆ ಬ್ರಿಟಿಷರ ಆಗಮನದ ಕಾಲಘಟ್ಟದಿಂದ ಹಿಡಿದು ೧೯೪೭ರ ವರೆಗಿನ ಕಾಲಘಟ್ಟದವರೆಗೂ ಅಧ್ಯಯನದ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆ. ಇಡಿ ಬಾಗಲಕೋಟೆ ಜಿಲ್ಲೆಯಲ್ಲಿ ಬ್ರಿಟಿಷರು ನಿರ್ಮಿಸಿದ ಸ್ಮಾರಕಗಳಿರುವ ಹಳ್ಳಿ, ಊರು, ಪಟ್ಟಣ, ತಾಲೂಕು, ಜಿಲ್ಲಾ ಕೇಂದ್ರ ಅಂತಹ ಪ್ರದೇಶವನ್ನು ಮಾತ್ರ ಸಂಶೋಧನೆಗೆ ಆಯ್ಕೆ ಮಾಡಿಕೊಂಡು ಅಧ್ಯಯನಿಸಲಾಗಿದೆ. ಬಾಗಲಕೋಟೆ ಜಿಲ್ಲೆಯ ಭೌಗೋಳಿಕ ವ್ಯಾಪ್ತಿಗೆ ಸೀಮಿತಗೊಳಿಸುವುದರ ಜೊತೆಗೆ ಬೇರೆ ಬೇರೆ ಪ್ರದೇಶಗಳಲ್ಲಿ ನಿರ್ಮಾಣವಾದಂತಹ ವಸಾಹತು ಕಾಲದ ಸ್ಮಾರಕಗಳನ್ನು ಸಾಂದರ್ಭಿಕವಾಗಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ಸಮೀಕ್ಷೆ

ಬಾಗಲಕೋಟೆ ಜಿಲ್ಲೆಯ ರಾಜಕೀಯದಲ್ಲಿ ಸಾಂಸ್ಕೃತಿಕ ಇತಿಹಾಸ ಮತ್ತು ಪುರಾತತ್ವ ವಿಷಯಕ್ಕೆ ಸಂಬಂಧಿಸಿದಂತೆ ಇವರೆಗೆ ಹಲವಾರು ಅಧ್ಯಯನಗಳು ನಡೆದಿವೆ. ವಸಾಹತು ಕಾಲದ ಸ್ಮಾರಕಗಳ ಕುರಿತು ವಸ್ತುನಿಷ್ಠವಾದ ಹಾಗೂ ಪ್ರತ್ಯೇಕವಾದ ಅಧ್ಯಯನ ನಡೆದಿಲ್ಲ. ಬಾಗಲಕೋಟೆ ಜಿಲ್ಲೆಯು ವಸಾಹತು ಕಾಲದಲ್ಲಿ ವಿಜಯಪುರ ಜಿಲ್ಲೆಯಲ್ಲಿ ವಿಲೀನಗೊಂಡಿತು. ಈ ವಸಾಹತು ಕಾಲಘಟ್ಟದಲ್ಲಿ 'ಕಲಾದಗಿ'ಯು ಬ್ರಿಟಿಷರ ಆಡಳಿತದ ಮುಖ್ಯ ಕೇಂದ್ರವಾಗಿ ಉಪಠಾಣ್ಯವಾಗಿ ಹಾಗೂ ಕಲೆಕ್ಟರೇಟ್ ಕಚೇರಿಯಾಗಿದ್ದಿತು. ಬಾಗಲಕೋಟೆ ಜಿಲ್ಲೆಯಾಗಿ

೧೯೯೭ ಆಗಸ್ಟ್ ೧೫ರಂದು ರಚನೆಗೊಂಡಿತು. ಅದರಂತೆ ಬಾಗಲಕೋಟೆ ಜಿಲ್ಲೆಯಾಗಿ ಪ್ರತ್ಯೇಕಗೊಂಡ ನಂತರ ಜಿಲ್ಲೆಗೆ ಸಂಬಂಧಿಸಿದ ರಾಜಕೀಯ ಇತಿಹಾಸ ಮತ್ತು ಪುರಾತತ್ವ, ಪ್ರಾಗಿತಿಹಾಸ ಕಾಲದ ನೆಲೆಗಳು, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅಧ್ಯಯನಗಳು, ದೇಶಗತಿಗಳ ಕುರಿತು ಅಧ್ಯಯನಗಳು, ಕೋಟೆ–ಕೊತ್ತಲ, ಸ್ಥಳನಾಮ, ಕಲೆ ಮತ್ತು ವಾಸ್ತುಶಿಲ್ಪ ಕಲೆ, ಮೌಖಿಕ ಚರಿತ್ರೆ, ರಾಜಮನೆತನಗಳ ಇತಿಹಾಸ ಇತ್ಯಾದಿ ವಿಷಯಗಳ ಕುರಿತು ಲೇಖನಗಳು, ಪರಿಚಯಾತ್ಮಕ ಕೃತಿ, ಎಂ.ಫಿಲ್ ಪ್ರಬಂಧ ಮತ್ತು ಪಿಎಚ್.ಡಿ.ಮಹಾಪ್ರಬಂಧ, ಬಿಡಿ ಲೇಖನಗಳು, ಸ್ಮರಣ ಸಂಚಿಕೆಗಳು ಪ್ರಕಟವಾಗಿವೆ. ಅವುಗಳಲ್ಲಿ ಈ ಕೆಳಗಿನವುಗಳನ್ನು ಹೆಸರಿಸಬಹುದು.

**ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧಗಳು**

ಬಾಲಪ್ಪ ಗೂಳಪ್ಪ ಜೋಗಿನ ಅವರ "ಬಾಗಲಕೋಟೆ ಜಿಲ್ಲೆಯ ಸ್ಥಳನಾಮಗಳು", ದಯಾನಂದ ಎಂ.ಯಾವಗಲ ಅವರ "ಬಾಗಲಕೋಟೆ ಪ್ರದೇಶದ ವಾಸ್ತುಶಿಲ್ಪ ಅಧ್ಯಯನ", ಭೀಮನಗೌಡ ಎ.ಪಿ.ಪಾಟೀಲ ಅವರ "ಬಾಗಲಕೋಟೆ ಜಿಲ್ಲೆಯ ರಂಗಪರಂಪರೆಯ ಒಂದು ಅಧ್ಯಯನ", ಸಂಕ್ರಪ್ಪ ಸ.ಮಾದರ ಅವರ "ಬಾಗಲಕೋಟೆ ಜಿಲ್ಲೆ ವಸತಿ ಜಾನಪದ", ಸಂಗಪ್ಪ ಚ.ಕಲ್ಯಾಣಿ ಅವರ "ಬಾಗಲಕೋಟೆ ಜಿಲ್ಲೆಯ ದೇಶಗತಿಗಳು", ಉಮಾದೇವಿ ಅವರ "ಬಾದಾಮಿ ಬನಶಂಕರಿ: ಚಾರಿತ್ರಿಕ ಅಧ್ಯಯನ", ಮಹಾಂತೇಶ ಪಲದಿನ್ನಿ ಅವರ "ಬಾದಾಮಿ ಚಾಲುಕ್ಯರ ಕಾಲದ ಶಿಲ್ಪಗಳು", ಎಸ್.ವಾಯ್, ಪಾವಟೆ ಅವರ "ಬಾಗಲಕೋಟೆ ಪರಿಸರದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅಧ್ಯಯನ", ಆರ್.ಸುಮನ್ ಅವರ "ವಸಾಹತು ಕಾಲಘಟ್ಟದ ಕನ್ನಡ ಭೂ ಪ್ರದೇಶಗಳ ಗ್ಯಾಸೆಟಿಯರ್‌ಗಳ ಚಾರಿತ್ರಿಕ ಅಧ್ಯಯನ", ಶೀಲಾಕಾಂತ ಪತ್ತಾರ ಅವರ "ಬಾದಾಮಿ: ಒಂದು ಸಾಂಸ್ಕೃತಿಕ ಅಧ್ಯಯನ"(ಡಿ.ಲಿಟ್ ಮಹಾಪ್ರಬಂಧ), ಮಂಜುನಾಥ ಪಾಟೀಲ ಅವರ "ವಿಜಾಪುರ ಜಿಲ್ಲೆಯ ರಕ್ಷಣಾ ವಾಸ್ತುಶಿಲ್ಪ", ಸಣ್ಣಪಾಲಯ್ಯ ಬಿ.ಪಿ. ಅವರ "ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ" ಮುನಿರಾಜ ಎಸ್. ಅವರ "ವಸಾಹತು ಕರ್ನಾಟಕದ ಕಂಟೋನ್ಮೆಂಟುಗಳು: ಸಾಮಾಜಿಕ, ಆರ್ಥಿಕ ಹಾಗೂ ಮಿಲಿಟರಿ ನೆಲೆಗಳ ಅಧ್ಯಯನ", ಯಶೋಧ ಪಿ.ಅವರ "ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ(೧೭೯೯–೧೯೪೭)".

ಈ ಮೇಲಿನ ಪಿಎಚ್.ಡಿ.ಮಹಾಪ್ರಬಂಧಗಳು ಬಾಗಲಕೋಟೆ ಜಿಲ್ಲೆಯ ನಿರ್ದಿಷ್ಟ ವಿಷಯ ಮತ್ತು ವಸಾಹತು ಕಾಲದ ಮಹತ್ವದ ವಿಷಯಗಳನ್ನು ಒಳಗೊಂಡಿರುತ್ತವೆ.

**ಅಪ್ರಕಟಿತ ಎಂ.ಫಿಲ್.ಪ್ರಬಂಧಗಳು**

ಬಸವರಾಜ ಕೊ.ಗವಿಮಠ ಅವರ "ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ", ಸಾವಿತ್ರಿ ಎಸ್.ಫಕೀರಣ್ಣನವರ "ಬಾದಾಮಿ ಚಾಲುಕ್ಯರ ಮಾಂಡಲೀಕ ಅರಸರು", ಮಲ್ಲಿಕಾಜುನ ಎಂ.ಹಿರೇಮಠ ಅವರ "ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ", ಆಶಾಬಾಬು ಯಂಕಪ್ಪಗೋಳ ಅವರ "ಬಾಗಲಕೋಟೆ ಜಿಲ್ಲೆಯ ದಲಿತ ಚಳುವಳಿಗಳ ಒಂದು ಅವಲೋಕನ", ಸಚಿನ ಎಸ್.ಕೋಕಟನೂರ ಅವರ "ಜಮಖಂಡಿ ತಾಲೂಕಿನ ದೇವಾಲಯಗಳು", ಯಮನೂರ ಅ.ಹಾಲಿಗೇರಿ ಅವರ "ಬಾದಾಮಿ ತಾಲೂಕಿನ ಹುಲಿಗೆಮ್ಮನಕೊಳ್ಳ: ಸಾಂಸ್ಕೃತಿಕ ಅಧ್ಯಯನ" ಈ ಮೇಲಿನ ಅಪ್ರಕಟಿತ ಎಂ.ಫಿಲ್ ಪ್ರಬಂಧಗಳು ಬಾಗಲಕೋಟೆ ಜಿಲ್ಲೆಗೆ ಸಂಬಂಧಿಸಿದ ಮಾಹಿತಿಯನ್ನು ಒಳಗೊಂಡಿರುತ್ತವೆ.

**ಲೇಖನಗಳು**

ಇತಿಹಾಸ ದರ್ಶನ ಸಂಪುಟ–೩೦ರಲ್ಲಿ ಬಿ.ಜಿ.ಕುಲಕರ್ಣಿ ಅವರ "ಬಾಗಲಕೋಟೆಯ ಮುಳುಗಡೆಯ ಕಟ್ಟಡಗಳು" ಎಂಬ ಲೇಖನ, ಇತಿಹಾಸ ದರ್ಶನ ಸಂಪುಟ–೩೦ರಲ್ಲಿ ಸುಮಂಗಲಾ ಮೇಟಿ ಅವರ "ಮುಚಖಂಡಿ ಐತಿಹಾಸಿಕ ಸೇತುವೆ" ಎಂಬ ಲೇಖನ, ಇತಿಹಾಸ ದರ್ಶನ ಸಂಪುಟ–೩೧ರಲ್ಲಿ ಲೋಕಣ್ಣ ಭಜಂತ್ರಿ ಅವರ "ಗುಳೇದಗುಡ್ಡ ಪರಿಸರದಲ್ಲಿ ವಸಾಹತು ಕಾಲದ ಸ್ಮಾರಕಗಳು" ಎಂಬ ಲೇಖನ. ಇತಿಹಾಸ ದರ್ಶನ ಸಂಪುಟ–೩೨ರಲ್ಲಿ ಲೋಕಣ್ಣ ಭಜಂತ್ರಿ ಅವರ "ಕಲಾದಗಿ ಪರಿಸರದಲ್ಲಿ ವಸಾಹತು ಕಾಲದ ಸ್ಮಾರಕಗಳು" ಎಂಬ ಈ ಮೇಲಿನ ಸಂಶೋಧನಾ ಲೇಖನಗಳು ಬಾಗಲಕೋಟೆ ಜಿಲ್ಲೆಯಲ್ಲಿ ಕೆಲವೊಂದು ವಸಾಹತು ಕಾಲದ ಸ್ಮಾರಕಗಳನ್ನು ಪರಿಚಯಿಸುತ್ತವೆ.

**ಪರಿಚಯಾತ್ಮಕ ಕೃತಿಗಳು ಮತ್ತು ಸ್ಮರಣ ಸಂಚಿಕೆಗಳು**

ವಿಜಯಕುಮಾರ ಕಟಗಿಹಳ್ಳಿಮಠ(ಸಂ) ಅವರ "ಬಾಗಲಕೋಟ ಜಿಲ್ಲಾ ಸಂಸ್ಕೃತಿ', ಆರ್.ಗೋಪಾಲ್ ಅವರ "ಬಾಗಲಕೋಟ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ", ದಯಾನಂದ ಯಾವಗಲ್ಲ ಅವರ "ಬಾಗಲಕೋಟ ಪರಿಸರದ ವಾಸ್ತು–ಶಿಲ್ಪಗಳು", ಅಂಬಳಿಕೆ ಹಿರಿಯಣ್ಣ(ಪ್ರ.ಸಂ.) ಅವರ "ಕನಾಟಕ ಗ್ರಾಮ ಚರಿತ್ರೆ ಕೋಶ, ಬಾಗಲಕೋಟೆ ಸಂಪುಟ ೧ ಮತ್ತು ಸಂಪುಟ ೨", ವಿಜಯಕುಮಾರ ಕಟಗಿಹಳ್ಳಿಮಠ(ಗೌ.ಸಂ) ಅವರ ಬಾಗಡಗೆ–೭೦, ಆರ್.ಮುನಿಸ್ವಾಮಿ ಅವರ "ವಿಜಾಪುರ ಜಿಲ್ಲೆ ಗ್ಯಾಸೆಟಿಯರ್', ವೆಂಕಟರಾಮ್ ರಂಗೋ ಕಟ್ಟಿ ಅವರ "ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳ ಸಹಿತ ಧಾರವಾಡ, ಬೆಳಗಾವಿ, ವಿಜಯಪುರ, ಕಾನಡಾ ಈ ನಾಲ್ಕು ಜಿಲ್ಲೆಗಳದು" ಮುಂಬಯಿ ಇಲಾಖೆಗೆ ಸೇರಿದ

ಕರ್ನಾಟಕ ಭಾಗದ ಗ್ಯಾಸೆಟಿಯರು, ಸೂರ್ಯನಾಥ ಕಾಮತ್ ಅವರ ಬೆಳಗಾವಿ ಜಿಲ್ಲಾ ಗ್ಯಾಸೆಟಿಯರ ಇತ್ಯಾದಿಗಳಾಗಿ ಇಲ್ಲಿ ದಾಖಲಿಸಿದ ಗ್ರಂಥಗಳು ಅಥವಾ ಆಕರಗಳು ಬಾಗಲಕೋಟೆ ಜಿಲ್ಲೆಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಇತರ ಕೆಲವೊಂದು ವಿಷಯಗಳನ್ನು ಪರಿಚಯಿಸುತ್ತವೆ. ಆದರೆ ಇಲ್ಲಿಯವರೆಗೆ ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳಿಗೆ ಸಂಬಂಧಿಸಿದಂತೆ ವ್ಯವಸ್ಥಿತವಾದ ಅಧ್ಯಯನಗಳು ನಡೆದಿರುವುದಿಲ್ಲ ಎಂದು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳಿಗೆ ಸಂಬಂಧಿಸಿದಂತೆ ಅಧ್ಯಯನವನ್ನು ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

## ೧.೪. ಅಧ್ಯಯನದ ವಿಧಾನ

ಸಂಶೋಧನೆಯು ಸುಗಮವಾಗಿ ನಡೆಯಲು ಕ್ರಮಬದ್ಧವಾದ ಅಧ್ಯಯನದ ವಿಧಾನ ಅತಿ ಮುಖ್ಯವಾದುದ್ದಾಗಿದೆ. ಈ ಸಂಶೋಧನಾ ವಿಧಾನವು ಕ್ಷೇತ್ರಕಾರ್ಯಧಾರಿತ ಅಧ್ಯಯನವನ್ನು ಅವಲಂಬಿಸಿದೆ. ಸಂಶೋಧನಾ ವಿಷಯವನ್ನು ಆಯ್ಕೆ ಮಾಡಿಕೊಂಡ ಮೇಲೆ ಮೊದಲಿಗೆ ಬಾಗಲಕೋಟೆ ಜಿಲ್ಲೆಗೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಕುರಿತು ವರದಿಯನ್ನು ಸಿದ್ಧಪಡಿಸಿಕೊಳ್ಳಲಾಯಿತು. ಈಗಾಗಲೇ ನಡೆದಿರುವ ಅಧ್ಯಯನಗಳಲ್ಲಿ ಚಾರಿತ್ರಿಕವಾದ ಅಂಶಗಳ ಜೊತೆಗೆ ಐತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡ ಕೆಲವೊಂದು ಗ್ರಾಮಗಳಲ್ಲಿ ಕಂಡುಬರುವ ಪ್ರಾಗಿತಿಹಾಸ ನೆಲೆಗಳು, ಶಾಸನಗಳು, ದೇವಾಲಯಗಳು, ಕೋಟೆಗಳು ಹಾಗೂ ವಸಾಹತು ಕಾಲದ ಸ್ಮಾರಕಗಳು ಇತರೆ ಪುರಾತತ್ವೀಯ ಅವಶೇಷಗಳನ್ನೊಳಗೊಂಡ ಪಟ್ಟಿಯನ್ನು ಮಾಡಿಕೊಳ್ಳಲಾಯಿತು. ಇದನ್ನು ಹೊರತುಪಡಿಸಿ ಚಾರಿತ್ರಿಕ ಅಂಶಗಳನ್ನೊಳಗೊಂಡ ಗ್ರಾಮಗಳ ಜೊತೆಗೆ ವಸಾಹತು ಕಾಲದ ಸ್ಮಾರಕಗಳು ನಿರ್ಮಾಣಗೊಂಡಿರುವ ಜಿಲ್ಲೆಯ ಎಲ್ಲಾ ಗ್ರಾಮಗಳ ಪ್ರತ್ಯೇಕವಾಗಿ ಮಹತ್ವದ ಪಟ್ಟಿಯನ್ನು ತಯಾರಿಸಲಾಯಿತು. ನಂತರದಲ್ಲಿ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳಿಂದ ಮಹತ್ವಪೂರ್ಣವಾದ ಲಭ್ಯವಾದ ಮಾಹಿತಿಯನ್ನು ಒಂದೆಡೆ ಕ್ರೋಢೀಕರಿಸಲಾಯಿತು. ಕ್ಷೇತ್ರಕಾರ್ಯ ಕೈಗೊಂಡು ಗ್ರಾಮಗಳಲ್ಲಿ ಸಂಗ್ರಹಿಸಬೇಕಾದ ವಿಷಯಗಳ ಪ್ರಶ್ನಾವಳಿ ಪಟ್ಟಿಯನ್ನು ತಯಾರಿಸಿಕೊಂಡು ಅದರಲ್ಲಿ ಗ್ರಾಮದ ಹೆಸರು, ತಾಲೂಕು, ಸ್ಥಳ, ನಿರ್ದೇಶನ, ಭೌಗೋಳಿಕ ಪರಿಸರ, ಸ್ಥಳನಾಮ, ಐತಿಹ್ಯ, ವಸಾಹತು ಕಾಲದ ಸ್ಮಾರಕ ಇರುವ ಸ್ಥಳ, ದಿಕ್ಕು, ವಿಸ್ತೀರ್ಣ, ಸ್ಮಾರಕದ ಲಕ್ಷಣ, ಕಲೆ, ವಾಸ್ತುಶೈಲಿ, ರಚನಾ ವಿನ್ಯಾಸ, ತಾಂತ್ರಿಕತೆ, ಉಪಯೋಗಿಸಿದ ಕಚ್ಚಾ ಸಾಮಗ್ರಿ, ಕಾಲಮಾನ, ಗ್ರಾಮದಲ್ಲಿನ ಪ್ರಾಚ್ಯಾವಶೇಷಗಳು ಹಾಗೂ ಗ್ರಾಮದ ಕುರಿತಾಗಿ ನಡೆದಿರುವ ಅಧ್ಯಯನಗಳು ಇತ್ಯಾದಿ ಅಂಶಗಳನ್ನೊಳಗೊಂಡ ಮಹತ್ವದ ಮಾಹಿತಿಯನ್ನು ಈಗಾಗಲೇ ಸಿದ್ಧಪಡಿಸಿದ ಕಾರ್ಡ್(ಪತ್ರ)ಗಳಲ್ಲಿ ಸಂಗ್ರಹಿಸಿಕೊಳ್ಳಲಾಯಿತು. ವಸಾಹತು ಕಾಲದ

ಸ್ಮಾರಕ ಇರುವ ಸ್ಥಳದಲ್ಲಿ ಇದ್ದುಕೊಂಡು ಅದರ ಸ್ಥಳನಕ್ಷೆಯನ್ನು ರಚಿಸಿ, ವಸಾಹತು ಕಾಲದ ಸ್ಮಾರಕಗಳ ಪ್ರತಿಯೊಂದು ಭಾಗಗಳ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ. ಅಲ್ಲಿಯ ಸ್ಮಾರಕಗಳ ಕುರಿತಂತೆ ಸ್ಥಳೀಯರಿಂದ ಹಾಗೂ ಆಯಾ ಗ್ರಾಮದಲ್ಲಿಯ ವಿದ್ವಾಂಸರಿಂದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಸ್ಮಾರಕಗಳ ವಿಸ್ತೀರ್ಣ ಹಾಗೂ ಹೆಚ್ಚಿನ ಮಾಹಿತಿಗಾಗಿ ಅಂತರ್ಜಾಲ ತಾಣದ ಮೂಲಕ ಸಮಗ್ರವಾದ ಹಾಗೂ ವಸ್ತುನಿಷ್ಠವಾದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ.

ಈ ರೀತಿಯಾಗಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯ ಜೊತೆಯಲ್ಲಿ ಸ್ಮಾರಕಗಳಿಗೆ ಸಂಬಂಧಿಸಿದ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳಿಂದ ಸಂಗ್ರಹಿಸಿಕೊಂಡ ಅವಶ್ಯಕ ವಿಷಯಗಳನ್ನು ಸಂದರ್ಭಕ್ಕೆ ಅನುಗುಣವಾಗಿ ದಾಖಲಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಲ್ಲಿ ಅಧ್ಯಯನಕ್ಕನುಗುಣವಾಗಿ ಸ್ಮಾರಕಗಳನ್ನು ವಿಂಗಡಿಸಿಕೊಂಡು ವಸಾಹತು ಕಾಲದ ಸ್ಮಾರಕ ಇರುವ ಗ್ರಾಮದ ಐತಿಹಾಸಿಕ ಹಿನ್ನೆಲೆಯನ್ನು ಪರಿಚಯಿಸುವುದರ ಜೊತೆಗೆ ಪ್ರತಿಯೊಂದು ಸ್ಮಾರಕವನ್ನು ಪ್ರತ್ಯೇಕವಾಗಿ ಕ್ಷೇತ್ರಕಾರ್ಯಾಧಾರಿತ ವಿಧಾನ ಮತ್ತು ಐತಿಹಾಸಿಕ ವಿಧಿ ವಿಧಾನದಿಂದ ವ್ಯವಸ್ಥಿತವಾಗಿ ದಾಖಲಿಸಿ, ವಿಶ್ಲೇಷಿಸಿ ಚರ್ಚಿಸಲಾಗಿದೆ.

### ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಸಂಶೋಧನಾ ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲ ದೃಷ್ಟಿಯಿಂದ ಆರು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡು ರಚಿಸಲಾಗಿದೆ. ಪ್ರತಿಯೊಂದು ಅಧ್ಯಾಯವು ಅವಶ್ಯಕತೆಗೆ ಅನುಗುಣವಾಗಿ ಉಪಶೀರ್ಷಿಕೆಗಳನ್ನು ಒಳಗೊಂಡಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ಅಡಿಟಿಪ್ಪಣಿಗಳನ್ನು ನೀಡಲಾಗಿದೆ. ಅಲ್ಲದೇ ಎಲ್ಲಾ ಅಧ್ಯಾಯಗಳ ವಿವರಗಳು ಪೂರ್ಣಗೊಂಡ ನಂತರ ಪರಾಮರ್ಶನ ಗ್ರಂಥಗಳ ಪಟ್ಟಿಯ ವಿವರವಿದೆ. ಅನುಬಂಧದಲ್ಲಿ ಸ್ಮಾರಕಗಳ ಪದಕೋಶ, ವಕ್ತೃ ಮಾಹಿತಿ, ನಕ್ಷೆಗಳು, ತಲನಕ್ಷೆಗಳು ಹಾಗೂ ಛಾಯಾಚಿತ್ರಗಳನ್ನು ನೀಡಲಾಗಿದೆ.

ಪ್ರಸ್ತಾವನೆ ಎಂಬ ಶೀರ್ಷಿಕೆಯ ಮೊದಲ ಅಧ್ಯಾಯದಲ್ಲಿ ವಿಷಯವನ್ನು ಆಯ್ಕೆ ಮಾಡಿ ಕೊಂಡ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಹಾಗೂ ಸ್ವರೂಪದ ಕುರಿತಂತೆ ವಿವರಗಳನ್ನು ದಾಖಲಿಸಿ ವಿಶ್ಲೇಷಿಸಿ ಚರ್ಚಿಸಲಾಗಿದೆ.

ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ ಎಂಬ ಎರಡನೆಯ ಅಧ್ಯಾಯದಲ್ಲಿ ಬಾಗಲಕೋಟೆ ಜಿಲ್ಲೆಯ ಭೌಗೋಳಿಕ ಸನ್ನಿವೇಶಗಳು, ಭೂರಚನೆ, ನದಿಗಳು, ವಾಯುಗುಣ, ಖನಿಜ ಮತ್ತು ಸಸ್ಯ ಸಂಪತ್ತುಗಳನ್ನು ಕುರಿತು ವಿವರಿಸಲಾಗಿದೆ. ಜೊತೆಗೆ ನಿಸರ್ಗವು

ವಸಾಹತು ಕಾಲದ ಸ್ಮಾರಕಗಳ ರಚನೆಯಲ್ಲಿ ಯಾವ ರೀತಿಯಾಗಿ ಪ್ರಭಾವವನ್ನು ಬೀರಿವೆ ಎಂಬುದರ ಕುರಿತು ಚರ್ಚಿಸಲಾಗಿದೆ. ಬಾಗಲಕೋಟೆ ಜಿಲ್ಲೆಯ ಪ್ರಾಗಿತಿಹಾಸ ಕಾಲದಿಂದ ಆಧುನಿಕ ಇತಿಹಾಸ ಕಾಲದವರೆಗಿನ ರಾಜಕೀಯ ಮತ್ತು ಇತರೆ ಚಾರಿತ್ರಿಕ ಅಂಶಗಳನ್ನು ಕುರಿತು ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳನ್ನು ಇಟ್ಟುಕೊಂಡು ದಾಖಲಿಸಿ ವಿಶ್ಲೇಷಿಸಲಾಗಿದೆ.

ವಸಾಹತು ಕಲೆ ಮತ್ತು ವಾಸ್ತುಶಿಲ್ಪ ಎಂಬ ಮೂರನೆಯ ಅಧ್ಯಾಯವು ವಸಾಹತು ಪದ ನಿಷ್ಪತ್ತಿ, ವಸಾಹತು ಕಾಲದ ಸ್ಮಾರಕಗಳ ವಾಸ್ತುಶೈಲಿ ಹಾಗೂ ಲಕ್ಷಣಗಳು, ಭಾರತಕ್ಕೆ ವಸಾಹತುಶಾಹಿ ಆಗಮನ, ಐರೋಪ್ಯ ವಸ್ತುಶಿಲ್ಪದ ಪ್ರಭಾವ, ಪಾಶ್ಚಾತ್ಯ ಕಲಾ ಪ್ರಕಾರಗಳು ಹಾಗೂ ತಂತ್ರಜ್ಞರು ಮತ್ತು ಶ್ರಮಿಕರ ಕುರಿತು ಸಮಗ್ರವಾದ ವಿವರಣೆಯನ್ನು ಒಳಗೊಂಡಿದೆ. ಆಂಗ್ಲ ಗ್ರಂಥಗಳು ಮತ್ತು ಐತಿಹಾಸಿಕ ಮಹತ್ವ ಪಡೆದ ಕೃತಿಗಳು ಸೂಚಿಸುವ ವಸಾಹತು ಕಾಲದ ಸ್ಮಾರಕಗಳ ಅರ್ಥ, ಮಹತ್ವ, ಪ್ರಕಾರ ಹಾಗೂ ಲಕ್ಷಣಗಳನ್ನು ಕುರಿತು ವಿಶ್ಲೇಷಿಸುವ ಮೂಲಕ ಈ ಪ್ರದೇಶದಲ್ಲಿ ನಿರ್ಮಾಣವಾದ ವಸಾಹತು ಕಾಲದ ಸ್ಮಾರಕಗಳು ಎಷ್ಟರಮಟ್ಟಿಗೆ ಅವುಗಳಿಗೆ ಹೋಲಿಕೆ ಅಥವಾ ಸಾಮ್ಯತೆಯನ್ನು ಹೊಂದಿದೆ ಎಂಬುದರ ಕುರಿತು ಚರ್ಚಿಸುವಂತಹ ಪ್ರಯತ್ನವನ್ನು ಮಾಡಲಾಗಿದೆ. ಅದರಂತೆ ಪ್ರಾಚೀನ ಕಾಲಘಟ್ಟದಿಂದ ರಾಜಕೀಯ ಸನ್ನಿವೇಶ ಮತ್ತು ತಂತ್ರಗಾರಿಕೆ ಅನುಗುಣವಾಗಿ ವಸಾಹತು ಕಾಲದ ಸ್ಮಾರಕಗಳು ವಾಸ್ತುವಿನ್ಯಾಸದಲ್ಲಿ ಯಾವ ರೀತಿ ಬೆಳವಣಿಗೆಯನ್ನು ಹೊಂದಿದವು ಎಂಬುದರ ಕುರಿತು ಚರ್ಚಿಸಿ ವಿಶ್ಲೇಷಿಸುವ ಮೂಲಕ ದಾಖಲು ಮಾಡಲಾಗಿದೆ.

ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಜಿಲ್ಲೆಯ ಆರು ತಾಲೂಕುಗಳಲ್ಲಿ ಕಂಡುಬರುವಂತಹ ವಸಾಹತು ಕಾಲದ ಸ್ಮಾರಕಗಳಾದ ಚರ್ಚ್‌ಗಳು, ಸಮಾಧಿ ಸ್ಮಾರಕಗಳು, ಅಣೆಕಟ್ಟುಗಳು, ನಿರೀಕ್ಷಣಾ ಮಂದಿರಗಳು, ರಸ್ತೆ, ಸೇತುವೆಗಳು, ರೈಲು ಸೇತುವೆಗಳು, ಆಸ್ಪತ್ರೆಗಳು, ಶಾಲೆಗಳು, ಅಂಚೆ ಕಚೇರಿಗಳು, ಅನಾಥಾಶ್ರಮ, ಬಂಗಲೆ (ವಸತಿ ಗೃಹ), ರೈಲ್ವೆ ನಿಲ್ದಾಣಗಳು, ಸೆರೆಮನೆ, ನ್ಯಾಯಾಲಯ ಇತ್ಯಾದಿ ಸ್ಮಾರಕಗಳ ವಾಸ್ತುವಿನ್ಯಾಸ, ಸ್ಮಾರಕಗಳ ನಿರ್ಮಾಣದ ಉದ್ದೇಶ, ತಾಂತ್ರಿಕತೆ, ಉಪಯೋಗಿಸಿದ ಕಚ್ಚಾ ಸಾಮಗ್ರಿಗಳು ಹಾಗೂ ಸ್ಥಳೀಯರ ಅಭಿಪ್ರಾಯವನ್ನು ಕ್ಷೇತ್ರಕಾರ್ಯಾಧಾರಿತವಾಗಿ ಸಂಗ್ರಹಿಸಿದ ಮಾಹಿತಿಯನ್ನು ವಿವರಿಸಲಾಗಿದೆ. ಇದುವರೆಗೆ ಪ್ರಕಟವಾಗಿರುವ ಕೆಲವು ಆಂಗ್ಲರ ಸಮಾಧಿ ಸ್ಮಾರಕ ಶಾಸನಗಳು, ನಾಣ್ಯಗಳು, ಸಾಹಿತ್ಯ ಕೃತಿ ಮೌಖಿಕ ಆಕರ, ಪತ್ರಾಗಾರ ಇಲಾಖೆಯ ಆಯ್ದ ಕೆಲವು ವರದಿಗಳು ಹಾಗೂ ಕೆಲವು ಸರಕಾರಿ ಇಲಾಖೆಗಳು ಒದಗಿಸಿದ ದಾಖಲೆ ಪತ್ರಗಳನ್ನು ಬಳಸಿಕೊಂಡು ಜಿಲ್ಲೆಯ ವಸಾಹತು

ಕಾಲದ ಸ್ಮಾರಕಗಳ ಜೊತೆಗೆ ಜಮಖಂಡಿ ಮತ್ತು ಮುಧೋಳ ಸಂಸ್ಥಾನಿಕರ ಸ್ಮಾರಕಗಳನ್ನು ಸಹಿತ ದಾಖಲಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ.

ವಸಾಹತು ಕಾಲದ ಸ್ಮಾರಕಗಳ ಕಾರ್ಯವಿಧಾನ ಎಂಬ ಐದನೆಯ ಅಧ್ಯಾಯದಲ್ಲಿ ಈಗಾಗಲೇ ವಿವರಿಸಿದ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳಿಂದ ಜನಸಾಮಾನ್ಯರಿಗಾಗುವ ಅನುಕೂಲಗಳಾದ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಕಾರ್ಯಗಳು ಹಾಗೂ ಸ್ಮಾರಕಗಳ ಪ್ರಸ್ತುತ ಸ್ಥಿತಿಗತಿಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ದೊರೆತಂತಹ ಬ್ರಿಟಿಷರ ನಾಣ್ಯಗಳ ಕುರಿತು ದಾಖಲಿಸಿ ವಿವರಿಸಲಾಗಿದೆ.

ಸಮಾರೋಪ ಶೀರ್ಷಿಕೆಯನ್ನು ಹೊಂದಿರುವುದು ಆರನೆಯ ಅಥವಾ ಅಂತಿಮ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಪ್ರತಿ ಅಧ್ಯಾಯಗಳಲ್ಲಿ ಕಂಡುಕೊಂಡಂತಹ ವಿಷಯ ಗಳನ್ನು ಸಂಕ್ಷಿಪ್ತವಾಗಿ ಮತ್ತೊಮ್ಮೆ ಪುನರಾವಲೋಕಿಸುವ ಹಾಗೂ ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಪ್ರಸ್ತುತ ಸಂಶೋಧನೆ ಅಥವಾ ಅಧ್ಯಯನ ಒಟ್ಟಾರೆ ಸಮಗ್ರ ವಿಷಯಕ್ಕೆ ಸಂಬಂಧಿಸಿದಂತೆ ಕಂಡುಕೊಳ್ಳಲಾದ ಒಟ್ಟು ಫಲಿತಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇಲ್ಲಿ ವ್ಯಕ್ತಿಪಡಿಸಿರುವಂತಹ ಅಭಿಪ್ರಾಯಗಳೇ ಅಂತಿಮ ಎಂಬುದೇನಿಲ್ಲ. ಇವು ಮುಂದಿನ ಸಂಶೋಧನೆಗೆ ಹಾಗೂ ಹೊಸ ವಿಚಾರ ಮತ್ತು ಅಭಿಪ್ರಾಯಗಳಿಗೂ ಸಹ ಪೂರಕವಾದುವುಗಳಾಗಿವೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ವಿಜಾಪುರ ಜಿಲ್ಲಾ ಗ್ಯಾಸೆಟಿಯರ್, ಪು.೩

೨. ಅದೇ, ಪು.೩

೩. ಗೋಪಾಲ್ ಆರ್.(ಸಂ), ೨೦೧೧, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೬

೪. ಕನ್ನಡ ವಿಷಯ ವಿಶ್ವಕೋಶ, ಕರ್ನಾಟಕ(ಪರಿಷ್ಕೃತ) ಸಂ.೨, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೪೧೦

೫. ಅದೇ, ಪು.೪೧೦

೬. ಅಂಬಳಿಕೆ ಹಿರಿಯಣ್ಣ(ಪ್ರಸಂ), ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಪು.೯೨೦

೭. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೩೦, ಕರ್ನಾಟಕ ಇತಿಹಾಸ ದರ್ಶನ, ಪು.೧೦೫೩

## ಅಧ್ಯಾಯ ಎರಡು

# ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ

## ಅಧ್ಯಾಯ ಎರಡು

# ಭೌಗೋಳಿಕ ಮತ್ತು ಐತಿಹಾಸಿಕ ಹಿನ್ನೆಲೆ

### ಪ್ರಸ್ತಾವನೆ

ಬಾಗಲಕೋಟೆ ಜಿಲ್ಲೆಯು ಒಂದು ಐತಿಹಾಸಿಕ ಸ್ಥಳವಾಗಿ ಪ್ರಾಚೀನ ಕಾಲದಿಂದ ಹಿಡಿದು ಇಂದಿನವರೆಗೂ ಹೆಸರು ಪಡೆದುಕೊಂಡಿದೆ. ಬಾಗಲಕೋಟೆ ಇಡಿ ಇಲ್ಲಿಯು ಮೌರ್ಯ; ಶಾತವಾಹನ, ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ದೇವಗಿರಿಯ ಯಾದವ, ದ್ವಾರಸಮುದ್ರದ ಹೊಯ್ಸಳ, ವಿಜಯನಗರದ ಅರಸರು ಮತ್ತು ವಿಜಯಪುರ ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ.೧೬೮೬ರಲ್ಲಿ ವಿಜಯಪುರ ರಾಜ್ಯವನ್ನು ಮೊಗಲ್ ಚಕ್ರವರ್ತಿ ಔರಂಗಜೇಬನು ವಶಪಡಿಸಿಕೊಂಡನು. ಕ್ರಿ.ಶ.೧೭೨೪ರ ನಂತರ ಹೈದರಾಬಾದಿನ ನಿಜಾಮ ಉಲ್‌ಮುಲ್ಕನ ಅಧಿಪತ್ಯಕ್ಕೆ ವಿಜಯಪುರ ರಾಜಧಾನಿ ಒಳಗಾಯಿತು. ಕ್ರಿ.ಶ.೧೭೬೦ರಲ್ಲಿ ವಿಜಯಪುರ ಮರಾಠರ ವಶಕ್ಕೆ ಹೋಯಿತು. ಮುಂದೆ ಕ್ರಿ.ಶ.೧೭೬೪ ರಿಂದ ೧೭೭೫ರ ವರೆಗೆ ಸವಣೂರ ನವಾಬರ ಅಧೀನದಲ್ಲಿದ್ದು, ನಂತರ ಪೇಶ್ವೆಯವರ ವಶಕ್ಕೆ ಬಂದಿತು. ಕ್ರಿ.ಶ.೧೭೭೮ರ ವೇಳೆಗೆ ಬಿಜಾಪುರ ರಾಜ್ಯ ಮೈಸೂರಿನ ಹೈದರಾಲಿಯ ಕೈ ಸೇರಿ ಅವನ ಸಾಮಂತನಾದ ಸವಣೂರು ನವಾಬನ ಅಧೀನಕ್ಕೆ ಮತ್ತೇ ಒಳಗಾಯಿತು. ಕ್ರಿ.ಶ.೧೭೯೨ರ ಶ್ರೀರಂಗಪಟ್ಟಣ ಒಪ್ಪಂದ ಪ್ರಕಾರ ವಿಜಯಪುರ ಮತ್ತೇ ಮರಾಠರ ಕೈವಶವಾಯಿತು. ಕ್ರಿ.ಶ.೧೮೧೦ರಲ್ಲಿ ಪೇಶ್ವೆ ಬಾಜಿರಾಯಿ ವಿಜಯಪುರ ಪ್ರದೇಶವನ್ನು ಬಾದಾಮಿಯ ನೀಲಕಂಠರಾವ್ ಸುಬೇದಾರನಿಗೆ ಒಪ್ಪಿಸಿದನು.

ಕ್ರಿ.ಶ.೧೮೧೮ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ ಸರ್ ಥಾಮಸ್ ಮನ್ರೋ ಬೃಹತ್ತಾದ ಬ್ರಿಟಿಷ್ ಸೈನ್ಯದೊಂದಿಗೆ ಬಾದಾಮಿಗೆ ಮುತ್ತಿಗೆ ಹಾಕಿ ಬಾದಾಮಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರ ಬಾಗಲಕೋಟೆ ಪ್ರದೇಶ ಹವೇಲಿ, ಕಲಾದಗಿ ಹಾಗೂ ಇತರ ಪ್ರದೇಶಗಳು ಸಂಪೂರ್ಣವಾಗಿ ಕ್ರಿ.ಶ.೧೮೧೮ ಮೇ ೧೭ ರಂದು ಬ್ರಿಟಿಷರ

ಕೈವಶವಾದವು.[೧] ಕ್ರಿ.ಶ.೧೮೧೮ ರಿಂದ ೧೮೩೭ರವರೆಗೆ ಬಾಗಲಕೋಟೆ, ಬಾದಾಮಿ, ಹುನಗುಂದ ತಾಲೂಕುಗಳು ಧಾರವಾಡ ಕಲೆಕ್ಟರೇಟ್ ಅಧಿಕಾರಿಗಳ ಅಧೀನದಲ್ಲಿದ್ದವು. ಮುಧೋಳ ಘೋರ್ಪಡೆ ಸಂಸ್ಥಾನ, ಜಮಖಂಡಿ ಪಟವರ್ಧನ ಸಂಸ್ಥಾನಗಳು ತಮ್ಮ ರಾಜತ್ವವನ್ನು ಮುಂದುವರೆಸಿದವು. ದಕ್ಷಿಣ ಭಾಗದ ಬ್ರಿಟಿಷ್ ಸಾಮ್ರಾಜ್ಯದ ಕಂದಾಯದ ಆಯುಕ್ತನಾದ ಡಬ್ಲ್ಯೂ ಹಾರ್ಟನ್ ಸಲಹೆಯಂತೆ ಆಡಳಿತದ ಅನುಕೂಲಕ್ಕಾಗಿ ಇಂಡಿ, ಹಿಪ್ಪರಗಿ, ವಿಜಯಪುರ, ಮನಗೂಳಿ, ಮುದ್ದೇಬಿಹಾಳ, ಬಾಗಲಕೋಟೆ, ಬಾದಾಮಿ ಹಾಗೂ ಹುನಗುಂದವನ್ನೊಳಗೊಂಡು "ಕಲಾದಗಿ ಕಲೆಕ್ಟರೇಟ್" ಕ್ರಿ.ಶ.೧೯೬೪ ಡಿಸೆಂಬರ್ ೦೧ರಂದು ರಚನೆ ಮಾಡಲಾಯಿತು. ಬೀಳಗಿ ಉಪತಾಲೂಕಾಗಿ ಮುಂದುವರೆದು, ಮುಧೋಳ, ಜಮಖಂಡಿ ಪ್ರದೇಶಗಳು ಸಂಸ್ಥಾನಗಳಾಗಿ ಆಡಳಿತವನ್ನು ನಡೆಸಿದವು.[೨] ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕೆ ತಕ್ಕಂತೆ ತಾಲೂಕು, ಜಿಲ್ಲಾ ಕೇಂದ್ರ ರಚಿಸಿಕೊಂಡು ಆಡಳಿತವನ್ನು ನಡೆಸಿದರು.

ಕ್ರಿ.ಶ.೧೮೭೬ರಲ್ಲಿ ಕರ್ನಲ್ ಸೆಂಟ್‌ಕ್ಲಾರ್ ವಿಲ್ಕಿನನು ಆಡಳಿತದ ದೃಷ್ಟಿಯಿಂದ ಕಲಾದಗಿಗಿಂತ ವಿಜಯಪುರವೇ ಜಿಲ್ಲಾ ಕೇಂದ್ರವಾಗಲು ಯೋಗ್ಯವೆಂದು ಸಲಹೆಯನ್ನು ನೀಡಿದನು. ವಿಜಯಪುರದಲ್ಲಿ ಆದಿಲ್‌ಶಾಹಿ ಕಾಲದ ಕಟ್ಟಡಗಳು ಅನಾಥವಾಗಿ ಹಾಳು ಬಿದ್ದಿದ್ದವು. ಕ್ರಿ.ಶ. ೧೮೭೭ರ ಭೀಕರ ಬರಗಾಲದಿಂದಾಗಿ ಕ್ರಿ.ಶ.೧೮೭೯ರವರೆಗೆ ಬರಪರಿಹಾರ ಕಾರ್ಯ (ಕಾಮಗಾರಿ) ಮುಂದುವರೆಯಿತು. ಬರಗಾಲ ಕಾಮಗಾರಿಯಾಗಿ ರೈಲು ಸೇತುವೆ, ರಸ್ತೆ ಸೇತುವೆ, ವಸತಿ ಗೃಹಗಳು, ಧಾರ್ಮಿಕ, ಶೈಕ್ಷಣಿಕ, ಲೋಕೋಪಯೋಗಿ ಕಟ್ಟಡಗಳನ್ನು ನಿರ್ಮಿಸಲು ಸ್ಥಳೀಯ ಶ್ರಮಿಕರನ್ನು ಬ್ರಿಟಿಷರು ಬಳಸಿಕೊಂಡರು. ತದನಂತರ ಕ್ರಿ.ಶ.೧೮೭೯ರಿಂದ ೧೮೮೫ರವರೆಗೆ ವಿಜಯಪುರದಲ್ಲಿ ಹಾಳುಬಿದ್ದಿದ್ದ ಕಟ್ಟಡಗಳ ದುರಸ್ತಿ ಕಾರ್ಯವನ್ನು ಕೈಗೊಳ್ಳಲಾಯಿತು. ಅಂತಿಮವಾಗಿ ಕಲಾದಗಿ ಜಿಲ್ಲೆಯನ್ನು ಕ್ರಿ.ಶ.೧೮೮೫ರಲ್ಲಿ ವಿಜಯಪುರಕ್ಕೆ ವರ್ಗಾಯಿಸಲಾಯಿತು. ಈ ಸಮಯದಲ್ಲಿ ಬಾಗಲಕೋಟೆ ಒಂದು ತಾಲೂಕಾಗಿ ಗುರುತಿಸಿಕೊಂಡಿತು.

ಈಗಿನ ಬಾಗಲಕೋಟೆ ಜಿಲ್ಲೆಯ ಕಲಾದಗಿ ಎಂಬ ಗ್ರಾಮ ಬ್ರಿಟಿಷರ ಆಡಳಿತದ ಕಾಲಾವಧಿಯಲ್ಲಿ ಅಂದರೆ (ಕ್ರಿ.ಶ.೧೮೧೮–೧೮೮೫ರವರೆಗೆ) ೬೭ ವರ್ಷಗಳ ಆಡಳಿತ ಅವಧಿಯಲ್ಲಿ ಸುಮಾರು ೨೧ ವರ್ಷಗಳ ಕಾಲ (ಕ್ರಿ.ಶ.೧೮೬೪–೧೮೮೫) ಬ್ರಿಟಿಷರ ಸೈನಿಕ ನೆಲೆ (ಕಂಟೋನ್ಮೆಂಟ್)ಯಾಗಿ ಜಿಲ್ಲಾ ಕೇಂದ್ರವಾಗಿ ಅಸ್ತಿತ್ವದಲ್ಲಿದ್ದಿತು. ಈ ಅವಧಿಯಲ್ಲಿ ಬ್ರಿಟಿಷರು ಬಾಗಲಕೋಟೆ ಸುತ್ತಲಿನ ಪರಿಸರದಲ್ಲಿ ಹಲವಾರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಬಾಗಲಕೋಟೆ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಸಂಸ್ಥಾನಗಳಾದ ಮುಧೋಳ, ಜಮಖಂಡಿ, ಔರಾದ್,

ಕುರಂದವಾಡ ಮತ್ತು ಸಾಂಗಲಿಯನ್ನು ಕ್ರಿ.ಶ.೧೯೪೮ರಲ್ಲಿ ವಿಜಯಪುರ ಜಿಲ್ಲೆಗೆ ಸೇರಿಸಲಾಯಿತು. ಇದು ೧೯೪೭ ರಿಂದ ಮುಂಬಯಿ ಪ್ರಾಂತ್ಯದ ಒಂದು ಜಿಲ್ಲೆಯಾಗಿತ್ತು. ಕ್ರಿ.ಶ.೧೯೫೬ರ ರಾಜ್ಯಗಳ ಪುನರ್ವಿಂಗಡಣೆಯಾದಾಗ ವಿಜಯಪುರ ಕರ್ನಾಟಕ ರಾಜ್ಯಕ್ಕೆ ಸೇರಿತು. ನಂತರ ವಿಜಯಪುರ ಜಿಲ್ಲೆಯಿಂದ ಪ್ರತ್ಯೇಕಗೊಂಡು ಬಾಗಲಕೋಟೆ ಜಿಲ್ಲೆಯನ್ನು ಕ್ರಿ.ಶ.೧೯೯೭ ಆಗಸ್ಟ್ ೧೫ ರಂದು ರಚಿಸಲಾಯಿತು. ಬಾಗಲಕೋಟೆ, ಬಾದಾಮಿ, ಬೀಳಗಿ, ಹುನಗುಂದ, ಜಮಖಂಡಿ, ಮುಧೋಳ ಹೀಗೆ ಒಟ್ಟು ಆರು ತಾಲೂಕುಗಳನ್ನು ಸೇರಿಸಿಕೊಂಡು ಅಖಂಡ ನೂತನವಾಗಿ ಬಾಗಲಕೋಟೆ ಜಿಲ್ಲೆಯನ್ನು ರಚನೆ ಮಾಡಲಾಯಿತು.

## ೨.೧. ಭೌಗೋಳಿಕ ಪರಿಸರ(ಹಿನ್ನೆಲೆ) ಅಥವಾ ಭೌಗೋಳಿಕತೆ

ಬಾಗಲಕೋಟೆ ಜಿಲ್ಲೆಯನ್ನು ಅವಲೋಕಿಸಿದಾಗ ಈ ಜಿಲ್ಲೆಯ 'ಭೂ ಪ್ರದೇಶ ದಖನ್ ಪ್ರಸ್ಥಭೂಮಿಯ ಶುಷ್ಕ ಪ್ರದೇಶದಲ್ಲಿರುವುದು ಹಾಗೂ ಭಾರತದ ಪ್ರಾಕೃತಿಕ ವಲಯದಲ್ಲಿಯೇ ದೊಡ್ಡದಾದ ಪರ್ಯಾಯ ದ್ವೀಪದ ಪ್ರಸ್ಥಭೂಮಿಯ ಒಂದು ಭಾಗವಾಗಿದೆ.[೩] ಯಾವುದೇ ಪ್ರದೇಶಕ್ಕೆ ಅದರ ಭೌಗೋಳಿಕ ಪರಿಸರದ ಪ್ರಭಾವ ತುಂಬಾ ಮಹತ್ವವಾದುದು. ಮಾನವ ಜೀವನದ ಮೇಲೆ ಪರಿಸರದ ಪ್ರಭಾವ ಅಪರಿಮಿತವಾದುದಾಗಿದೆ. ಯಾವುದೇ ಒಂದು ಪ್ರದೇಶ, ಪ್ರಾಂತ್ಯ ಅಥವಾ ದೇಶದ ಜನರ ಆಹಾರ, ಉಡುಗೆ-ತೊಡುಗೆ, ವಸತಿಗಳನ್ನೊಳಗೊಂಡ ಸಾಂಸ್ಕೃತಿಕ ಪರಂಪರೆ, ಚಾರಿತ್ರಿಕ ಘಟನಾವಳಿಗಳು, ಆರ್ಥಿಕ ವ್ಯವಸ್ಥೆ, ಧಾರ್ಮಿಕ ಆಚರಣೆಗಳು, ನಂಬಿಕೆಗಳು, ರೂಢಿ ಸಂಪ್ರದಾಯಗಳು, ಭಾಷೆ ಮುಂತಾದವುಗಳು ಮೇಲೆ ಸುತ್ತಮುತ್ತಲಿನ ಭೌತಿಕ ಪರಿಸರದ ಪ್ರಭಾವ ಅಪಾರವಾಗಿದೆ.

ಮಾನವ ಹಾಗೂ ಸಮಾಜಗಳ ನಡುವೆ ವಿಶಿಷ್ಟತೆ ಹಾಗೂ ಏಕತೆಯ ಲಕ್ಷಣಗಳು ಹೇಗೆ ಕಂಡುಬರುತ್ತವೆಯೋ ಹಾಗೆ ಅಲ್ಲಿನ(ಬಾಗಲಕೋಟೆ ಜಿಲ್ಲೆಯ) ಸ್ಥಳವೂ ಸಹ ವಿಶಿಷ್ಟತೆ ಮತ್ತು ಏಕತೆಯ ನಿಯಮಕ್ಕೊಳಗಾಗಿರುತ್ತದೆ. ಪ್ರತಿಯೊಂದು ಪ್ರದೇಶವೂ ಸಹ ತನ್ನದೇ ಆದ ಭಾಷೆ, ಧರ್ಮ, ಸಂಸ್ಕೃತಿಗಳು ಹಾಗೂ ಸಂಪ್ರದಾಯಗಳಲ್ಲಿ ವೈವಿಧ್ಯತೆ ಕಂಡುಬರುವಂತೆ ಭೌಗೋಳಿಕ ವೈವಿಧ್ಯತೆಯನ್ನು ಹೊಂದಿರುತ್ತದೆ. ಇಂತಹ ಏಕತೆ ಅನೇಕತೆಯ ಬೆಳವಣಿಗೆಯಲ್ಲಿ ಬಾಗಲಕೋಟೆ ಜಿಲ್ಲೆಯೂ ಒಂದಾಗಿದೆ.

"ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಬೆಳಗಾವಿ ಕಂದಾಯ ವಿಭಾಗದಲ್ಲಿರುವ ಬಾಗಲಕೋಟೆ ಜಿಲ್ಲೆಯ ಭೂಪ್ರದೇಶವು ೭೪.೫೯° ಪೂರ್ವ ರೇಖಾಂಶದಿಂದ, ೭೬.೨೨° ಪೂರ್ವ ರೇಖಾಂಶಗಳ ಮಧ್ಯೆ ಹಾಗೂ ೧೫.೪೮° ಉತ್ತರ ಅಕ್ಷಾಂಶದಿಂದ ೧೬.೫೩° ಉತ್ತರ ಅಕ್ಷಾಂಶಗಳ ಮಧ್ಯ ಹರಡಿಕೊಂಡಿದೆ." ಈ ಜಿಲ್ಲೆಯು ಸುಮಾರು ೬೫೯೩

ಚ.ಕಿ.ಮೀ.(೬,೫೦,೮೭೭ ಹೆಕ್ಟೇರ್)ಗಳಷ್ಟು ಭೂಪ್ರದೇಶವನ್ನು ಆವರಿಸಿಕೊಂಡಿರುವುದರಿಂದ ದಕ್ಷಿಣ ಕರಾವಳಿಯಿಂದ ಸುಮಾರು ೨೦೮ ಕಿ.ಮೀ.ಗಳಷ್ಟು ಒಳಪ್ರದೇಶದಲ್ಲಿದೆ. ಈ ಜಿಲ್ಲೆಯ ಸಮುದ್ರ ಮಟ್ಟದಿಂದ ಸರಾಸರಿ ೬೨೫ ಮೀಟರ್ ಎತ್ತರದಲ್ಲಿದೆ.[೪] ಜಿಲ್ಲೆಯ ಉತ್ತರ ಭಾಗವನ್ನು ವಿಜಯಪುರ ಜಿಲ್ಲೆ, ಪೂರ್ವ ಭಾಗವನ್ನು ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಆವರಿಸಿಕೊಂಡರೆ, ದಕ್ಷಿಣ ಭಾಗವನ್ನು ಗದಗ ಜಿಲ್ಲೆ ಆವರಿಸಿಕೊಂಡಿದೆ. ಪಶ್ಚಿಮ ಭಾಗಕ್ಕೆ ಬೆಳಗಾವಿ ಜಿಲ್ಲೆ ಹೊಂದಿಕೊಂಡಿದೆ.

ಜಿಲ್ಲೆಯು ಅತ್ಯಂತ ಪುರಾತನ ಹಾಗೂ ಶಿಲಾಪಾಕ ರಚಿತ ಶಿಲೆಗಳಿಂದ ಕೂಡಿದ ಭಾಗವಾಗಿದೆ. ಮಲೆನಾಡಿಗೆ ಹೊಂದಿಕೊಂಡಿರುವ ಅರೆ ಮಲೆನಾಡಿನ ಪೂರ್ವಕ್ಕೆ ರಾಜ್ಯದ ಉತ್ತರ ಹಾಗೂ ಪೂರ್ವ ಗಡಿಗಳವರೆಗೂ ಹರಡಿರುವ ವಿಸ್ತಾರ ಬಯಲು ಉತ್ತರ ಭಾಗದ ಮೈದಾನವಾಗಿದೆ. ಈ ಮೈದಾನದ ನೈರುತ್ಯಕ್ಕೆ ಹಾಗೂ ಪಶ್ಚಿಮ ಭಾಗದಲ್ಲಿ ಜಿಲ್ಲೆಯ ಭೂಪ್ರದೇಶ ವ್ಯಾಪಿಸಿಕೊಂಡಿದೆ. ಉತ್ತರದ ಕಡೆಗೆ ಇಳಿಜಾರಾಗಿರುವ ಈ ಬಯಲು ಹಳ್ಳ, ತಿಟ್ಟುಗಳಿಂದ ಕೂಡಿದೆ. ಅನೇಕ ಗುಡ್ಡಗಳ ಸಾಲುಗಳು ಮತ್ತು ವಿಲಕ್ಷಣವಾದ ಗಂಭೀರವಾದ ಬಂಡೆಗಳು ಹಾಗೂ ಬೃಹದಾಕಾರದ ಕಲ್ಲು ಗುಂಡುಗಳ ಒಂದು ಭಯಾನಕ ವಾತಾವರಣವನ್ನುಂಟು ಮಾಡುತ್ತವೆ.

ಬಾಗಲಕೋಟೆ ಜಿಲ್ಲೆಯ ಒಟ್ಟಾರೆ ಭೌಗೋಳಿಕ ಪರಿಸರವು ಜನ ಜೀವನಕ್ಕೆ ಹಾಗೂ ಆರ್ಥಿಕಾಭಿವೃದ್ಧಿಗೆ ಯೋಗ್ಯವಾಗಿದೆ. ಕಪ್ಪುಮಣ್ಣು ವ್ಯಾಪಕವಾಗಿದ್ದು, ಚಿಕ್ಕ ಹಾಗೂ ಬೃಹತ್ ಪ್ರಮಾಣದ ನೀರಾವರಿ ಸೌಲಭ್ಯದ ಮೂಲಕ ವ್ಯವಸಾಯದ ಅಭಿವೃದ್ಧಿ ಜೊತೆಗೆ ವಾಣಿಜ್ಯ ಬೆಳೆಗಳಾದ ಹತ್ತಿ ಮತ್ತು ಕಬ್ಬು ಬೆಳೆಯ ಕ್ಷೇತ್ರವನ್ನು ವಿಸ್ತರಿಸಿ ಕೈಗಾರಿಕೆಗಳನ್ನು ಸ್ಥಾಪಿಸಲು ಸಹಾಯಕವಾಗಿವೆ. ಹಾಗೂ ಲಭ್ಯವಿರುವ ಖನಿಜ ಸಂಪತ್ತಿನ ನೆರವಿನಿಂದ ಜಿಲ್ಲೆಯಲ್ಲಿ ಗಾಜು, ಸೀಮೆಂಟ್ ವಿದ್ಯುತ್ ಉಪಕರಣಗಳನ್ನು ಮತ್ತು ಉಕ್ಕು ಸ್ಥಾವರ ಮುಂತಾದ ಕೈಗಾರಿಕೆಗಳನ್ನು ಸ್ಥಾಪಿಸಬಹುದು. ಇಲ್ಲಿನ ಅನೇಕ ಬೆಟ್ಟ ಶ್ರೇಣಿಗಳನ್ನು ದಟ್ಟ ಹಸಿರು ಪ್ರದೇಶಗಳನ್ನಾಗಿ ಮಾಡಲು ಅವಕಾಶವಿದ್ದು, ನೈಸರ್ಗಿಕ ಸಂಪತ್ತಾದ ಸಸ್ಯ, ಪ್ರಾಣಿ ಸಂಪತ್ತನ್ನು ವರ್ಧಿಸಲು ಸಹಾಯವಾಗುತ್ತದೆ. ಕೃಷಿಯಾಧಾರಿತ ಕೈಗಾರಿಕೆಗಳ ಸ್ಥಾಪನೆಗೆ ಅವಕಾಶ ಹೊಂದಿದ್ದು, ರಾಜ್ಯದ ಪ್ರಮುಖ ಕೈಗಾರಿಕಾ ನಗರವಾಗಿ ಬೆಳೆಯಲು ಅವಕಾಶವನ್ನು ಪಡೆದಿದೆ. ಅವಿಭಾಜ್ಯ ವಿಜಯಪುರ ಜಿಲ್ಲೆಯಾಗಿದ್ದ 'ಬರಗಾಲ ಜಿಲ್ಲೆ' ಎಂಬ ಹಣೆಪಟ್ಟಿಯನ್ನು ಬಾಗಲಕೋಟೆ ಜಿಲ್ಲೆಗೂ ವ್ಯಾಪಿಸಿಕೊಳ್ಳದಂತೆ ತಡೆಗಟ್ಟುವಲ್ಲಿ ಇಲ್ಲಿನ ಭೌಗೋಳಿಕ ಪರಿಸರವು ಸಮೃದ್ಧವಾಗಿದೆ.

## ಕೃಷ್ಣಾನದಿ

ಮಹಾರಾಷ್ಟ್ರ ರಾಜ್ಯದ ಸಹ್ಯಾದ್ರಿ ಪರ್ವತಗಳ ತಪ್ಪಲಿನಲ್ಲಿ ಮಹಾಬಲೇಶ್ವರದಲ್ಲಿ ಕೃಷ್ಣಾನದಿಯು ಹುಟ್ಟಿ, ಆಗ್ನೇಯಕ್ಕೆ ಹರಿಯುತ್ತಾ ಒಂದು ಕರ್ನಾಟಕದ ಭಾಗದಲ್ಲಿ ಪೂರ್ವಾಭಿಮುಖವಾಗಿ ಹರಿಯುತ್ತದೆ. ಕೃಷ್ಣಾ ನದಿಯು ಉಗಮದಿಂದ ಹಿಡಿದು ಆಂಧ್ರಪ್ರದೇಶದ ಪೂರ್ವದ ಬಂಗಾಳಕೊಲ್ಲಿ ಸಾಗರದಲ್ಲಿ ಸಂಗಮವಾಗುತ್ತದೆ. ಕೋಹ್ನಿ, ದೂಧ್‌ಗಂಗಾ, ಪಂಚಗಂಗಾ, ಘಟಪ್ರಭಾ, ಮಲಪ್ರಭಾ, ದೋಣಿ, ಭೀಮಾ, ತುಂಗಭದ್ರಾ ಮುಂತಾದ ಪ್ರಮುಖ ನದಿಗಳಲ್ಲದೇ ಅನೇಕ ಸಣ್ಣ–ದೊಡ್ಡ ಹೊಳೆಗಳನ್ನು ತನ್ನೊಳಗೆ ಸೇರಿಸಿಕೊಂಡು ಬಂಗಾಳ ಕೊಲ್ಲಿಯತ್ತ ಪ್ರಯಾಣ ಬೆಳೆಸುತ್ತದೆ. ಕರ್ನಾಟಕದಲ್ಲಿ ಇದನ್ನು ಕೃಷ್ಣಾ ಎಂದು ಕರೆದರೂ, ಆಂಧ್ರದಲ್ಲಿ ಇದನ್ನು ಕೃಷ್ಣವೇಣಿ ಎಂದು ಕರೆಯುತ್ತಾರೆ. ಈ ನದಿಯನ್ನು ಕನ್ನಡ ಶಾಸನಗಳಲ್ಲಿ ಕೃಷ್ಣವಣ್ಣಾ, ಕೃಷ್ಣ ಜೆಣ್ಣಾ, ಕೃಷ್ಣ ಹೊಳೆ, ಕೃಷ್ಣವೇಣಿ ಎಂದು ಕರೆಯಲಾಗಿದೆ.[೫] ಹೀಗಾಗಿ ಈ ನದಿಯ ಪೂರ್ಣ ಹೆಸರು ಕೃಷ್ಣಾವೆಣ್ಣಾ ಎಂಬುದಾಗಿದೆ. ಈ ಹೆಸರು ಬರಲು ಕಾರಣ ಸತರಾ ಬಳಿಯ ಸಂಗಮ ಮಹೋದಿ ಬಳಿ ಕೃಷ್ಣಾ ನದಿಗೆ ವೇಣಾನದಿ ಕೂಡಿ ಮುಂದೆ ಕೃಷ್ಣವೇಣಾ ನದಿಯಾಗಿದೆ. ಇದಲ್ಲದೆ ಈ ಭಾಗದ ಶಾಸನಗಳಲ್ಲಿ ಮತ್ತು ಕನ್ನಡ ಕಾವ್ಯಗಳಲ್ಲಿ ಇದನ್ನು ಹೆದ್ದೊರೆ[೬] ಎಂದು ಕರೆಯಲಾಗಿದೆ. ಹೆದ್ದೊರೆ(ಹಿರಿಯ ತೊರೆ) ಹಿರಿಯ ಹೊಳೆ, ದೊಡ್ಡ ನದಿ ಎಂದು ಹೆದ್ದೊರೆಗೆ[೭] ಕರೆಯುತ್ತಾರೆ. ಕವಿಚಕ್ರವರ್ತಿ ರನ್ನನು ಇದನ್ನು ಹೆದ್ದೊರೆಯೆಂದೇ ಕರೆದಿದ್ದಾನೆ. ಇಂದಿಗೂ ಜನಮಾನಸದಲ್ಲಿ ಹಿರಿಹೊಳಿ ಎಂದು ಕರೆಯುವುದು ಗಮನಾರ್ಹವಾಗಿದೆ.

## ಘಟಪ್ರಭಾ ನದಿ

ಘಟಪ್ರಭಾ ನದಿಯು ಮಹಾರಾಷ್ಟ್ರದ ಅಚ್ರಾ ಸಮೀಪದ ಘಾಟಕರ್‌ವಾಡಿ ಬಳಿ ಉದಯಿಸುತ್ತದೆ. ಈ ನದಿಯು ಪೂರ್ವಾಭಿಮುಖವಾಗಿ ಹರಿದು ಬೆಳಗಾವಿ ಜಿಲ್ಲೆಯ ಸಂಕೇಶ್ವರ, ಹುಕ್ಕೇರಿ, ಕೊಣ್ಣೂರು, ಬಾಗಲಕೋಟೆ ಜಿಲ್ಲೆಯ ಮುಧೋಳ ಮುಂತಾದ ಪ್ರದೇಶಗಳಲ್ಲಿ ಹರಿದು, ಚಿಮ್ಮಲಗಿ ಸಮೀಪದ ಚಿಕ್ಕ ಸಂಗಮದಲ್ಲಿ ಕೃಷ್ಣಾನದಿಯನ್ನು ಕೂಡಿಕೊಳ್ಳುತ್ತದೆ. ಘಟಪ್ರಭಾ ನದಿಯು ಚಿಕ್ಕದಾದರೂ ಸಾಂಸ್ಕೃತಿಕ ಮಹತ್ವವುಳ್ಳ ನದಿಯಾಗಿದೆ. ಘಟಪ್ರಭಾ ನದಿಯನ್ನು ಕನ್ನಡ ಕಾವ್ಯಗಳಲ್ಲಿ ಘಟ್ಟಿಗೆ ಎಂದು ಕರೆಯಲಾಗಿದೆ. ರನ್ನನ್ನು ಈ ಘಟ್ಟಿಗೆಯ ತೀರದ ಮುಧೋಳದಲ್ಲಿದ್ದಂತೆ ಹೇಳಿಕೊಂಡಿದ್ದಾನೆ. ಅರೆಮಲೆನಾಡಿನಲ್ಲಿ ಹರಿಯುವುದರಿಂದ ಇದಕ್ಕೆ ಸೇರುವ ಸಣ್ಣ ಹೊಳೆಗಳೂ ಅಧಿಕ. ಈ ನದಿಯು ಗೋಕಾಕ್‌ನ ಬಳಿ ಸುಂದರ ಜಲಪಾತವನ್ನು ಸೃಷ್ಟಿಸಿದೆ. ಇದರ ದಂಡೆಯಲ್ಲಿ ಅನಗವಾಡಿ, ಹೆರಕಲ್

ಮುಂತಾದ ಪ್ರದೇಶಗಳಲ್ಲಿ ಅಪರೂಪದ ಪುರಾತತ್ವ ನೆಲೆಗಳಿವೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ನದಿ ದಂಡೆಯು ಹೆಚ್ಚಿನ ಚಟುವಟಿಕೆಯಿಂದ ಕೂಡಿದ್ದು, ಸಂಪದ್ಭರಿತವಾಗಿತ್ತು.

**ಮಲಪ್ರಭಾ ನದಿ**

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ಜಂಬೋಟಿ ಸಮೀಪ ಮಲಪ್ರಭಾ ನದಿಯು ಉದಯಿಸುತ್ತದೆ. ಈ ನದಿಯು ಪೂರ್ವಾಭಿಮುಖವಾಗಿ ಹರಿಯುತ್ತಾ ಖಾನಾಪುರ, ಸೌಂದತ್ತಿ (ಸವದತ್ತಿ), ರಾಮದುರ್ಗ, ಬಾದಾಮಿ, ಹುನಗುಂದ ತಾಲೂಕುಗಳಲ್ಲಿ ಹರಿದು ಬಸವಣ್ಣನವರ ಐಕ್ಯಸ್ಥಳ ಕೂಡಲಸಂಗಮದಲ್ಲಿ ಕೃಷ್ಣಾ ನದಿಯನ್ನು ಕೂಡುತ್ತದೆ. ಈ ನದಿಗೆ ಸೌಂದತ್ತಿಯ ಮುನವಳ್ಳಿ ಹತ್ತಿರ ಜಲಾಶಯವೊಂದನ್ನು ನಿರ್ಮಿಸಿ ಅದಕ್ಕೆ ಶ್ರೀ ರೇಣುಕಾ ಜಲಾಶಯವೆಂದು ಕರೆಯುತ್ತಾರೆ. ಬಾದಾಮಿ, ಐಹೊಳೆ, ಪಟ್ಟದಕಲ್ಲು, ಶಿವಯೋಗಮಂದಿರ ಮುಂತಾದ ಐತಿಹಾಸಿಕ ಸ್ಥಳಗಳಲ್ಲದೆ, ಬಸವಣ್ಣನವರ ಐಕ್ಯ ಸ್ಥಳವೆಂದು ಗುರುತಿಸಲಾಗಿರುವ ಕೂಡಲಸಂಗಮವು ಈ ನದಿಯ ದಂಡೆಯಲ್ಲಿದೆ. ಇದನ್ನು ಮಲಪಹರಿ ಎಂದು ಕಾವ್ಯಗಳಲ್ಲಿಯೂ, ಮಲಹಾರಿ ಎಂದು ಶಾಸನಗಳಲ್ಲಿಯೂ ಕರೆಯಲಾಗಿದೆ. ಈ ನದಿಯ ತೀರದುದ್ದಕ್ಕೂ ಅನೇಕ ಪುರಾತತ್ವ ನೆಲೆಗಳು ಕಂಡುಬಂದಿದೆ. ಈ ನದಿಯು ಸಹ್ಯಾದ್ರಿಯ ತಪ್ಪಲಿನಲ್ಲಿ ಹುಟ್ಟಿದರೂ ಮುಂದೆ ಬಯಲು ಸೀಮೆಯಲ್ಲಿ ಹೆಚ್ಚು ಹರಿಯುತ್ತದೆ. ಈ ಕಾರಣದಿಂದಾಗಿ ಇದು ಮಳೆಗಾಲದ ನದಿಯೆಂದು ಕರೆಯುತ್ತಾರೆ.

ಕೃಷ್ಣಾ ಮತ್ತು ಅದರ ಉಪನದಿಗಳಾದ ಘಟಪ್ರಭಾ, ಮಲಪ್ರಭಾ ಮುಂತಾದ ನದಿಗಳಿಗೆ ಆಲಮಟ್ಟಿ ಮತ್ತು ನಾರಾಯಣಪುರ ಗ್ರಾಮಗಳ ಬಳಿ ದೊಡ್ಡದಾದ ಅಣೆಕಟ್ಟುಗಳನ್ನು ಕಟ್ಟಲಾಗಿದೆ. ಈ ಅಣೆಕಟ್ಟೆಗಳ ಹಿನ್ನಿರಿನಲ್ಲಿ ಭಾಗಶಃ ಮುಳುಗಡೆಯಾಗಿರುವ ಮತ್ತು ಹಿನ್ನೀರಿನಿಂದ ಬಾಧಿತವಾಗುವ ಗ್ರಾಮಗಳನ್ನು ಕೃಷ್ಣಾ ಮೇಲ್ದಂಡೆ ಯೋಜನೆಯ ಅಧಿಕಾರಿಗಳು ಗುರುತಿಸಿ, ಪರಿಹಾರ ಕಾರ್ಯವನ್ನು ಕೈಗೊಂಡು ಬಾಧಿತ ಗ್ರಾಮಗಳನ್ನು ಸ್ಥಳಾಂತರಿಸಿ ಹೊಸ ಗ್ರಾಮ, ನಗರಗಳಾಗಿ ನಿರ್ಮಿಸುವಲ್ಲಿ ಯಶಸ್ವಿಯಾಗಿದ್ದಾರೆ.

**ವಾಯುಗುಣ ಮತ್ತು ಮಳೆ**

ಬಾಗಲಕೋಟೆ ಜಿಲ್ಲೆಯು ಸಮುದ್ರಮಟ್ಟದಿಂದ ೭೨೫ ಮೀಟರ ಎತ್ತರದಲ್ಲಿರುವುದರಿಂದ ಈ ಜಿಲ್ಲೆಯ ವಾಯುಗುಣ ಉತ್ತಮವಾಗಿದೆ. ದಕ್ಷಿಣ ಭಾರತದ ಉಷ್ಣವಲಯದ ಹವಾಮಾನ ಇಲ್ಲಿದೆ. ಒಣ ಮತ್ತು ಶುಷ್ಕವಾದ ವಾಯುಗುಣ ಹೊಂದಿದ ಜಿಲ್ಲೆಯಲ್ಲಿ ಮುಂಗಾರಿನ ಅವಧಿಯಲ್ಲಿ (ಜೂನ್‌ದಿಂದ ಸೆಪ್ಟೆಂಬರ್‌ವರೆಗೆ) ಆರ್ದ್ರ ವಾಯುಗುಣ, ನಂತರ ಫೆಬ್ರವರಿ ಮಧ್ಯಭಾಗದಿಂದ ಮೇ ತಿಂಗಳ ಕೊನೆಯವರೆಗೆ ಬೇಸಿಗೆ ಕಾಲ ಮುಂದುವರಿಯುತ್ತದೆ.

ಡಿಸೆಂಬರ್‌ದಿಂದ ಫೆಬ್ರವರಿ ತಿಂಗಳವರೆಗೂ ಚಳಿಗಾಲ ಇರುತ್ತದೆ. ಜಿಲ್ಲೆಯ ಶೀತಮಾನ ಡಿಸೆಂಬರ್ ಆಗಿದ್ದು, ಈ ಅವಧಿಯಲ್ಲಿ ಕನಿಷ್ಠ ೧೫° ಸೆಂಟಿಗ್ರೇಡ್ ಉಷ್ಣಾಂಶ ಇರುತ್ತದೆ. ಮೇ ತಿಂಗಳಲ್ಲಿ ಗರಿಷ್ಟ ೩೯° ಸೆಂಟಿಗ್ರೇಡ್‌ವರೆಗೆ ಉಷ್ಣಾಂಶ ಇರುತ್ತದೆ.

"ಜಿಲ್ಲೆಯ ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೫೬೧ ಮಿ.ಮೀ. ವಾರ್ಷಿಕ ಮಳೆಯ ಪ್ರತಿಶತ ೬೮ರಷ್ಟು ಜೂನ್–ಸೆಪ್ಟೆಂಬರ್ ಅವಧಿಯಲ್ಲಿ ಬರುತ್ತದೆ. ಸೆಪ್ಟೆಂಬರ್‌ನಲ್ಲಿ ಅತೀ ಹೆಚ್ಚು ಅಂದರೆ ವಾರ್ಷಿಕ ಮಳೆಯ ಶೇ.೨೭ರಷ್ಟು ಆಗುತ್ತದೆ. ಅಕ್ಟೋಬರ್–ನವೆಂಬರ್ ತಿಂಗಳಿನಲ್ಲಿ ವಾರ್ಷಿಕ ಮಳೆ ಶೇ.೨೧ರಷ್ಟು ಹಿಂಗಾರು ಮಳೆ ಬರುತ್ತದೆ.[೮] ಕೆಲವು ಕಾಲ ಮಳೆ ಅನಿಶ್ಚಿತವಾಗಿದ್ದು, ಅನಿವಾರ್ಯವಾಗಿ ಮಳೆಯನ್ನೇ ಅವಲಂಬಿಸಿದ ಕೃಷಿಯಾಧಾರಿತ ರೈತನ ಸ್ಥಿತಿ ಚಿಂತಾಜನಕ ವಾಗಿರುತ್ತದೆ. (ವಾರ್ಷಿಕ ಸರಾಸರಿ ೩೭ ದಿವಸ ಮಳೆಯಾಗುತ್ತದೆ. ಮಳೆಯ ಪ್ರಮಾಣವನ್ನು ಅಳೆಯಲು ಅನೇಕ ವೃಷ್ಟಿ ಮಾಪಿಕ ಕೇಂದ್ರಗಳಿವೆ.) ಎಂದು ಹೇಳಬಹುದು. ಇತ್ತೀಚಿನ ದಿನಗಳಲ್ಲಿ ಮಳೆಯ ಪ್ರಮಾಣವು ಗಣನೀಯವಾಗಿ ಕುಸಿತಕಂಡಿರುವುದು ವಿಷಾದನೀಯವಾದ ಸಂಗತಿಯಾಗಿದೆ.

**ಬೆಟ್ಟ ಗುಡ್ಡಗಳು**

ಬಾಗಲಕೋಟ ಜಿಲ್ಲೆಯಲ್ಲಿ ಅನೇಕ ಬೆಟ್ಟ ಶ್ರೇಣಿಗಳಿದ್ದು, ಕಲಾದಗಿ ಶಿಲಾ ಸಮುದಾಯದ ಮೂರು ಬೆಟ್ಟ ಸಾಲುಗಳೂ ಮತ್ತು ಅಲ್ಲಲ್ಲಿ ಬಿಡಿ ಬಿಡಿಯಾಗಿ ಕೆಲವು ಬೆಟ್ಟಗಳೂ ಇವೆ. ಕಲಾದಗಿಯ ಆಗ್ನೇಯಕ್ಕೆ ತುಳಸಿಗೇರಿಯ ಬಳಿಯ ೬೨೦ ಕಿ.ಮೀ ಉತ್ತರ ಬೆಟ್ಟದಿಂದ ಕೂಡಿದೆ. ಬಾಗಲಕೋಟೆಯ ದಕ್ಷಿಣ ಹಾಗೂ ಉತ್ತರಕ್ಕೂ ಬೆಟ್ಟಗಳೂ ಹಬ್ಬಿವೆ. ಮುಚಖಂಡಿ ಹಾಗೂ ಶಿರೂರಿನ ಬಳಿಯಿರುವ ಬೆಟ್ಟಗಳೂ ೬೨೦ ಮೀಟರ ಮತ್ತು ೫೯೧ ಮೀಟರ ಎತ್ತರವಾಗಿವೆ. ಕಲಾದಗಿಯ ಈಶಾನ್ಯಕ್ಕೆ ಕೆಲವು ಗುಡ್ಡಗಳು ಸಾಲಾಗಿ ತಾಲೂಕಿನ ವಾಯುವ್ಯದ ಎಲ್ಲೆಯವರೆಗೂ ಹಬ್ಬಿವೆ. ಅಲ್ಲಿ ಈ ಸಾಲು ಎರಡು ಕವಲುಗಳಾಗಿ ಒಂದು ಕವಲು ಆಗ್ನೇಯ ದಿಕ್ಕಿನಲ್ಲಿ ಇನ್ನೊಂದು ಕವಲು ಬೀಳಗಿ ಮತ್ತು ಬಾಗಲಕೋಟ ತಾಲೂಕುಗಳ ಗಡಿಯ ಉದ್ದಕ್ಕೂ ಸಾಗಿ ನಂತರ ತಾಲೂಕಿನ ಒಳಗೆ ಬಾಗಿ ಸ್ವಲ್ಪ ದೂರದ ಮೇಲೆ ಈಶಾನ್ಯಕ್ಕೆ ತಿರುಗಿ ತಾಲೂಕಿನ ಎಲ್ಲೆಯವರೆಗೂ ಹಬ್ಬಿವೆ. ಮೊದಲನೆಯ ಕವಲಿನಲ್ಲಿ ಅತ್ಯಂತ ಉನ್ನತವಾದ ಬೆನಕಟ್ಟೆ ಬೆಟ್ಟದ ಎತ್ತರ ೫೮೨ ಮೀಟರ್, ಎರಡನೆಯ ಕವಲಿನಲ್ಲಿ ಎತ್ತರದ ಬೆಟ್ಟಗಳು ಅನುಕ್ರಮವಾಗಿ ೬೨೨ ಮೀ ಮತ್ತು ೬೧೩ ಮೀಟರ್ ಎತ್ತರವಾಗಿವೆ.[೯] ಇವುಗಳಲ್ಲಿ ಮೊದಲನೆಯದು ಘಟಪ್ರಭಾ ನದಿಯ ಬಳಿಯ ಸನಗೊಂದಿಯ ಸಮೀಪದಲ್ಲೂ, ಎರಡನೆಯದು ಉತ್ತರದ ಎಲ್ಲೆಯ ಬಳಿಯ ರಾಮಪುರದ ಹತ್ತಿರದಲ್ಲೂ ಇವೆ. ಹೀಗೆ ಅನೇಕ ಬೆಡ್ಡಗುಡ್ಡಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.

## ಅರಣ್ಯ ಸಂಪತ್ತು

ಬಾಗಲಕೋಟ ಜಿಲ್ಲೆಯಲ್ಲಿ ಅರಣ್ಯ ಪ್ರದೇಶ ಹೆಚ್ಚಾಗಿ ಕಂಡುಬರದಿದ್ದರೂ ಸಣ್ಣ ಕುರುಚಲು ಗಿಡ ಕಂಟೆಗಳು ಸಣ್ಣ ಮರಗಳು ಮಾತ್ರ ಇಲ್ಲವೆ. ಅಲ್ಲದೇ ಬೋಳು ಬೆಟ್ಟಗಳೇ ಹೆಚ್ಚಾಗಿವೆ. ೧೯೭೪-೭೫ರ ಮೊದಲು ಇಲ್ಲಿ ಅರಣ್ಯದಿಂದ ಕೆಲವು ಉತ್ಪನ್ನಗಳಿದ್ದವು. ಈಗಿನ ಉತ್ಪನ್ನಗಳೆಂದರೆ ಹೊನ್ನವರಿ ಚಕ್ಕಿ, ಕಕ್ಕಿ, ಚಕ್ಕಿ ಗಣಜಲ ಹುಲ್ಲು, ಗಿಡ ಅಂಟು, ಹುಣಸೆ ಹಣ್ಣು, ಹುಲಗಲಿ ಬೀಜ ಮುಂತಾದವುಗಳಾಗಿವೆ.[೧೦] ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬೋಳು ಬೆಟ್ಟಗಳನ್ನು ಹಸಿರಾಗಿಸಲು ವಿವಿದ ಕಾರ್ಯಕ್ರಮಗಳನ್ನು ಹಾಕಿಕೊಂಡು ನೀಲಗಿರಿ, ಬೇವು, ಹುಣಸೆ, ಜಾಲಿ, ಕರಿಜಾಲಿ ಮುಂತಾದವುಗಳನ್ನು ನೆಡುವ ಕಾರ್ಯಕ್ರಮ ಹಾಕಿಕೊಂಡು ಕೆಲವು ಮಟ್ಟಿಗೆ ಹಸಿರು ಚೇತರಿಕೆಗೊಳಿಸುವಲ್ಲಿ ಸಾಕಷ್ಟು ಶ್ರಮಿಸುತ್ತಿವೆ. ಸಸ್ಯಪಾಲನಾ ಕೇಂದ್ರದಲ್ಲಿ ಪ್ರತಿವರ್ಷ ನೆಡುಸೋಪುಗಳನ್ನು ಬೆಳೆಸಲಿಕ್ಕೆ ಬೇಕಾಗುವ ನೀಲಗಿರಿ ಮತ್ತು ಸ್ಥಳೀಯ ಜಾತಿಯ ಸಸಿಗಳನ್ನು ತಯಾರಿಸಲಾಗುತ್ತದೆ. ಪ್ರತಿವರ್ಷ ಮಳೆಗಾಲದಲ್ಲಿ ರಸ್ತೆಯ ಎರಡೂ ಪಕ್ಕದಲ್ಲೂ ಸಸಿಗಳನ್ನು ನೆಡುವ ಕಾರ್ಯ ಕೈಗೊಳ್ಳಲಾಗಿದೆ. ಆಸಕ್ತಿಯುಳ್ಳ ರೈತನಿಗೆ ಸಮೀಪದ ಅರಣ್ಯಾಧಿಕಾರಿಗಳು ಪ್ರತಿಯೊಬ್ಬ ರೈತನಿಗೂ ಸಸಿಗಳನ್ನು ಉಚಿತವಾಗಿ ನೀಡಿ ಅರಣ್ಯಾಭಿವೃದ್ಧಿಗೆ ಪ್ರೋತ್ಸಾಹಿಸಲಾಗುತ್ತಿದೆ ಯಲ್ಲದೆ, ವಿಶೇಷ ಯೋಜನೆಯ ಅಡಿಯಲ್ಲಿ ಅವರ ಸ್ವಂತ ಜಮೀನಿನಲ್ಲಿ ಸರ್ಕಾರದ ಖರ್ಚಿನಲ್ಲಿಯೇ ನೆಡುತೋಪುಗಳನ್ನು ಬೆಳೆಸಲಾಗುತ್ತಿದೆ. ಜಿಲ್ಲೆಯ ಯಡಹಳ್ಳಿ, ಅರಕೇರಿ, ಅರಣ್ಯ ಪ್ರದೇಶದಲ್ಲಿ ಇತ್ತೀಚಿಗೆ ಚಿಂಗಾರಿ ವನ್ಯಧಾಮ ನಿರ್ಮಿಸಲಾಗಿದೆ.

ಒಟ್ಟಿನಲ್ಲಿ ಪಶ್ಚಿಮ ಘಟ್ಟಗಳಂತಹ ಕಾಡುಗಳು ಈ ಜಿಲ್ಲೆಯಲ್ಲಿ ಕಂಡುಬರದಿದ್ದರೂ, ಹುನಗುಂದ ಮತ್ತು ಬಾಗಲಕೋಟೆ ತಾಲೂಕುಗಳನ್ನು ಹೊರತುಪಡಿಸಿದರೆ ಉಳಿದ ಕಡೆಗೆ ಅರಣ್ಯ ಗಮನಾರ್ಹವಾಗಿದೆ. ಜಿಲ್ಲೆಯ ಕೆಲವು ಭಾಗಗಳಲ್ಲಿ ಅಲ್ಲಲ್ಲಿ ದಟ್ಟ ಅರಣ್ಯಗಳಿರುವುದು ಗಮನಾರ್ಹ ಸಂಗತಿಯಾಗಿದೆ.

## ಖನಿಜ ಸಂಪತ್ತು ಮತ್ತು ಕೈಗಾರಿಕೆಗಳು

ಬಾಗಲಕೋಟೆ ಜಿಲ್ಲೆಯ ಬಹುಭಾಗ ಕರೆ ಎರೆಮಣ್ಣು ಮತ್ತು ಮರಳು ಮಿಶ್ರಿತ ಮಣ್ಣಿನಿಂದ ಕೂಡಿದ ಸಮತಟ್ಟಾದ ಪ್ರದೇಶವಾಗಿರುವುದರಿಂದ ಅಷ್ಟೇನು ಹೇಳಿಕೊಳ್ಳುವಂಥ ಖನಿಜ ಸಂಪತ್ತು ದೊರೆಯದಿದ್ದರು ಸಣ್ಣಪ್ರಮಾಣದ ಖನಿಜ ಸಂಪತ್ತು ದೊರೆಯುವುದರಿಂದ ಅನೇಕ ರೀತಿಯ ಬೃಹತ್ ಪ್ರಮಾಣದ ಹಾಗೂ ಸಣ್ಣ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ. ಈ ಜಿಲ್ಲೆಯ ಪ್ರಮುಖ ಖನಿಜಗಳೆಂದರೆ 'ಸುಣ್ಣದ ಕಲ್ಲು' 'ಸುಣ್ಣ ಶಿಲೆ' ಎಂದರೆ ಜೈವಿಕ ಮತ್ತು

ಅಜೈವಿಕ ವಿಧಾನದಿಂದ ರೂಪಗೊಂಡು ಕಾರ್ಬೋನೇಟ ಶಿಲೆಗಳಾಗಿವೆ. ಇವು ಬಾಗಲಕೋಟೆ ಜಿಲ್ಲೆಯ ಅನೇಕ ತಾಲೂಕಿನ ಸ್ಥಳಗಳಲ್ಲಿ ಹೇರಳವಾಗಿ ದೊರೆಯುತ್ತದೆ. ಶೆಲ್ಲಿಕೇರಿ ಗ್ರಾಮದಲ್ಲಿ ಮೂರ್ತಿ ತಯಾರಿಸಲು ಬೇಕಾಗುವ ಕೃಷ್ಣಶಿಲೆ ಹಾಗೂ ನೀರಲಕೇರಿ ಗ್ರಾಮದಲ್ಲಿ ಡೋಲೋಮೈಟ್ ಶಿಲೆ ದೊರೆಯುತ್ತದೆ. ಖಜ್ಜಿಡೋಣಿ, ಗದ್ದನಕೇರಿ ಗ್ರಾಮಗಳ ಸಮೀಪದ ಪ್ರದೇಶಗಳಲ್ಲಿ ಸುಣ್ಣದ ಶಿಲೆಗಳಲ್ಲಿ ತಾಮ್ರ ಸಂಚಯನದ ಮೆಚ್ಚೆಗಳಿರುವುದು ಪತ್ತೆಯಾಗಿದೆ. ಬಾದಾಮಿ ತಾಲೂಕಿನ ಗುಳೇದಗುಡ್ಡದ ದಕ್ಷಿಣಕ್ಕಿರುವ ಪರ್ವತಿ ಮತ್ತು ಮುರುಡಿಗುಡ್ಡ ಪ್ರದೇಶಗಳಲ್ಲಿ ಸಿಲಿಕಾ(ಮರಳುಗಲ್ಲು) ನಿಕ್ಷೇಪವಿದೆ. ಇಲ್ಯಾಳ ಗ್ರಾಮದ ಪ್ರದೇಶದಲ್ಲಿ ಅಬ್ರಕ್(ಕಾಗೆ ಬಂಗಾರ)ದ ಸಂಚಯವಿದೆ. ಯಲ್ಲನಹಟ್ಟಿ ಭಾಗದಲ್ಲಿ ಬಿರುಸಾದ ಎಲೆಗಳುಳ್ಳ ಕಲ್ನಾರಿನ ಶಿಲೆಗಳಿವೆ. ಹುನಗುಂದ ತಾಲೂಕಿನ ರಾಮಥಾಳದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪವಿದ್ದು, ಈಗಾಗಲೇ ಉತ್ಪಾದನೆಗೆ ತಯಾರಿ ನಡೆದಿದೆ. ಮಹಾಕೂಟ ಎಂಬ ಪ್ರದೇಶದಲ್ಲಿ ಹೆಮಟೈಟ್ ದರ್ಜೆಯ ಅದಿರಿದೆ.[೧೧] ಜಿಲ್ಲೆಯಲ್ಲಿ ಶೇ.೬೦ರಷ್ಟು ಮ್ಯಾಂಗನೀಸ್ ಅಂಶವಿರುವುದು ಕಂಡುಬರುವುದು. ಮ್ಯಾಂಗನೀಸ್ ಅದಿರಾದ ಪೈರುಲು ಸೈಟವು ಜಿಲ್ಲೆಯ ವಿವಿಧ ಭಾಗಗಳಲ್ಲಿರುವುದು ಕಂಡುಬರುತ್ತದೆ. ಮುಧೋಳ ತಾಲೂಕಿನ ಲೋಕಾಪುರ, ನಾಗಣಾಪುರ, ಮುದ್ದಾಪುರ, ಜಾಲಿಕಟ್ಟಿ ಗ್ರಾಮಗಳ ಪ್ರದೇಶಗಳಲ್ಲಿ ಡೋಲೋಮೆಂಟ್ ಮತ್ತು ಸೀಮೆ ಸುಣ್ಣದಕಲ್ಲು ನಿಕ್ಷೇಪವಿದ್ದುದರಿಂದ ಇಲ್ಲಿ ಸುಣ್ಣದ ಬಟ್ಟಿ, ಸಿಮೆಂಟ್ ಕಾರ್ಖಾನೆಗಳು ಸ್ಥಾಪನೆಗೊಂಡಿವೆ. ಬಾಗಲಕೋಟೆ ಜಿಲ್ಲೆಯನ್ನು ಕೈಗಾರಿಕಾ ಅಭಿವೃದ್ಧಿಯಲ್ಲಿ ಹಿಂದುಳಿದ ಜಿಲ್ಲೆ ಎಂದು ಪರಿಗಣಿಸಲಾಗಿತ್ತು. ಇದಕ್ಕೆ ಅನೇಕ ಕಾರಣಗಳಿವೆ. ಮೇಲಿಂದ ಮೇಲೆ ಬರಗಾಲ ಮತ್ತು ಕ್ಷಾಮಗಳಿಂದ ಕೂಡಿದ ಈ ಜಿಲ್ಲೆಯಲ್ಲಿ ಕೃಷಿಗೆ ಪ್ರಥಮ ಪ್ರಾಶ್ಯಸ್ತವನ್ನು ನೀಡಿದೆ. ಇತ್ತೀಚಿಗೆ ಬಾಗಲಕೋಟೆ ಜಿಲ್ಲೆಯು ಸಕ್ಕರೆ, ಸಿಮೆಂಟ್ ಉದ್ಯಮದ ಬೆಳವಣಿಗೆಯಿಂದಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಮಹತ್ತರವಾದ ಗಣನೀಯವಾದ ಮೈಲುಗಲ್ಲು ಸಾಧಿಸಿದೆ. ಮೊದಲಿನಿಂದಲೂ ನಡೆದುಬಂದ ಮುಖ್ಯ ಉದ್ಯೋಗವೆಂದರೆ ಕೃಷಿ, ಈ ವ್ಯವಸಾಯದ ನಂತರ ಮತ್ತೊಂದು ಮುಖ್ಯ ಉದ್ಯೋಗವೆಂದರೆ ನೇಕಾರಿಕೆ, ಜಿಲ್ಲೆಯ ನಗರಗಳಲ್ಲಿ ದೊಡ್ಡ ಪ್ರಮಣದಲ್ಲಿಯೂ ಮತ್ತು ಗ್ರಾಮಗಳಲ್ಲಿ ಸಣ್ಣ ಪ್ರಮಾಣದಲ್ಲಿಯೂ ನಡೆಯುವ ನೇಕಾರಿಕೆಯ ಉದ್ಯೋಗ ಜಿಲ್ಲೆಯ ಬಹಳಷ್ಟು ಜನರಿಗೆ ಉದ್ಯೋಗವನ್ನು ಒದಗಿಸಿದೆ. ಮೊದಮೊದಲು ಕೇವಲ ಕೈಮಗ್ಗಗಳ ಮೇಲೆ ನಡೆಯುತ್ತಿದ್ದ ನೇಕಾರಿಕೆ ಈಗ ವಿದ್ಯುತ್ ಚಾಲಿತ ಮಗ್ಗಗಳ ಮೇಲೆ ಭರದಿಂದ ನಡೆಯುತ್ತದೆ.

ಗ್ರಾಮಾಂತರ ಪ್ರದೇಶಗಳಲ್ಲಿ, ಕಂಬಾರಿಕೆ, ಬಡಿಗತನ, ಚಮ್ಮಾರಿಕೆ, ಹೊಲಿಗೆ, ಗುಡಿ ಕೈಗಾರಿಕೆ, ಹಗ್ಗ ತಯಾರಿಸುವುದು, ವಿಗ್ರಹಗಳ ಕೆತ್ತನೆ, ನೇಕಾರಿಕೆ, ವ್ಯವಸಾಯ ಮುಂತಾದ

ಸಣ್ಣ ಪ್ರಮಾಣದ ಉದ್ಯೋಗಗಳು ಈ ಜಿಲ್ಲೆಯಲ್ಲಿ ಕಾಣಬಹುದು. ಬಾಗಲಕೋಟೆ ಜಿಲ್ಲೆಯಲ್ಲಿ ಪ್ರಾದೇಶಿಕವಾಗಿ ದೊರೆಯುವ ಖನಿಜ ಸಂಪತ್ತನ್ನು ಮತ್ತು ಕಚ್ಚಾ ಮಾಲನ್ನು ಉಪಯೋಗಿಸಿಕೊಂಡು ಬೃಹತ್ ಪ್ರಮಾಣದ ಉದ್ದಿಮೆಗಳು ಬೆಳೆದು ನಿಂತಿವೆ. ಅಂತಹ ಉದ್ದಿಮೆಗಳಲ್ಲಿ ಬಾಗಲಕೋಟೆ ಸಿಮೆಂಟ್ ಕಾರ್ಖಾನೆ, ಲೋಕಾಪುರದಲ್ಲಿ ಲೋಕಾಪುರ ಸಿಮೆಂಟ್, ನಾಗಾಣಾಪುರದಲ್ಲಿ ಕ್ವಾಲಿಟಿ ಸಿಮೆಂಟ್ ವರ್ಕ್ಸ್, ಆಲಗುಂಡಿ ಹತ್ತಿರದ ಮಹಾವೀರ ಸಿಮೆಂಟ್, ಹಲಕಿ, ನಿಂಗಾಪುರ ಹತ್ತಿರ ವಾಸುಪೂಜ್ಯ ಸಿಮೆಂಟ್, ಮುದ್ದಾಪುರ ಹತ್ತಿರ ಜಿ.ಕೆ.ಸಿಮೆಂಟ್, ಕಲಾದಗಿ ಹತ್ತಿರ ಕೇಶವ ಸಿಮೆಂಟ್ ಮುಂತಾದವುಗಳಾಗಿವೆ. ಬಾಗಲಕೋಟ ಜಿಲ್ಲೆಯ ಪ್ರಮುಖ ವಾಣಿಜ್ಯ ಬೆಳೆಯಾದ ಕಬ್ಬನ್ನು ಉಪಯೋಗಿಸಿಕೊಂಡು ಸುಮಾರು ಹತ್ತು ಸಕ್ಕರೆ ಕಾರ್ಖಾನೆಗಳು ಕಾರ್ಯನಿರ್ವಹಿಸುತ್ತಿವೆ. ಅದರಲ್ಲಿ ರನ್ನ ಸಕ್ಕರೆ ಕಾರ್ಖಾನೆ, ನಿರಾಣಿ ಶುಗರ್ಸ್, ಬಾಡಗಂಡಿ ಶುಗರ್ಸ್, ಪ್ರಭುಲಿಂಗೇಶ್ವರ ಶುಗರ್ಸ್, ಜಮಖಂಡಿ ಸಕ್ಕರೆ ಕಾರ್ಖಾನೆಗಳು ಪ್ರಮುಖವಾಗಿವೆ. ಅಲ್ಲದೆ ಬೆಲ್ಲವನ್ನು ತಯಾರಿಸುವುದು ಗಾಣದ ಮನೆಗಳು ಸಹ ಇಲ್ಲಿವೆ. ಇವುಗಳ ಜೊತೆಗೆ ಔದ್ಯೋಗಿಕ ಮದ್ಯಸಾರ ತಯಾರಿಸುವ ಯಂತ್ರ ಘಟಕವನ್ನು ಇಲ್ಲಿ ಸ್ಥಾಪಿಸಲಾಗಿದೆ. ಹತ್ತಿ ಒಕ್ಕುವ ಕಾರ್ಖಾನೆಗಳು ಮತ್ತು ಶೇಂಗಾ ಎಣ್ಣೆ ಗಿರಣಿಗಳು ಕೂಡಾ ಇವೆ.

ಒಟ್ಟಿನಲ್ಲಿ ಬಾಗಲಕೋಟೆ ಜಿಲ್ಲೆಯಾದ್ಯಂತ ಸಮೃದ್ಧವಾಗಿ ಬೆಳೆಯುವ ಕಬ್ಬು ಮತ್ತು ನೈಸರ್ಗಿಕವಾಗಿ ದೊರೆಯುವ ಸುಣ್ಣದ ಕಲ್ಲು, ಇವುಗಳನ್ನು ಉಪಯೋಗಿಸಿ ಸಕ್ಕರೆ ಮತ್ತು ಸಿಮೆಂಟ್ ಉತ್ಪಾದನೆಗಳ ಔದ್ಯೋಮಿಕ ಕ್ಷೇತ್ರವಷ್ಟೇ ಸಫಲವಾಗಿವೆ. ಇನ್ನುಳಿದಂತೆ ಸಣ್ಣ ಪುಟ್ಟ ಗುಡಿ ಕೈಗಾರಿಕೆಗಳು ಇನ್ನೂ ಹೆಚ್ಚಿಗೆ ಬೆಳೆಯುವ ನಿರೀಕ್ಷೆಯಲ್ಲಿವೆ. ಇತ್ತೀಚಿಗೆ ಬಾಲ್‌ಪೆನ್ ಮತ್ತು ರಿಫಿಲ್‌ಗಳನ್ನು ತಯಾರಿಸುವಂತಹ ಘಟಕಗಳ ಸ್ಥಾಪನೆಗೆ ಪುಷ್ಟಿಕೊಡಬಹುದಾಗಿದೆ.

**ವ್ಯವಸಾಯ**

ಬಾಗಲಕೋಟೆ ಜಿಲ್ಲೆಯು ಹಳ್ಳಿಗಳಿಂದ ಕೂಡಿದ್ದು, ಕೃಷಿಯೇ ಇಲ್ಲಿಯ ಜನರ ಜೀವನಾಡಿ 'ಒಕ್ಕಲಿಗ ಬೆಳೆದರೆ ನಾಡೆಲ್ಲ ಖುಷಿ, ಇಲ್ಲದಿದ್ದರೆ ಎಲ್ಲವೂ ಹುಸಿ ಎಂಬ ಜನಪದ ಗಾದೆಯಂತೆ, ಬಾಗಲಕೋಟೆ ಜಿಲ್ಲೆಯ ಜನಸಂಖ್ಯೆಯ ಶೇ.೭೫% ರಷ್ಟು ಜನರು ವ್ಯವಸಾಯದಲ್ಲಿ ತೊಡಗಿದ್ದಾರೆ. ಈ ಜಿಲ್ಲೆಯ ಹಿನ್ನಾಡು ಕೆಲ ಬಂಜರು ಮತ್ತು ಗುಡ್ಡಗಾಡು ಪ್ರದೇಶಗಳನ್ನು ಬಿಟ್ಟರೆ ಉಳಿದೆಲ್ಲ ಭೂಮಿ ಫಲವತ್ತಾಗಿದೆ. ಕೆಂಪು ಮರಳು ಮಿಶ್ರಿತ (ಮಸಾರಿ) ಭೂಮಿ ಮುಂಗಾರು ಬೆಳೆಗೆ ಶ್ರೇಷ್ಠ ದರ್ಜೆಯಾದರೆ; ಕಪ್ಪು ಮಣ್ಣಿನ(ಎರೆ ರವೆ

ಮಣ್ಣು) ಭೂಮಿ ಹಿಂಗಾರಿ ಬೆಳೆಗಳಿಗೆ ಶ್ರೇಷ್ಠ ದರ್ಜೆಯಾಗಿದೆ. ಒಣ ಬೇಸಾಯವನ್ನು (ಮುಂಗಾರು-ಮಳೆಗಾಲ) ಅವಲಂಬಿಸಿದ ಕೃಷಿಕರು ಮೇಲಿಂದ ಮೇಲೆ ಬರಗಾಲದ ಬವಣೆಗೆ ಸಿಲುಕಿಕೊಳ್ಳುವುದು[೧೨] ವರ್ಷದಿಂದ ವರ್ಷಕ್ಕೆ ನಡೆದುಕೊಂಡು ಬಂದಿರುವುದು ಸಾಮಾನ್ಯವಾಗಿದೆ.

ಈ ಜಿಲ್ಲೆಯ ಹೆಚ್ಚಿನ ಕೃಷಿಕರೆಲ್ಲ ಸ್ವಂತ ಸಾಗುವಳಿ ಮಾಡುವರು. ನೀರಾವರಿ ಸೌಕರ್ಯವು ಈ ಜಿಲ್ಲೆಯ ವ್ಯವಸಾಯದ ಒಂದು ವಿಶೇಷ ಆಕರ್ಷಣೆಯಾಗಿದೆ. ಸಾಮಾನ್ಯವಾಗಿ ಈ ಜಿಲ್ಲೆಯ ಎಲ್ಲ ಕಡೆಗೂ ಭೂಮಿಯಲ್ಲಿ ನೀರು ಸಿಗುವುದರಿಂದ ರೈತರು ತಮ್ಮ ತಮ್ಮ ಹೊಲ, ತೋಟಗಳಲ್ಲಿ ಸ್ವತಂತ್ರವಾದ ಬಾವಿ, ಕೊಳವೆ ಬಾವಿಗಳ ಮೂಲಕ ನೀರನ್ನು ಬಳಸಿಕೊಳ್ಳುತ್ತಾರೆ. ಸ್ಥಳೀಯ ವಾಣಿಜ್ಯ ಬ್ಯಾಂಕುಗಳು ಈ ದಿಶೆಯಲ್ಲಿ ರೈತರಿಗೆ ಆರ್ಥಿಕ ಧನ ಸಹಾಯವನ್ನೊದಗಿಸುವಲ್ಲಿ ಸಹಾಯಕಾರಿಯಗಿವೆ.

ಜಿಲ್ಲೆಯಲ್ಲಿ ಬೆಳೆಯುವ ಮತ್ತು ಆರ್ಥಿಕ ಬೆಳೆಗಳೆಂದರೆ ಕಬ್ಬು, ಹತ್ತಿ, ಈರುಳ್ಳಿ, ಶೇಂಗಾ, ಸೂರ್ಯಕಾಂತಿ. ಈ ಬೆಳೆಗಳಿಗೆ ಬೇಕಾದ ಸೂಕ್ತ ಹವಾಮಾನ ನೀರು ಮತ್ತು ಮಣ್ಣು ಲಭ್ಯವಿರುವುದರಿಂದ ಅವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬೆಳೆಯಲಾಗುತ್ತಿದೆ. ಜೀವನಾವಶ್ಯಕ ಸಣ್ಣ ಪುಟ್ಟ ತರಕಾರಿಗಳನ್ನೂ ಈ ಜಿಲ್ಲೆಯಲ್ಲಿ ಬೆಳೆಯಲಾಗುತ್ತದೆ. ಘಟಪ್ರಭಾ ನದಿಯ ದಂಡೆಯಲ್ಲಿ ಬೆಳೆಯುವ ಮುಳ್ಳು ಬದನೆಕಾಯಿಗಳು ಮುಳ್ಳುಗಾಯಿಗಳೆಂದೇ ಪ್ರಸಿದ್ಧಿ ಪಡೆದಿವೆ. ಈ ಜಿಲ್ಲೆಯ ಮುಖ್ಯ ಬೆಳೆಗಳೆಂದರೆ ಜೋಳ, ಮುಸುಕಿನ ಜೋಳ, ಕಬ್ಬು, ಹತ್ತಿ, ಗೋಧಿ, ಶೇಂಗಾ, ಸಜ್ಜೆ ಇತ್ಯಾದಿಗಳಾಗಿವೆ.

ಮಳೆ ಆಶ್ರಿತ ಭೂಮಿಯಲ್ಲಿ ಹಂಗಾಮಿ ಬೆಳೆಗಳನ್ನು ಮುಂಗಾರಿ ಮತ್ತು ಹಿಂಗಾರಿ ಎಂಬ ಎರಡು ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ವರ್ಷದಲ್ಲಿ ಪ್ರತಿ ಆರು ತಿಂಗಳಿಗೊಂದು ಬಾರಿಯಂತೆ ಫಸಲನ್ನು ಬೆಳೆದು ವಾಡಿಕೆಯಂತೆ ಕೃಷಿ ಸಾಗುವಳಿ ನಡೆಯುತ್ತದೆ. ರೈತರು ತಮ್ಮ ಒಣ ಬೇಸಾಯ(ಖುಷ್ಕಿ) ಜಮೀನಿನಲ್ಲಿ ತಮ್ಮ ಆಹಾರಕ್ಕಾಗಿ ಮತ್ತು ಇತರೆ ಅನುಕೂಲಗಳಿಗಾಗಿ ಬೇಕಾಗುವ ಸಕಲ ದವಸ ಧಾನ್ಯಗಳನ್ನು ಅಲ್ಪಪ್ರಮಾಣದಲ್ಲಾದರೂ ಬೆಳೆಯಲಾಗುತ್ತದೆ. ಮುಂಗಾರಿ ಹಂಗಾಮಿನಲ್ಲಿ ಜೋಳ ಮತ್ತು ಸಜ್ಜೆಯನ್ನು ಪ್ರಮುಖವಾದ ಆಹಾರದ ಬೆಳೆಯಾಗಿ ಬೆಳೆದರೆ, ಅದರ ಜೊತೆಗೆ ದ್ವಿದಳ ಧಾನ್ಯಗಳಾದ ತೊಗರಿ, ಅಲಸಂದಿ, ಅವರೆ, ಹೆಸರು, ಎಳ್ಳು, ಗುರಳ್ಳು ಮುಂತಾದ ಅನೇಕ ತರಹದ ವಾಣಿಜ್ಯ ಬೆಳೆಗಳನ್ನು ಸಹ ಬೆಳೆಯುತ್ತಾರೆ. ಬಾಗಲಕೋಟೆ ಜಿಲ್ಲೆಯಲ್ಲಿ ಪ್ರಮುಖವಾಗಿ ಕೃಷಿ, ಮಲಪ್ರಭಾ, ಘಟಪ್ರಭಾ ನದಿಗಳು ಹರಿಯುವುದರಿಂದ ನೀರಾವರಿ ಸೌಲಭ್ಯವು ಅನುಕೂಲಕರವಾಗಿದೆ. ರಾಜ್ಯ ಹಾಗೂ ಕೇಂದ್ರ ಸರಕಾರಗಳು ನದಿಗಳಿಗೆ ಏತ ನೀರಾವರಿ ಯೋಜನೆಗಳನ್ನು ಹಮ್ಮಿಕೊಂಡು

ಸಾಕಷ್ಟು ಭೂಮಿಗೆ ನೀರನ್ನು ಒದಗಿಸುವಲ್ಲಿ ಸಹಾಯಕವಾಗಿವೆ. ಚಿಕ್ಕ ನೀರಾವರಿ ಯೋಜನೆಗಳು ಕಾರ್ಯಗತದಲ್ಲಿದ್ದು, ಅವುಗಳ ಕಾರ್ಯ  ನಿರ್ವಹಣೆಯು ಅಷ್ಟೊಂದು ಸಮರ್ಪಕವಾಗಿ ನಡೆದಿರುವುದಿಲ್ಲ. ನದಿಗಳಷ್ಟೇ ಅಲ್ಲದೇ ಕೆರೆ, ಬೋರವೆಲ್, ಬಾವಿಗಳ ಮೂಲಕವೂ ಜಮೀನುಗಳಿಗೆ ನೀರು ಒದಗಿಸಲಾಗುತ್ತಿದೆ.

## ಜನವರ್ಗ ಮತ್ತು ಜನಜೀವನ

ಬಾಗಲಕೋಟೆ ಜಿಲ್ಲೆಯಲ್ಲಿ ವಿವಿಧ ಜಾತಿ, ಮತ, ಧರ್ಮಗಳಿಗೆ ಸೇರಿದ ಜನ ಸಮುದಾಯವಿದೆ. ಇಲ್ಲಿ ಲಿಂಗಾಯತರು(ವೀರಶೈವ), ಬ್ರಾಹ್ಮಣರು, ಮರಾಠರು, ರೆಡ್ಡಿಗಳು, ಕುರುಬರು, ಬೇಕರು, ವಡ್ಡರು(ಬೋವಿ), ಪಾಂಚಾಳರು, ಗಾಣಿಗರು, ಕುಂಬಾರರು, ಕಂಬಾರರು, ಲಂಬಾಣಿಗಳು, ನೇಕಾರರು, ಸಮಗಾರರು,ಜೈನರು, ಕ್ರೈಸ್ತರು, ಮರ್ವಾಡಿಗಳು, ಮುಸಲ್ಮಾನರು, ಹರಿಜನರು, ಗಿರಿಜನರು, ಕೊರಮರು, ಕೊಂಚಿಕೊರವರು, ಶಿಕ್ಕಲಗಾರರು(ಬಂಗಿಗಳು), ಸುಡಗಾಡು ಸಿದ್ಧರು, ಗೊಂದಲಿಗರು ಮುಂತಾದ ಅನೇಕ ಜಾತಿ ಮತಗಳ ಜನರು ವಾಸವಾಗಿದ್ದಾರೆ. ಜಿಲ್ಲೆಯಲ್ಲಿ ಬ್ರಾಹ್ಮಣ ಸಮುದಾಯದವರು ಸಾಂಸ್ಕೃತಿಕವಾಗಿ ಅಗ್ರಸ್ಥಾನವನ್ನು ಪಡೆದಿರುವುದನ್ನು ಕಾಣುತ್ತೇವೆ. ಉಳಿದ ಜನಾಂಗ ಹೆಚ್ಚಾಗಿ ಕೃಷಿ ಮೇಲೆ ಅವಲಂಬಿತವಾಗಿವೆ. ಹೀಗೆ ವಿವಿಧ ಜಾತಿ, ಮತ, ವರ್ಗಗಳಿಗೆ ಸಂಬಂಧಿಸಿದ ಜನರು ಈ ಜಿಲ್ಲೆಯಲ್ಲಿ ನೆಲೆಸಿರುವುದನ್ನು ಕಾಣುತ್ತೇವೆ.

ಭಾವಸಾರ ಕ್ಷತ್ರಿಯರೆಂಬ ಶಿಂಪಿ ಕಸಬಿನ ಮರಾಠ ಭಾಷಿಕರಿದ್ದಾರೆ. ಇವರು ಪಂಢರಪುರ ವಿಠ್ಠಲನ ಭಕ್ತರು. ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯರು, ವೃತ್ತಿಯಲ್ಲಿ ರೇಷ್ಮೆ ನೇಕಾರರಾಗಿದ್ದು, ಅಂಭಬಾವನಿ ಭಕ್ತರಾಗಿದ್ದಾರೆ. ರಜಪೂತರು ಬಹಳ ಕಡಿಮೆಯಿದ್ದು, ಅವರು ಬಹುಶಃ ಉತ್ತರದಿಂದ ಸೈನಿಕರಾಗಿ ಬಂದು ಇಲ್ಲಿಯೇ ಉಳಿದುಕೊಂಡಿರಬಹುದೆಂದು ಊಹಿಸಲಾಗಿದೆ. ದುರ್ಗಾ, ಮಹಾಲಕ್ಷ್ಮಿ ಇವರ ಆರಾಧ್ಯದೈವಗಳು.[೧೩] ಇಲ್ಲಿನ ಕುರುಬರು ಕುರಿಸಾಕಣಿಕೆಯನ್ನು ಒಕ್ಕಲುತನ ದೊಂದಿಗೆ ಅಲ್ಪ ಪ್ರಮಾಣದಲ್ಲಿ ಉಪ ಕಾಯಕವನ್ನಾಗಿ ಮಾಡಿಕೊಂಡಿದ್ದಾರೆ. ಕುಂಬಾರರು, ಬಡಿಗರು, ಪಾಂಚಾಳರು, ಚಮ್ಮಾರರು, ಹರಿಜನರು, ಗಿರಿಜನರು ಮುಂತಾದ ಜನಾಂಗದವರು ತಮ್ಮ ಕುಲಕಸಬನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಪಾಂಚಾಲರು ಬೇಡರು, ಗಾಣಿಗರು, ಲಂಬಾಣಿಗರು, ಇಲ್ಲಿ ವಿರಳವಾಗಿದ್ದು, ತಮ್ಮ ತಮ್ಮ ಕುಲಕಸಬುಗಳಲ್ಲಿ ತೊಡಗಿದ್ದಾರೆ. ಜಿಲ್ಲೆಯ ಹಳ್ಳಿಗಳಲ್ಲಿ ಹಾಗೂ ನಗರಗಳಲ್ಲಿ ಹಿಂದೂ ಮುಸ್ಲಿಂರು ಭೇದ ಭಾವವಿಲ್ಲದೇ ಎಲ್ಲ ಹಬ್ಬ ಹರಿದಿನಗಳನ್ನು ಆಚರಿಸುವುದು ಒಂದು ಐಕ್ಯತೆಯ ಸಂಕೇತವಾಗಿದೆ.

ಈ ಜಿಲ್ಲೆಯಲ್ಲಿ ಇನ್ನೂ ಅನೇಕ ಜನವರ್ಗಗಳಿದ್ದು, ಮುಖ್ಯ ಪಂಗಡಗಳೊಂದಿಗೆ ಉಪಪಂಗಡಗಳ ಜನರು ಒಂದಾಗಿ ಸಹಬಾಳ್ವೆ ನಡೆಸುತ್ತಿರುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಜಿಲ್ಲೆಯ ಜನರು ಮುಖ್ಯ ಉದ್ಯೋಗ ವ್ಯವಸಾಯವೇ ಆಗಿದೆ. ನೀರಾವರಿ ಸೌಕರ್ಯ ಹಾಗೂ ಫಲವತ್ತಾದ ಭೂಮಿ ಎರಡೂ ಇರುವುದರಿಂದ ಕೃಷಿಯ ಬಗೆಗೆ ಜನರಿಗೆ ಉತ್ಸಾಹವಿದೆ. ವ್ಯಾಪಾರ, ನೌಕರಿ ಇತ್ಯಾದಿ ಅನ್ಯ ಕೆಲಸಗಳಲ್ಲಿ ತೊಡಗಿದವರನ್ನು ಬಿಟ್ಟರೆ, ಉಳಿದವರೆಲ್ಲರೂ ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ತಮ್ಮ ತಮ್ಮ ಹೊಲದಲ್ಲಿ ಅಥವಾ ತೋಟಗಳಲ್ಲಿ ಮನೆ ಇಲ್ಲವೆ ಗುಡಿಸಲು ಕಟ್ಟಿಸಿಕೊಂಡು ಅಲ್ಲಿಯೇ ವಾಸಿಸುತ್ತಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಬಾಗಲಕೋಟೆ ಜಿಲ್ಲೆಯು ತನ್ನದೇ ಆದ ಭೌಗೋಳಿಕ ಪರಿಸರವನ್ನು ಹೊಂದಿದ್ದು ನೈಸರ್ಗಿಕ ಸಂಪತ್ತಿನಿಂದಾಗಿ ಮಹತ್ವ ಪಡೆದಿದೆ. ಅಲ್ಲದೆ ಈ ಜಿಲ್ಲೆಯಲ್ಲಿ ವಿವಿಧ ಜಾತಿ, ಮತ ಪಂಥದವರೂ ಸಹ ಸ್ನೇಹ ಸೌಹಾರ್ದಯುತವಾಗಿ ಬಾಳುತ್ತಿರುವುದನ್ನು ಕಾಣುತ್ತೇವೆ. ಹೀಗಾಗಿ ಈ ಜಿಲ್ಲೆಯು ಭೌಗೋಳಿಕವಾಗಿ ವೈವಿಧ್ಯತೆ ಹಾಗೂ ವೈಶಿಷ್ಟ್ಯತೆಗಳಿಂದ ಕೂಡಿದೆ. "ರಾಮಾಯಣ ಕಾಲದಲ್ಲಿ ಲಂಕಾಸುರು ರಾವಣನು ಬಾಗಲಕೋಟೆ ಪ್ರದೇಶವನ್ನು ವಾದ್ಯಗಾರರ(ಭಜಂತ್ರಿ)ವರಿಗೆ ಧಾನವಾಗಿ ಕೊಟ್ಟಿದ್ದನು ಎಂಬ ಐತಿಹ್ಯವಿದೆ. ಹಾಗಾಗಿ ಲಂಕಾಸುರ ರಾವಣನ ಆಡಳಿತದ ವ್ಯಾಪ್ತಿಯು ಬಾಗಲಕೋಟೆ ಅಥವಾ ಅಂದಿನ ಬಂಗಡಿಕೂಟ, ಬಾಗಡಿಗೆವರೆಗೂ ಇದ್ದಿತು ಎಂದು ನಂಬಲಾಗಿದೆ."

### ೨.೨. ಐತಿಹಾಸಿಕತೆ

ಬಾಗಲಕೋಟೆ ಜಿಲ್ಲೆಯ ವಿಶ್ವಪ್ರಸಿದ್ಧ ಪ್ರವಾಸಿ ತಾಣವಾಗಿದೆ. ಜಿಲ್ಲೆಯಲ್ಲಿ ಪ್ರಾಗಿತಿಹಾಸ ಕಾಲದ ಅನೇಕ ನೆಲೆಗಳನ್ನು ಪುರಾತತ್ವರು ಈಗಾಗಲೇ ಗುರುತಿಸಿದ್ದಾರೆ. ಅವುಗಳಲ್ಲಿ ಆದಿ ಹಳೆಯ ಶಿಲಾಯುಗ ಸಂಸ್ಕೃತಿ, ಶಿಲಾಯುಗ ಸಂಸ್ಕೃತಿ ಅಂತ್ಯ ಹಳೆಯ ಶಿಲಾಯುಗದ ಸಂಸ್ಕೃತಿ, ಸೂಕ್ಷ್ಮ ಶಿಲಾಯುಗ ಸಂಸ್ಕೃತಿ, ನೂತನ ಶಿಲಾಯುಗ ಸಂಸ್ಕೃತಿ, ಇತಿಹಾಸ ಆರಂಭಕಾಲ ಎಂದು ವಿಂಗಡಿಸಿಕೊಂಡು ಆಯಾ ಕಾಲಘಟ್ಟದಲ್ಲಿ ವಿಭಿನ್ನ ಸಂಸ್ಕೃತಿಯ ಕುರುಹುಗಳನ್ನು ಜಿಲ್ಲೆಯಲ್ಲಿ ಗುರುತಿಸುವಲ್ಲಿ ವಿದ್ವಾಂಸರು ಪ್ರಯತ್ನಿಸಿದ್ದಾರೆ. ಬಾಗಲಕೋಟೆ ಜಿಲ್ಲೆಯಲ್ಲಿ ಹರಿಯುವ ಕೃಷ್ಣಾ, ಮಲಪ್ರಭೆ, ಘಟಪ್ರಭೆ ನದಿಗಳು ಮತ್ತು ಹಳ್ಳಕೊಳ್ಳಗಳು ಪ್ರಾಗಿತಿಹಾಸದ ಕಾಲಘಟ್ಟದಲ್ಲಿ ಮಾನವನ ವಸತಿಗೆ ಯೋಗ್ಯವಾದ ಭೌಗೋಳಿಕ ಪರಿಸರವನ್ನು ಒದಗಿಸಿಕೊಟ್ಟಿದ್ದಿತು.

ಪ್ರಾಗಿತಿಹಾಸ ಕಾಲಘಟ್ಟದಲ್ಲಿಯ ವಿವಿಧ ಹಂತಗಳನ್ನು ಮಾನವನು ಉಪಕರಣಗಳನ್ನು ತಯಾರಿಸಲು ಬಳಸಿದ ತಂತ್ರ ಮತ್ತು ಅವುಗಳ ಮೂಲಕ ಸಿದ್ಧಮಾಡಿದ ಉಪಕರಣಗಳ

ಆಕೃತಿಗಳಿಗನುಗುಣವಾಗಿ ನಿರ್ಧರಿಸಲಾಗಿದೆ. ಈ ಲಕ್ಷಣಗಳು ಮಾನವನ ಸಾಂಸ್ಕೃತಿಕ ಪ್ರಗತಿ ಪಥದಲ್ಲಿಯೇ ಸ್ಪಷ್ಟವಾದ ಕ್ರಮಬದ್ಧ ಹಂತಗಳನ್ನು ನಿರ್ದೇಶಿಸುತ್ತ ಮಾನವ ಸಂಸ್ಕೃತಿ ಬೆಳವಣಿಗೆಯಲ್ಲಿಯ ವಿವಿಧ ಘಟ್ಟಗಳನ್ನು ಸ್ಪಷ್ಟಗೊಳಿಸುತ್ತವೆ.

ಇಡೀ ಭಾರತ ದೇಶದಲ್ಲಿ ಪ್ರಾಗಿತಿಹಾಸ ಕಾಲದ ಅಧ್ಯಯನಗಳಿಗೆ ಪ್ರಥಮವಾಗಿ ಭದ್ರಬುನಾದಿಯನ್ನು ಹಾಕಿದವರು ರಾಬರ್ಟ್ ಬ್ರೂಸ್‌ಪೂಟ್ ಎಂದು ಹೇಳಬಹುದು. ೨೦ ಮೇ ೧೮೬೩ರಲ್ಲಿ ಚೆನ್ನೈ ಬಳಿಯ ಪಟ್ಟವರಮ್‌ದಲ್ಲಿ ಪ್ರಾಚೀನ ಶಿಲಾಯುಗಕ್ಕೆ ಸೇರಿದ ಉಪಕರಣವೊಂದನ್ನು ಪ್ರಥಮ ಬಾರಿಗೆ ಪತ್ತೆ ಹಚ್ಚಿದರು. ಹಾಗೆಯೇ ಕರ್ನಾಟಕದಲ್ಲಿ ೧೮೭೬ರಲ್ಲಿ ಮಲಪ್ರಭಾ ನದಿ ಪ್ರದೇಶದಲ್ಲಿಯ ಖ್ಯಾಡ, ಥಾಣಕ ಶಿರೂರು, ಮೆಣಸಗಿ ಪ್ರದೇಶಗಳಲ್ಲಿ ಮಾನವ ಸಂಸ್ಕೃತಿಯ ಅತ್ಯಂತ ಪ್ರಾಚೀನ ಹಂತದ ಸುಮಾರು ಎರಡು ಲಕ್ಷಕ್ಕೂ ಪೂರ್ವದ ಆದಿ ಹಳೆಯ ಶಿಲಾಯುಗ ಹಂತದ ಕಲ್ಲಿನ ಉಪಕರಣಗಳನ್ನು ಹೇರಳವಾಗಿ ಶೋಧಿಸಿದರು.[೧೫] ಇವುಗಳನ್ನು ಗಮನದಲ್ಲಿಟ್ಟುಕೊಂದು ೧೯೫೦ರ ದಶಕದಲ್ಲಿ ಆರ್.ವಿ.ಜೋಶಿ ಅವರು ಇಡೀ ನದಿಯ ಬಯಲು ಪ್ರದೇಶವನ್ನು ಅನ್ವೇಷಣೆ ಮಾಡಿ ತೊರಗಲ್ಲಿನಿಂದ ಕೂಡಲಸಂಗಮದವರೆಗೆ ಸುಮಾರು ೨೦ಕ್ಕೂ ಹೆಚ್ಚು ನೆಲೆಗಳನ್ನು ಶೋಧಿಸಿದರು.[೧೬] ಇವೆಲ್ಲಾ ನೆಲೆಗಳು ನದಿದಂಡೆಯಲ್ಲಿ ಕಂಡುಬಂದಿವೆ.

ಪುಣೆ ಡೆಕ್ಕನ್ ಕಾಲೇಜಿನ ಸಂಶೋಧನಾ ವಿದ್ಯಾರ್ಥಿಯಾದ ಆರ್.ಎಸ್.ಪಪ್ಪು ಅವರು ೧೯೭೦ರಲ್ಲಿ ಕೃಷ್ಣಾನದಿ ತೀರ ಪ್ರದೇಶವನ್ನು ಪರಿಶೀಲನೆ ಮಾಡಿ ಅಲ್ಲಿಯ ಹಳೆಯ ಶಿಲಾಯುಗದ ಆದಿ ಮತ್ತು ಮಧ್ಯ ಹಂತಗಳ ಸಾಂಸ್ಕೃತಿಕ ನೆಲೆಗಳನ್ನು ಗುರುತಿಸಿದರು. ಬಾಗಲಕೋಟೆ ಸಮೀಪದಲ್ಲಿರುವ ಆದಿ ಹಳೆಯ ಶಿಲಾಯುಗದ ನೆಲೆಯಾದ ಅನಗವಾಡಿಯಲ್ಲಿ ಉತ್ಖನನವನ್ನು ಮಾಡಿದರು.[೧೭] ಬಾಗಲಕೋಟೆ ಜಿಲ್ಲೆಯ ಪ್ರಾಗಿತಿಹಾಸದ ನೆಲೆಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

### ಆದಿ ಹಳೆಯ ಶಿಲಾಯುಗ ಸಂಸ್ಕೃತಿ

ಸುಮಾರು ಐದು ಲಕ್ಷ–ಎರಡು ಲಕ್ಷ ವರ್ಷ ಬಾಗಲಕೋಟೆ ಜಿಲ್ಲೆಯಲ್ಲಿ ಅತ್ಯಂತ ಪ್ರಾಚೀನವಾದ ಮಾನವ ವಸತಿಯು ಆದಿ ಹಳೆ ಶಿಲಾಯುಗದ ಹಂತದ್ದಾಗಿದೆ. ಈ ಕಾಲದ ಮಾನವ ಸಾಮಾನ್ಯವಾಗಿ ನದಿಕೊಳ್ಳಗಳ ಬಳಿ, ಬೆಟ್ಟದ ತಪ್ಪಲಲ್ಲಿ, ನಿಸರ್ಗ ಗವಿ ಅಥವಾ ಕಲ್ಲಾಸರೆ, ಮರದ ಪೊಟರೆಗಳ ಆಶ್ರಯದಲ್ಲಿ ವಾಸಿಸುತ್ತಿದ್ದನು. ಆಹಾರಕ್ಕೆಂದು ಗೆಡ್ಡೆಗೆಣಸು, ಹಣ್ಣು ಹಂಪಲಗಳನ್ನು ಸಂಗ್ರಹಿಸಲು ಹಾಗೂ ಪ್ರಾಣಿಗಳನ್ನು ಬೇಟೆಯಾಡಲು ಕಟ್ಟಿಗೆ ಕಲ್ಲುಗಳಿಂದ ಮಾಡಿದ ಆಯುಧಗಳನ್ನು ಬಳಸುತ್ತಿದ್ದನು. ಆಯ್ದು ಬಂಡೆಕಲ್ಲನ್ನು ನಿಗದಿತ

ರೂಪಕ್ಕೆ ತರಲು ಚಕ್ಕೆಯನ್ನು ಉಬ್ಬಿಸಿ ಮೊನಚಾದ ಬಾಯುಳ್ಳ ಆಯುಧಗಳನ್ನು ಮಾಡುತ್ತಿದ್ದನು. ಕೃಷ್ಣಾ, ಮಲಪ್ರಭಾ, ಮತ್ತು ಘಟಪ್ರಭಾ ನದಿಗಳ ತೀರ ಪ್ರದೇಶಗಳಲ್ಲಿ ಈ ಸಂಸ್ಕೃತಿಯ ನೆಲೆಗಳನ್ನು ಕಾಣುತ್ತೇವೆ. ಈ ಪ್ರದೇಶದಲ್ಲಿ ಕೈಗೊಡಲಿ, ಮಚ್ಚುಗತ್ತಿ, ಸೀಳುಗತ್ತಿ, ಹರೆಗತ್ತಿ ಮುಂತಾದ ಉಪಕರಣಗಳು ಲಭಿಸಿದ್ದು ಇಂತಹ ನೆಲೆಗಳನ್ನು ಜಿಲ್ಲೆಯ ಕಲಾದಗಿ, ಅನಗವಾಡಿ, ಕದಾಂಪುರ, ಕೋವಳ್ಳಿ, ಸೀತಿಮನಿ, ಸಿಂದಗಿ, ಖ್ಯಾಡ, ಚೊಳಚಗುಡ್ಡ, ಜಾಲಿಹಾಳ, ಪಟ್ಟದಕಲ್ಲು, ಬಾದಾಮಿ, ಮಹಾಕೂಟ, ಶಿಡ್ಲಪಡಿ, ಯಡಹಳ್ಳಿ, ಐಹೊಳೆ, ಚಿಕ್ಕಮಾಗಿ, ಬೆನಕನವಾರಿ, ಸಿದ್ದನಕೊಳ್ಳ, ಹಳೆಕಡಿವಾಲ, ಹಿರೇಮಾಗಿ ಮುಂತಾದವು ಪ್ರಾಗಿತಿಹಾಸ ಕಾಲದ ಪುರಾತತ್ವ ನೆಲೆಗಳಾಗಿವೆ.[೧೮] ಈ ನೆಲೆಗಳಿಂದ ಜಿಲ್ಲೆಯ ಇತಿಹಾಸದ ಪುರಾತನತೆ ಗುರುತಿಸಬಹುದು.

**ಮಧ್ಯ ಹಳೆ ಶಿಲಾಯುಗ ಸಂಸ್ಕೃತಿ(ಸು.ಒಂದು ಲಕ್ಷ ೧,೦೦,೦೦೦-೪೦,೦೦೦ ಮಧ್ಯ)**

ಮಧ್ಯ ಹಳೆ ಶಿಲಾಯುಗದ ಮಾನವರು ಆದಿ ಹಳೆಯ ಶಿಲಾಯುಗದ ಮಾನವರಂತೆ ನದಿ ತೀರಗಳಲ್ಲಿ, ಬೆಟ್ಟದ ಇಳಕಲ್ಲುಗಳಲ್ಲಿ ಬುಡಗಳಲ್ಲಿ ವಾಸಿಸುತ್ತಿದ್ದಂತಹ ಕುರುಹುಗಳು ಈ ಪ್ರದೇಶದಲ್ಲಿ ದೊರೆತಿವೆ. ಈ ಪ್ರದೇಶದ ಕೃಷ್ಣಾ, ಘಟಪ್ರಭಾ, ಮಲಪ್ರಭಾ ನದಿಗಳ ತೀರಪ್ರದೇಶದಲ್ಲಿ ವಿವಿಧ ಉಪಕರಣಗಳು ಅಧಿಕ ಸಂಖ್ಯೆಯಲ್ಲಿ ದೊರಕಿವೆ. ಪ್ರಾಚೀನ ಸಂಪ್ರದಾಯದ ಕೈಗೊಡಲಿ, ಮಚ್ಚಗತ್ತಿ, ಹೆರೆಗತ್ತಿ, ಕಪಿಗತ್ತಿ ಮುಂತಾದವುಗಳ ಜೊತೆಗೆ ವಿಶಿಷ್ಟ ಸಂಪ್ರದಾಯದ ನೀಳಚಕ್ಕೆ ಹಾಗೂ ಮನೆ, ಕೊರೆಯುಳಿ ಮೊದಲಾದ ಉಪಕರಣಗಳು ಶೋಧಿಸಲಾಗಿದೆ.[೧೯] ಇಂತಹ ಅವಶೇಷಗಳಿರುವ ನೆಲೆಗಳನ್ನು ಆಸಂಗಿ, ಕಲ್ಲಳ್ಳಿ, ಅನಗವಾಡಿ, ಕದಾಂಪುರ, ಕೋವಳ್ಳಿ, ಬಾಗಲಕೋಟೆ, ಖಜ್ಜಿಡೋಣಿ, ಸೀತಿಮನಿ, ಸಿಂದಗಿ, ಮುಚಖಂಡಿ, ನಾಗರಾಳ, ತಮ್ಮಿನಾಳ, ನಂದಿಕೇಶ್ವರ, ಬಾದಾಮಿ, ಶಿಡ್ಲಪಡಿ, ಬಾದರದಿನ್ನಿ, ಯಡಹಳ್ಳಿ, ಹೇರಕಲ್ಲ, ಇಂಗಳಗಿ, ಚಿಂಚಖಂಡಿ, ಭಂಟನೂರು, ಐಹೊಳೆ, ಬೇವಿನಾಳ ಮುಂತಾದೆಡೆ ಕಂಡುಬಂದಿವೆ.

**ಅಂತ್ಯ ಹಳೆ ಶಿಲಾಯುಗ**

ಅಂತ್ಯ ಹಳೆ ಶಿಲಾಯುಗ ಸಂಸ್ಕೃತಿಯು ಹಳೆ ಶಿಲಾಯುಗದ ಕೊನೆಯ ಹಂತವಾಗಿದೆ. ಮಧ್ಯ ಹಳೆಶಿಲಾಯುಗ ಸಂಸ್ಕೃತಿಯ ನೆಲೆಗಳಿಗೆ ಹೋಲಿಸಿದರೆ ಅಂತ್ಯ ಹಳೆ ಶಿಲಾಯುಗ ಸಂಸ್ಕೃತಿಯ ನೆಲೆಗಳು ತೀರಾ ವಿರಳವಾಗಿವೆ. ಈ ಸಂಸ್ಕೃತಿಯ ನೆಲೆಗಳು ಈ ಜಿಲ್ಲೆಯ ನದಿ ತೀರ ಪ್ರದೇಶಗಳಲ್ಲಿ ಕಂಡುಬರುತ್ತವೆ. ಈ ಸಂಸ್ಕೃತಿಯಲ್ಲಿ ನೀಳ ಅಲಗುಗಳು, ಹೆರೆಯುವ ಮೊನೆ, ಚೂರಿ ತರಹದ ಚಕ್ಕೆ, ಕೊರೆಯುಳಿ ಮುಂತಾದವುಗಳು ಈ ಮಾದರಿಯ ವೈಶಿಷ್ಟ್ಯಪೂರ್ಣ ಉಪಕರಣಗಳಾಗಿವೆ. ಈ ಸಂಸ್ಕೃತಿಯ ನೆಲೆಗಳು ಬಾಗಲಕೋಟೆ ಜಿಲ್ಲೆಯಲ್ಲಿ ಕುಟಕನಕೇರಿ ಹೊಸ ಮಹಾಕೂಟ, ಕ್ಯಾದಿಗ್ಗೇರಿ, ಬೇವಿನಾಳ, ಸಿದ್ದನಕೊಳ್ಳ, ಹಳೆ ಕಡಿವಾಲ

ಮುಂತಾದೆಡೆಗೆ ಕಾಣುತ್ತೇವೆ.[20] ಜಿಲ್ಲೆಯ ವಿರಳ ಪ್ರದೇಶಗಳಲ್ಲಿ ಅಂತ್ಯ ಹಳೆ ಶಿಲಾಯುಗದ ನೆಲೆಗಳು ಮಾತ್ರ ಪತ್ತೆಯಾಗಿವೆ.

### ಸೂಕ್ಷ್ಮ ಶಿಲಾಯುಗ ಸಂಸ್ಕೃತಿ (ಕ್ರಿ.ಶ.೧೦,೦೦೦-೨೦೦೦ ವರ್ಷ)

ಅಂತ್ಯ ಹಳೆ ಶಿಲಾಯುಗದ ಮುಂದಿನ ಹಂತವೇ ಈ ಸೂಕ್ಷ್ಮ ಶಿಲಾಯುಗವಾಗಿದೆ. ಈ ಹಂತದಲ್ಲಿ ಮಾನವರು ಆಹಾರಕ್ಕಾಗಿ ಅಲೆದಾಡುತ್ತಾ ಬದುಕನ್ನು ನಡೆಸುತ್ತಿದ್ದ ಮಾನವ ಆಹಾರ ಸಂಗ್ರಹಕ್ಕೆ ಮಿಗಿಲಾಗಿ ಆಹಾರ ಉತ್ಪಾದನಾ ಸಾಮರ್ಥ್ಯವನ್ನು ಅಲ್ಪ ಪ್ರಮಾಣದಲ್ಲಿ ಸಾಧಿಸಲು ಮುಂದಾದುದ್ದು ಈ ಹಂತದಲ್ಲಿಯೇ ಪ್ರಾಣಿ ಬೇಟೆಯ ಜೊತೆಗೆ ಪ್ರಾಣಿಗಳನ್ನು ಹಿಡಿದು ಪಳಗಿಸಲು ಯತ್ನಿಸಿದ್ದೂ ಇದೇ ಕಾಲಾವಧಿಯಲ್ಲಿ ಎಂದು ಹೇಳಬಹುದು. ಈ ಸಂಸ್ಕೃತಿಯಲ್ಲಿ ಅತಿ ಸೂಕ್ಷ್ಮ ಶಿಲಾಯುಧಗಳು ಪ್ರಧಾನವಾಗಿ ಬಳಕೆಯಾಗಿರುವುದರಿಂದ ಇದಕ್ಕೆ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯೆಂದು ಕರೆಯಲಾಗಿದೆ. ಚರ್ಟ್, ಚಾಲಿಡೋನಿ, ಅಗೇಟ್ ಮುಂತಾದ ಉತ್ತಮ ಜಾತಿಯ ಶಿಲೆಗಳಿಂದ ಅತಿ ಕಿರಿದಾದ ಅಂದರೆ ಸುಮಾರು ಒಂದು ಸೆಂ.ಮೀ. ಉದ್ದ ೩-೪ ಸೆಂ.ಮೀ. ಅಗಲದ ಉಪಕರಣಗಳನ್ನು ಈ ಸಂಸ್ಕೃತಿಯ ಜನರು ತಯಾರಿಸಿಕೊಂಡು ಬಳಸುತ್ತಿದ್ದರು.[21] ಶಿಲೆಗಳ ಉಪಯೋಗ ಈ ಕಾಲಘಟ್ಟದಲ್ಲಿ ಆರಂಭವಾಯಿತು.

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳು ಬಾಗಲಕೋಟೆ ಜಿಲ್ಲೆಯಲ್ಲಿ ಕೃಷ್ಣಾ, ಮಲಪ್ರಭಾ ಮತ್ತು ಘಟಪ್ರಭಾ ನದಿ ತೀರ ಪ್ರದೇಶದಲ್ಲಿ ಕಂಡುಬರುತ್ತವೆ. ಈ ಸಂಸ್ಕೃತಿಯಲ್ಲಿ ಮಾನವನು ಒಂದೆಡೆ ನೆಲೆ ನಿಂತಿರುವುದರಿಂದ ಇದರ ಕಾಲವ್ಯಾಪ್ತಿ ತೀರ ಕಡಿಮೆ ಅಥವಾ ವಿರಳವಾಗಿದೆ. ಈ ಹಂತದಲ್ಲಿ ನೀಳಚಕ್ಕೆ, ಹೆರೆ ಚಕ್ಕೆ, ಮನೆ, ಬಾಣದ ಮೊನೆ, ಅರ್ಧಚಂದ್ರಾಕೃತಿ ಮೊದಲಾದ ಉಪಕರಣಗಳು ಕಂಡುಬಂದಿವೆ. ಈ ಪ್ರದೇಶದಲ್ಲಿರುವ ನೆಲೆಗಳೆಂದರೆ ಆಸಂಗಿ, ಕಲ್ಲಳ್ಳಿ, ಕೋವಳ್ಳಿ, ಬಾಗಲಕೋಟೆ, ಸಿರೂರು, ಹಳ್ಳೂರು, ಅರೆಗುಡ್ಡ, ಕುಟಕನಕೇರಿ, ಹೊಸ ಮಹಾಕೂಟ, ಕೊಪ್ಪ, ಗುಡದಿನ್ನಿ, ಬೀಳಗಿ, ಕೂಡಲಸಂಗಮ, ಹಳೇ ಬೂದಿಹಾಳ ಮುಂತಾದ ಪ್ರದೇಶಗಳಲ್ಲಿ ಪುರಾತತ್ವ ವಿದ್ವಾಂಸರು ಗುರುತಿಸಿದ್ದಾರೆ.[22] ಜಿಲ್ಲೆಯಲ್ಲಿ ನಿಗದಿತ ಸ್ಥಳಗಳಲ್ಲಿ ಉತ್ಖನನ ಕೈಗೊಂಡರೆ ಇನ್ನೂ ನೆಲೆಗಳು ದೊರೆಯುವ ಸಂಭವವಿದೆ.

### ನೂತನ ಶಿಲಾಯುಗ ಸಂಸ್ಕೃತಿ (ಕ್ರಿ.ಪೂ.೨೦೦೦-೨೦೦೦ ವರ್ಷ)

ಮಾನವನ ವಿಕಸನ ಮತ್ತು ಪ್ರಗತಿಯಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕಾಲಘಟ್ಟವು ಅತ್ಯಂತ ಮಹತ್ವದ ಹಂತವಾಗಿದೆ. ಕೃಷಿ ಚಟುವಟಿಕೆಗಳ ವಿಸ್ತರಣೆ, ಅಧಿಕ ಆಹಾರ

ಉತ್ಪಾದನೆ, ಪಶು ಸಂಗೋಪನೆ, ಮಡಿಕೆ-ಕುಡಿಕೆಗಳ ತಯಾರಿಕೆಯಲ್ಲಿ ಕುಂಬಾರ ಗಾಲಿಯ ಬಳಕೆ ಮತ್ತು ವೈವಿಧ್ಯತೆ, ಸಂಘಟಿತ ಸಮಾಜ ಹಾಗೂ ವ್ಯವಸ್ಥಿತ ಗ್ರಾಮೀಣ ಬದುಕನ್ನು ಸಾಧಿಸಿದ ಹಂತ ಇದಾಗಿದೆ. ಚೆನ್ನಾಗಿ ಉಜ್ಜಿ ನಯ ಮಾಡಿದ, ವಿವಿಧ ಪ್ರಮಾಣದ ಆಕರ್ಷಕವಾದ, ಮಿರಮಿರನೆ ಹೊಳೆಯುವ ಕೊಡಲಿಗಳ ತಯಾರಿಕೆ ಈ ಸಂಸ್ಕೃತಿಯ ಆದಿ ಭಾಗದ ಪ್ರಧಾನ ಲಕ್ಷಣವಾಗಿತ್ತು. ಈ ಕೊಡಲಿಗಳನ್ನು ಮೊಳ ಉದ್ದದ ಕಟಿಗೆಯ ಕಾವುಗಳಿಗೆ ಬಂಧಿಸಿ, ಗಿಡಮರಗಳನ್ನು ಕಡಿಯಲು ಪರಿಣಾಮಕಾರಿಯಾಗಿ ಹರಿತವಾದ ಸಾಧನವಾಗಿ ಬಳಸಲಾಗುತ್ತಿತ್ತು.[೨೩] ಇದು ಕೃಷಿ ವಿಸ್ತರಣೆ ಹಾಗೂ ಆಹಾರ ಉತ್ಪಾದನೆಗಳಲ್ಲಿ ಅಭಿವೃದ್ಧಿಗೆ ದಾರಿ ಮಾಡಿಕೊಟ್ಟಿತು.

ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಬಾಗಲಕೋಟೆ ಜಿಲ್ಲೆಯ ಕೃಷ್ಣಾ, ಮಲಪ್ರಭಾ, ನದಿ ತೀರ ಪ್ರದೇಶದಲ್ಲಿದ್ದು, ಇಲ್ಲಿ ಕೈಕೊಡಲಿ, ಸುತ್ತಿಗೆ, ಕೆತ್ತುಳಿ, ಉಜ್ಜುಗ ಅಥವಾ ಅರೆಯುವ ಕಲ್ಲು, ಕವಣೆಕಲ್ಲು ಮತ್ತು ಉಂಗುರು ಕಲ್ಲು ಮೊದಲಾದ ಪ್ರಾಚ್ಯಾವಶೇಷ ಆಯುಧಗಳು ಲಭ್ಯವಾಗಿವೆ. ಈ ಪ್ರದೇಶದಲ್ಲಿ ನೆಲೆಗಳಾದ ಆಸಂಗಿ, ಇಂಗಳಗಿ, ಸೀತಿಮನಿ, ಅರೆಗುಡ್ಡ, ಹಿರೇಗುಡ್ಡ, ಗುಗ್ಗಲಮಾರಿ, ಹಳೆ ಬೂದಿಹಾಳ ಮುಂತಾದ ಪ್ರದೇಶಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಪ್ರಾಚ್ಯಾವಶೇಷ ನೆಲೆಗಳು ಲಭ್ಯವಾಗಿವೆ[೨೪] ಎಂಬುದನ್ನು ಗುರುತಿಸಬಹುದು.

**ಶಿಲಾ ತಾಮ್ರಯುಗ ಸಂಸ್ಕೃತಿ(ಕ್ರಿ.ಶ.೨೦೦೦-೫೦೦ ವರ್ಷ)**

ನೂತನ ಶಿಲಾಯುಗದ ಕೊನೆಯ ಹಂತದಲ್ಲಿ ಶಿಲಾಯುಧಗಳೊಂದಿಗೆ ಕಂಚು, ತಾಮ್ರದ ಚಪ್ಪಟೆ ಕೊಡಲಿ, ಉಳಿ ಮುಂತಾದ ಉಪಕರಣಗಳು ಜೊತೆ ಜೊತೆಯಾಗಿ ಬಳಕೆಯಲ್ಲಿದ್ದುದರಿಂದ, ಈ ಹಂತವನ್ನು ಶಿಲಾತಾಮ್ರಯುಗ ಸಂಸ್ಕೃತಿ ಎಂದು ಕರೆಯಲಾಗಿದೆ. ಲೋಹ ತಯಾರಿಕಾ ತಂತ್ರಜ್ಞಾನದಿಂದ ಕಂಚು ಹಾಗೂ ತಾಮ್ರದ ಆಯುಧೋಪಕರಣಗಳು ಹಾಗೂ ಆಭರಣಗಳನ್ನು ಇವರು ತಯಾರಿಸಬಲ್ಲವರಾಗಿದ್ದರು. ಈ ಪ್ರದೇಶದ ನೆಲೆಗಳು ಉತ್ತಮ ಕರಿ(ಕಪ್ಪು) ಮಣ್ಣಿನ ಪ್ರದೇಶವಾದುದ್ದರಿಂದ ಈ ಕಾಲದ ಜನತೆ ತಮ್ಮ ವಾಸ್ತವ್ಯಕ್ಕೆ ಆರಿಸಿಕೊಂಡು ಇಲ್ಲಿಂದ ತಮ್ಮ ಸಂಸ್ಕೃತಿಯನ್ನು ವಿಕಾಸಗೊಳಿಸಿದರು. ಈ ಸಂಸ್ಕೃತಿಯ ನೆಲೆಗಳೆಂದರೆ ಆಸಂಗಿ, ಕನ್ನೊಳ್ಳಿ, ಕಲ್ಲಳ್ಳಿ, ಹನಗಂಡಿ, ಶಿರಗುಪ್ಪಿ, ತೇರದಾಳ, ಜಗದಾಳ, ಇಂಗಳಗಿ, ಸಿಂದಗಿ, ಕುಟಕನಕೇರಿ, ಬಾದಾಮಿ, ಶಿಡ್ಲಪಡಿ, ಹೊಸ ಮಹಾಕೂಟ, ಬೀಳಗಿ, ಭಂಟನೂರು, ಬೈಚನ್‌ಮರಡಿ[೨೫] ಮುಂತಾದ ಪ್ರದೇಶಗಳಾಗಿವೆ.

## ಬೃಹತ್ ಶಿಲಾಯುಗ(ಕಬ್ಬಿಣ) ಸಂಸ್ಕೃತಿ(ಕ್ರಿಪೂ.೧೨೦೦-ಕ್ರಿಪು.೩೦೦)

ಮಾನವ ಅಭಿವೃದ್ಧಿಯ ಮಹತ್ವದ ಹಂತ ಇದಾಗಿದೆ. ಗಟ್ಟಿಯಾದ, ಹೆಚ್ಚು ಕಾಲ ಬಳಕೆ ಬರುವ ಕಬ್ಬಿಣದ ಲೋಹದಿಂದ ಬೇಟೆಗೆ ಬೇಸಾಯಕ್ಕೆ ಹಾಗೂ ಸಮಾಜದ ರಕ್ಷಣೆಗೆ ಅಗತ್ಯವಾದ ಆಯುಧೋಪಕರಣಗಳ ತಯಾರಿಕೆ ಈ ಜನರ ದೊಡ್ಡ ಸಾಧನೆಯಾಗಿದೆ. ಕಬ್ಬಿಣ ಲೋಹದ ತಂತ್ರಜ್ಞಾನ ಇವರಲ್ಲಿ ಪ್ರಭುತ್ವ ಶಕ್ತಿ ಹಾಗೂ ಆರ್ಥಿಕ ಪ್ರಗತಿಯನ್ನು ಸದೃಢಗೊಳಿಸಿತು. ಇವೆರಡೂ ನಾಗರಿಕತೆಯ ಬೆಳವಣಿಗೆಗೆ ಮತ್ತು ನಗರ ಜೀವನಕ್ಕೆ ನಾಂದಿ ಹಾಡಿದವು. ಅದರಿಂದಾಗಿಯೇ ಈ ಕಾಲಘಟ್ಟವನ್ನು 'ಕಬ್ಬಿಣಯುಗ ಸಂಸ್ಕೃತಿ' ಎಂದು ಹೆಸರಿಸಲಾಗಿದೆ. ಈ ಸಂಸ್ಕೃತಿಗೆ ಸೇರಿದ ಜನ, ಸತ್ತವರ ಶವಸಂಸ್ಕಾರಕ್ಕೆಂದು ನಾನು ಮಾದರಿಯ ಕಲ್ಪನೆಗಳ ನಿರ್ಮಾಣಕ್ಕೆ ಬೃಹತ್ತಾದ ಕಲ್ಲು ಚಪ್ಪಡಿಗಳನ್ನು ಬಳಸುತ್ತಿದ್ದುದರಿಂದ ಇದನ್ನು 'ಬೃಹತ್ ಶಿಲಾಯುಗ' ಎಂದು ಕರೆಯುವ ರೂಢಿಯಿದೆ. ಕಪ್ಪು ಕೆಂಪು ವರ್ಣದ ಮಡಕೆಗಳು ಈ ಕಾಲದ ಮತ್ತೊಂದು ವೈಶಿಷ್ಟ್ಯತೆ. ಈ ಸಂಸ್ಕೃತಿಯ ನೆಲೆಗಳನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಒಂದು ಗೋರಿಯ ನೆಲೆಯಾದರೆ, ಇನ್ನೊಂದು ವಾಸ್ತವ್ಯದ ನೆಲೆಯಾಗಿದೆ. ಈ ಸಂಸ್ಕೃತಿಗೆ ಸಂಬಂಧಿಸಿದ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಈ ಪ್ರದೇಶದ ಕೃಷ್ಣಾ ಮತ್ತು ಮಲಪ್ರಭಾ ನದಿ ತೀರದಲ್ಲಿ ಕಂಡು ಬರುತ್ತವೆ. ಅವುಗಳೆಂದರೆ ಕುಲ್ಲಳ್ಳಿ, ಜಕನೂರು, ಹನಗಂಡಿ, ಹಳಿಂಗಳಿ, ಕಲಾದಗಿ, ಹಳ್ಳೂರು, ಗುಳೇದಗುಡ್ಡ, ಪಟ್ಟದಕಲ್ಲು, ಐಹೊಳೆ, ಕ್ಯಾದಿಗೇರಿ, ಚಿಲ್ಲಾಪುರ, ಸಿದ್ದನಕೊಳ್ಳ, ಬೇಲಾಪುರ ಮುಂತಾದವುಗಳು ಪ್ರಾಚ್ಯಾವಶೇಷ ನೆಲೆಗಳಾಗಿವೆ.[೨೬] ಈ ನೆಲೆಗಳಿಂದ ಕಬ್ಬಿಣದ ತಾಂತ್ರಿಕತೆಯ ವೈಶಿಷ್ಟ್ಯತೆಯಿಂದ ಕೂಡಿದೆ.

## ಇತಿಹಾಸ ಆರಂಭ ಕಾಲ

ವಿವಿಧ ಸಂಸ್ಕೃತಿಗಳ ಹಂತದಿಂದ ಲಿಪಿಯು ಬಳಕೆಗೆ ಬಂದ ಹಂತವು ಇತಿಹಾಸ ಆರಂಭ ಕಾಲವೆಂದು ಗುರುತಿಸಬಹುದು. ಈ ಹಂತದ ಪ್ರಮುಖ ಅವಶೇಷಗಳೆಂದರೆ ಕೆಂಪು ಹೊಳಪುಳ್ಳ ಮೃತ್ ಪಾತ್ರೆಗಳು ಮತ್ತು ಕೆಂಪು ಲೇಪನದಡಿಯ ಬಿಳಿವರ್ಣ ಚಿತ್ರಗಳುಳ್ಳ ಮೃತ್ ಮಣ್ಣ ಪಾತ್ರೆಗಳು ಈ ಇತಿಹಾಸ ಆರಂಭ ಕಾಲದ ನೆಲೆಗಳೆಂದರೆ ಕಲ್ಲಳ್ಳಿ, ಶಿರಗುಪ್ಪ, ಹನಗಂಡಿ, ಹಿಪ್ಪರಗಿ, ಕಿರಸುರು, ಬೆನಕಟ್ಟಿ, ಹೆರಕಲ್, ಚಿಮ್ಮಲಗಿ, ಪಟ್ಟದಕಲ್ಲು, ಬಾದರದಿನ್ನಿ, ಐಹೊಳೆ, ಮರೋಳ, ವಳಕಲದಿನ್ನಿ, ಹಿರೇಮಾಗಿ ಮುಂತಾದವುಗಳು ಬಾಗಲಕೋಟೆ ಜಿಲ್ಲೆಯಲ್ಲಿ ಇತಿಹಾಸ ಆರಂಭ ಕಾಲದ ಪ್ರಮುಖ ನೆಲೆಗಳಾಗಿವೆ.

### ೨.೨.೧. ಪ್ರಾಚೀನ ಕಾಲದ ಇತಿಹಾಸ

ಬಾಗಲಕೋಟೆ ಜಿಲ್ಲೆಯು ಮೊದಲು ವಿಜಯಪುರ ಜಿಲ್ಲೆಯಲ್ಲಿಯೇ ವಿಲೀನಗೊಂಡಿರುವ ಜಿಲ್ಲೆಯಾಗಿತ್ತು. ೧೯೯೭ ಆಗಸ್ಟ್ ೧೫ರಂದು ಪ್ರತ್ಯೇಕವಾಗಿ ಬಾಗಲಕೋಟೆ ಜಿಲ್ಲೆಯಾಗಿ ರಚನೆ ಮಾಡಲಾಯಿತು. ಬಾಗಲಕೋಟೆ ಜಿಲ್ಲೆಯ ಇತಿಹಾಸ ಆರಂಭವಾಗುವುದು ಶಾತವಾಹನರ ಮಾಂಡಳೀಕರಾಗಿದ್ದ ಆನಂದ ವಂಶದ ಅರಸರಿಂದ. ಈ ವಂಶದವರು ಟಂಕಿಸಿದ ಅನೇಕ ನಾಣ್ಯಗಳು ಪಟ್ಟದಕಲ್ಲಿನ ಬಳಿಯ ಬಾಚನಗುಡ್ಡದ ಉತ್ಖನನದಲ್ಲಿ ದೊರೆತಿವೆ. ಇದೇ ಅಲ್ಲದೇ ಐಹೊಳೆಯ ದೇವಾಲಯಗಳ ಅವಶೇಷಗಳಡಿಯಲ್ಲಿ ಶಾತವಾಹನರ ಕಾಲದ ರಚನೆಯೆನ್ನ ಬಹುದಾದ ಇಟ್ಟಿಗೆಯ ಕಟ್ಟಡದ ತುಣುಕುಗಳು ಕಂಡುಬಂದಿವೆ. ಈ ಕಾರಣಗಳಿಂದ ಈ ಪ್ರದೇಶ ಶಾತವಾಹನರ ಹಾಗೂ ಅವರ ಮಾಂಡಳೀಕರಾಗಿದ್ದ ಆನಂದ ವಂಶದ ಅರಸರಿಗೆ ಸೇರಿತ್ತೆಂದು ನಾವು ತೀರ್ಮಾನಿಸಬಹುದು. ಮುಂದೆ ಕದಂಬರು ಈ ಪ್ರಾಂತ್ಯವನ್ನು ಆಳಿದ್ದಿರಬಹುದಾದರೂ ಅವರ ಶಾಸನಾವಶೇಷಗಳೇನೂ ಕಂಡುಬಂದಿಲ್ಲ. ಮಂಗಲೀಶನ ಮಹಾಕೂಟ ಸ್ತಂಭಶಾಸನದಲ್ಲಿ ಅವನು ಗೆದ್ದ ಅನೇಕ ರಾಜರ ಪಟ್ಟಿಯಲ್ಲಿ ವೈಜಯನ್ತ ರಾಜ್ಯದ ಹೆಸರಿದ್ದು, ಕದಂಬರು, ಚಾಲುಕ್ಯರ ಮಾಂಡಳೀಕರಾಗಿದ್ದರೆಂಬ ವಿಷಯವನ್ನು ಇದು ತಿಳಿಸುತ್ತದೆ. ಹೀಗಾಗಿ ಶಾತವಾಹನರಿಂದ ಹಿಡಿದು ಬಾದಾಮಿ ಚಾಲುಕ್ಯರವರೆಗೆ ಈ ಜಿಲ್ಲೆಯ ಇತಿಹಾಸ ಸ್ಪಷ್ಟವಾಗಿ ತಿಳಿಯುವುದಿಲ್ಲ. ಬಾಚನಗುಡ್ಡ ಉತ್ಖನನದಿಂದ ಒಂದು ಕೊಂಡಿ ದೊರೆತಂತಾಗಿದೆ.

### ಮೌರ್ಯರು

ದೇಶದ ಇತಿಹಾಸದಂತೆ ರಾಜ್ಯದ ಇತಿಹಾಸವೂ ಮೌರ್ಯರೊಂದಿಗೆ ಆರಂಭಗೊಳ್ಳುತ್ತದೆ. ಕರ್ನಾಟಕದಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ಕಾಲಕ್ಕೆ ಸೇರಿದ ೧೦ ಕಿರು ಶಿಲಾಲೇಖಗಳು ಹಾಗೂ ನಾಲ್ಕು ಬೃಹತ್ ಶಿಲಾಶಾಸನಗಳು ಚಿತ್ರದುರ್ಗ, ಬಳ್ಳಾರಿ, ರಾಯಚೂರು ಹಾಗೂ ಗುಲ್ಬರ್ಗಾ ಜಿಲ್ಲೆಗಳಿಂದ ವರದಿಯಾಗಿವೆ. ಆದರೆ ವಿಜಯಪುರ ಜಿಲ್ಲೆಯಲ್ಲಿ ಅಶೋಕನ ಶಿಲಾಶಾಸನಗಳು ಈವರೆಗೆ ಪತ್ತೆಯಾಗಿಲ್ಲ.[೨೭] ಕ್ರಿ.ಪೂ.೪ನೆಯ ಶತಮಾನದಲ್ಲಿ ನಂದ ವಂಶದ ಧನನಂದನನ್ನು ಸೋಲಿಸಿ ಚಂದ್ರಗುಪ್ತನು ಮೌರ್ಯ ವಂಶವನ್ನು ಸ್ಥಾಪಿಸಿದನು. ಈತನ ಕಾಲಾವಧಿಯು ಭಾರತೀಯ ಇತಿಹಾಸದಲ್ಲೇ ಉಜ್ವಲವಾದದ್ದು. ಏಕೆಂದರೆ ಮ್ಯಾಸಿಡೋನಿಯಾದ ಸಂಕೋಲೆಯಿಂದ ಈ ದೇಶವನ್ನು ವಿಮುಕ್ತಗೊಳಿಸಿ ಮೊಟ್ಟಮೊದಲ ಬಾರಿಗೆ ಭಾರತ ಬಹುಭಾಗವನ್ನು ಒಂದೇ ಪ್ರಭುತ್ವದ ಅಡಿಯಲ್ಲಿ ಒಗ್ಗೂಡಿಸಿ ರಾಜಕೀಯ ಏಕೀಕರಣ ಸಾಧಿಸಿದನು.[೨೮] ಸುಮಾರು ೧೫ನೆಯ ಶತಮಾನದ ಕೃತಿಯಾದ ಸಿಂಗಿರಾಜ ಪುರಾಣ

ಪಟ್ಟದಕಲ್ಲು ಪ್ರದೇಶ ನಂದರಿಗೆ ಒಳಪಟ್ಟಿತ್ತೆಂದು ದಾಖಲಿಸಿದೆ. ನೆರೆಯ ಜಿಲ್ಲೆಗಳಾದ ಹಾಗೂ ಪ್ರದೇಶಗಳಾದ ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದಯಗೊಳ್ಳಂ, ಕೊಪ್ಪಳ ಜಿಲ್ಲೆಯ ಗವಿಮಠ ಮತ್ತು ಪಾಲ್ಕಿಗೊಂಡಂ, ಚಿತ್ರದುರ್ಗ, ಜಿಲ್ಲೆಯ ಮಸ್ಕಿ, ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಮೌರ್ಯರ ಶಾಸನಗಳು ದೊರೆತಿವೆ.[೨೯] ಈ ಶಾಸನಗಳು ಲಭಿಸಿರುವ ಹಿನ್ನೆಲೆಯಲ್ಲಿ ವಿಜಯಪುರ ಹಾಗೂ ಬಾಗಲಕೋಟೆ ಜಿಲ್ಲೆಯು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ತರ್ಕಿಸಬಹುದಾಗಿದೆ. ಮೌರ್ಯ ಸಾಮ್ರಾಜ್ಯದ ದಕ್ಷಿಣ ಪ್ರದೇಶದ ಭಾಗವಾಗಿದ್ದ ಈ ಪ್ರದೇಶವನ್ನು ಸುವರ್ಣಗಿರಿ ಎಂದು ಕರೆಯಲಾಗುತ್ತಿದ್ದು, ಬ್ರಹ್ಮಗಿರಿ(ಇಸಿಲಾ)ಯಿಂದ 'ಮಹಾತ್ಮರು' ಅಶೋಕನ ಅಧಿಕಾರಿಯಾಗಿ ಆಡಳಿತ ನಡೆಸುತ್ತಿದ್ದರೆಂದು ಅಲ್ಲಿಯ ಶಾಸನದಿಂದ ಗೊತ್ತಾಗುತ್ತದೆ. ಪುರಾತತ್ವಿಯ ಆಕರಗಳು, ಬಾಗಲಕೋಟೆ ಜಿಲ್ಲೆಯಲ್ಲಿ ಮೌರ್ಯರಿಗೆ ಸಂಬಂಧಿಸಿದಂತೆ ದೊರೆಯುವುದಿಲ್ಲ. ಆದರೆ ಸುತ್ತಲಿನ ಪ್ರದೇಶ ಹಾಗೂ ಜಿಲ್ಲೆಗಳು ಮೌರ್ಯರ ಆಡಳಿತಕ್ಕೆ ಒಳಪಟ್ಟಿರುವುದರಿಂದ ಬಾಗಲಕೋಟೆ ಜಿಲ್ಲೆಯು ಸಹ ಮೌರ್ಯರ ಆಡಳಿತದ ವ್ಯಾಪ್ತಿಗೆ ಸೇರಿರಬಹುದು ಎಂದು ತರ್ಕಿಸಬಹುದು.

**ಶಾತವಾಹನರು**

ಕರ್ನಾಟಕದ ಉತ್ತರ ಭಾಗ ಶಾತವಾಹನರ ಆಡಳಿತಕ್ಕೆ ಒಳಪಟ್ಟಿದ್ದ ಅಂಶ ಅವರ ಕಾಲಕ್ಕೆ ಸೇರಿದ, ಬನವಾಸಿ, ವಾಸನ, ಸನ್ನತಿ, ಮುಂತಾದ ಕಡೆಗಳಲ್ಲಿಯ ಶಾಸನಗಳಿಂದ ಹಾಗೂ ವಡಗಾಂವ್ ಮಾಧವಪುರ, ಬನವಾಸಿ, ಸನ್ನತಿ ಹಾರಣಗೇರಿ, ಐಹೊಳೆ ಮೊದಲಾದ ಸ್ಥಳಗಳಲ್ಲಿ ದೊರೆತಿರುವ ಶಾತವಾಹನ ನಾಣ್ಯಗಳಿಂದ ವೇದ್ಯವಾಗುತ್ತದೆ.[೩೦] ಮೌರ್ಯರ ನಂತರ ಶುಂಗರು, ಕಣ್ವರು, ಶಾತವಾಹನರು, ಚೇದಿ ರಾಜಮನೆತನಗಳು ತಲೆಯತ್ತಿದ್ದವು. ಆದರೆ ಇವರ ಆಳ್ವಿಕೆಗೆ ಸಂಬಂಧಿಸಿದ ಸ್ಪಷ್ಟವಾದ ಆಧಾರಗಳು ಲಭ್ಯವಿಲ್ಲದ ಕಾರಣ ಈ ಕಾಲಾವಧಿಯ ರಾಜಕೀಯ ಇತಿಹಾಸವು ಸಾಕಷ್ಟು ಬೆಳಕಿಗೆ ಬಂದಿಲ್ಲ. ದಕ್ಷಿಣದಲ್ಲಿ ಶಾತವಾಹನರು, ಪೂರ್ವದಲ್ಲಿ ಅವರ ಸಮಕಾಲೀನರಾಗಿ ಚೇದಿರಾಜರು ಆಳುತ್ತಿದ್ದರು ಎಂದು ಲಭ್ಯವಾದ ಶಾಸನಗಳಿಂದ ತಿಳಿದುಬರುವುದು.[೩೧] ಶಾತವಾಹನರು ಸುಮಾರು ನಾಲ್ಕು ಶತಮಾನಗಳ ಕಾಲ(ಕ್ರಿ.ಪೂ.೧ನೆಯ ಶತಮಾನ ೩ನೆಯ ಶತಮಾನ) ದಖ್ಖನಿನಲ್ಲಿ ಪ್ರಭುತ್ವ ಹೊಂದಿದ್ದು, ಪ್ರತಿಷ್ಠಾನ(ಪೈಠಾಣ) ಇವರ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಸಿಮುಖ ಈ ಮನೆತನದ ಮೊದಲ ಅರಸನಾಗಿದ್ದು, ಶುಂಗ ಅರಸ ಸುಶರ್ಮನನ್ನು ಸೋಲಿಸಿ, ಶಾತವಾಹನರ ಸ್ವತಂತ್ರ ಆಳ್ವಿಕೆಗೆ ಇವನು ನಾಂದಿ ಹಾಡಿದನು.

ವಿಜಾಪುರ ಜಿಲ್ಲೆಯ ಈಶಾನ್ಯ ಭಾಗದಲ್ಲಿರುವ ಗುಲ್ಬರ್ಗಾ ಜಿಲ್ಲೆಯ ವಿವಿಧೆಡೆಗಳಿಂದ ಶಾತವಾಹನ ಶಾಸನಗಳು ಅಧಿಕ ಸಂಖ್ಯೆಯಲ್ಲಿ ಲಭಿಸಿದ್ದು, ಬೌದ್ಧ ಕೇಂದ್ರವಾಗಿದ್ದ ಸನ್ನತಿಯೊಂದರಲ್ಲೇ ಸುಮಾರು ೯೦ ಶಾಸನಗಳು ಪತ್ತೆಯಾಗಿವೆ. ಸುಮಾರು ಕ್ರಿ.ಶ.೧೫೦ರಲ್ಲಿ ಈಜಿಪ್ಟ್ ಪ್ರವಾಸಿ ಟಾಲೆಮಿಯಿಂದ ರಚಿತಗೊಂಡಿರುವ 'ಎ ಗೈಡು ಟು ದಿ ಜಿಯಾಗ್ರಫಿ' ಗ್ರಂಥದಲ್ಲಿ ಜಿಲ್ಲೆಯ ಬಾದಾಮಿ, ಪಟ್ಟದಕಲ್ಲು, ಇಂಡಿ, ಕಲಕೇರಿಗಳು ದಾಖಲಿಸಲ್ಪಟ್ಟಿದ್ದು. ಇದರಿಂದ ಆ ವೇಳೆಗಾಗಲೇ ಈ ಪಟ್ಟಣಗಳು ಪ್ರಮುಖ ವಾಣಿಜ್ಯ ಕೇಂದ್ರಗಳಾಗಿ ಬೆಳೆದಿದ್ದ ಅಂಶ ಸ್ಪಷ್ಟವಾಗುತ್ತದೆ.[೩೩] ಈ ಅಂಶದಿಂದ ಬಾದಾಮಿ ಪಟ್ಟದಕಲ್ಲು ಆ ಕಾಲಘಟ್ಟದಲ್ಲಿ ವಿಶ್ವಮಟ್ಟದಲ್ಲಿ ವ್ಯಾಪಾರ ವಾಣಿಜ್ಯದಿಂದ ಗುರುತಿಸಿಕೊಂಡು ಆರ್ಥಿಕಾಭಿವೃದ್ಧಿಗೆ ಮಹತ್ವ ನೀಡಿದ್ದನ್ನು ಗುರುತಿಸಬಹುದು. ಐಹೊಳೆ ಮತ್ತು ಪಟ್ಟದಕಲ್ಲಿನಲ್ಲಿ ಶಾತವಾಹನರಿಗೆ ಸಂಬಂಧಿಸಿದ ಇಟ್ಟಿಗೆ ಕಟ್ಟಡಗಳು, ನಾಣ್ಯಗಳು, ಮಣ್ಪಾತ್ರೆಯ ಚೂರುಗಳು ಕಂಡುಬಂದಿವೆ. ತದ್ದೆವಾಡಿ(ಇಂಡಿ ತಾಲೂಕು) ಮಸ್ಕನಾಳ ಮತ್ತು ಐಹೊಳೆಯಲ್ಲಿ ಬ್ರಾಹ್ಮಿ ಲಿಪಿಯಲ್ಲಿ ಪ್ರಾಕೃತ ಭಾಷೆಯಲ್ಲಿ 'ಸಿರಿಸಂತಕಣಿಸ'(ಶ್ರೀ ಸಾಕರ್ಣಸ್ಯ) ವಾಸಿಠಿ ಪುತ್ತನ ಪುಳುಮಾವಿಸ(ವಾಸಿಷ್ಠೀ ಪುತ್ರ ಪುಳುಮಾವಿಸ್ಯ) ಮೊದಲಾದ ಶಾತವಾಹನ ಅರಸರುಗಳ ಹೆಸರುಳ್ಳ ಸತುವಿನ ನಾಣ್ಯಗಳು ಸಿಕ್ಕಿವೆ. ಮಲಪ್ರಭಾ ನದಿ ಬಲದಂಡೆ ಮೇಲಿರುವ ವಾಸನ(ನರಗುಂದ ತಾಲೂಕು, ಧಾರವಾಡ ಜಿಲ್ಲೆ)ದಲ್ಲಿ ವಾಸಿಷ್ಠೀ ಪುತ್ರ ಪುಳುಮಾವಿ ಅರಸನ ಕಾಲದಲ್ಲಿ ಚಂಡ ಶಿವದೇವಾಲಯವನ್ನು ಕಟ್ಟಿಸಿದ ವಿಷಯವುಳ್ಳ ಬ್ರಾಹ್ಮೀ ಲಿಪಿ ಮತ್ತು ಪ್ರಾಕೃತ ಭಾಷೆಯ ಶಾಸನವೂ ಬೆಳಕಿಗೆ ಬಂದಿದೆ.[೩೪] ಒಟ್ಟಾರೆಯಾಗಿ ಈ ಎಲ್ಲಾ ಪುರಾತತ್ವೀಯ ದಾಖಲೆಗಳ ಆಧಾರದ ಮೇಲೆ ಬಾಗಲಕೋಟೆ ಜಿಲ್ಲೆಯ ಇತಿಹಾಸ ಆರಂಭವಾಗುವುದು ಶಾತವಾಹನ ಮಾಂಡಳೀಕರಾಗಿದ್ದ ಆನಂದ ವಂಶದ ಅರಸರಿಂದವೆಂದು ಸ್ಪಷ್ಟಪಡಿಸಬಹುದು. ಶಾತವಾಹನರ ಆಡಳಿತದ ಕಾಲಾವಧಿಯು ಕ್ರಿ.ಪೂ.೧೨೧ರಿಂದ ೧೭೪ರ ವರೆಗೆ ಗುರುತಿಸಲಾಗಿದೆ.

**ಕದಂಬರು(ಕ್ರಿ.ಶ.೪ನೆಯ ಶತಮಾನದಿಂದ ಕ್ರಿ.ಶ.೬ನೆಯ ಶತಮಾನ)**

ಕರ್ನಾಟಕವನ್ನಾಳಿದ ಕನ್ನಡ ಮೂಲದ ಮೊಟ್ಟ ಮೊದಲ ರಾಜಮನೆತನ ಬನವಾಸಿ ಕದಂಬರದ್ದಾಗಿದೆ. ಸುಮಾರು ಕ್ರಿ.ಶ.೩೨೫ರಿಂದ ೫೫೦ರ ವರೆಗೆ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಈ ಮನೆತನದ ಮೊದಲ ಅರಸ ಮಯೂರವರ್ಮನು ಪಲ್ಲವರನ್ನು ಸೋಲಿಸಿ ಸ್ಥಾಪಿಸಿದ ಸಾಮ್ರಾಜ್ಯವು ಪಶ್ಚಿಮ ಸಮುದ್ರದಿಂದ ಪೂರ್ವಕ್ಕೆ ಪ್ರೇಹಾರದವರೆಗೆ ಅಂದರೆ ಇಂದಿನ ಮಲಪಹಾರಿ(ಮಲಪ್ರಭಾ) ನದಿಯವರೆಗೂ ಹಬ್ಬಿತ್ತು ಎಂದು ನಂಬಲಾಗಿತ್ತು. ಇದನ್ನು ಒಪ್ಪುವುದಾದರೆ ಆಗ ಮಯೂರನ ಸಾಮ್ರಾಜ್ಯ ಬೆಳಗಾವಿ,

ಧಾರವಾಡ ಹಾಗೂ ವಿಜಯಪುರ ಜಿಲ್ಲೆಗಳವರೆಗೂ ಭಾಗಶಃ ಹಬ್ಬಿತ್ತೆಂದು ಹೇಳಬೇಕಾಗುತ್ತದೆ. ಆದರೆ ಶಾಸನೋಕ್ತ ಪ್ರೇಹಾರ ನದಿಯು, ವಿದ್ವಾಂಸರು ಈವರೆಗೆ ಭಾವಿಸಿರುವಂತೆ ಮಲಪ್ರಭಾ ನದಿಯಾಗಿರದೆ, ಬಳ್ಳಾರಿ ಜಿಲ್ಲೆಯಲ್ಲಿ ಹರಿಯುವ 'ಹಗರಿ' ನದಿಯಾಗಿರಬೇಕೆಂಬ ಅಭಿಪ್ರಾಯವೂ ಇದೆ.[೩೫] ಅದರಂತೆ ಪ್ರೇಹಾರವು ಘಟಪ್ರಹಾರ(ಘಟಪ್ರಭಾ) ಅಥವಾ ಮಲಪ್ರಹಾರ(ಮಲಪ್ರಭಾ) ನದಿಯಾಗಿರಬೇಕೆಂದು ಕೆಲವು ಇತಿಹಾಸಕಾರರ ಅಭಿಪ್ರಾಯವಾಗಿದೆ.[೩೬] ಬನವಾಸಿ, ಗುಡ್ನಾಪುರ, ಹಲಸಿ, ಪಟ್ಟದಕಲ್ಲು, ಐಹೊಳೆ, ಹೊಸ ಮಹಾಕೂಟ ಮತ್ತು ನಾಗರಾಳ ಪ್ರದೇಶಗಳಲ್ಲಿ ಕದಂಬರ ಕಾಲಾವಧಿಯ ಹಲವು ದೇವಾಲಯದ ಇಟ್ಟಿಗೆಯ ಅವಶೇಷಗಳು ಬನವಾಸಿಯ ಕದಂಬರ ಕಾಲದವು ಎಂದು ವಿದ್ವಾಂಸರಾದ ಡಾ.ಅ.ಸುಂದರ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.[೩೭] ಮಯೂರಶರ್ಮ ನಂತರ ಕಂಗವರ್ಮ, ಭಗೀರಥವರ್ಮ, ಕಾಕುಸ್ಥವರ್ಮ, ಶಾಂತಿವರ್ಮ, ಒಂದನೆಯ ಕೃಷ್ಣವರ್ಮ, ಮೃಗೇಶವರ್ಮ, ಶಿವಸ್ಕಂದವರ್ಮ, ವಿಷ್ಣುವರ್ಮ, ಸಿಂಹವರ್ಮ, ಎರಡನೆಯ ಕೃಷ್ಣವರ್ಮರ ಕದಂಬರ ವಂಶದಲ್ಲಿ ಆಡಳಿತ ಮಾಡಿದ ಪ್ರಮುಖ ಅರಸರಾಗಿದ್ದಾರೆ.

ಬಾದಾಮಿ ಪರಿಸರದಲ್ಲಿ ಸುಡಾವೆ ಮಣ್ಣಿನ ದ್ವಿಬಾಹು ನರಸಿಂಹ, ಗಣಪತಿ ಹಾಗೂ ಪಟ್ಟದಕಲ್ಲಿನ ತೀರ್ಥಂಕರ ಮೂರ್ತಿ ಮುಂತಾದ ಶಿಲ್ಪಗಳು ವರದಿಯಾಗಿದ್ದು, ಇದು ಆದಿ ಕದಂಬರದಿರಬಹುದೆಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ.[೩೮] ಹಾಗಾಗಿ ಇವೆಲ್ಲಾ ಪುರಾತತ್ವಿಯ ಆಕರಗಳ ನೆಲೆಯಿಂದ ಬಾಗಲಕೋಟೆ ಜಿಲ್ಲೆಯು ಕದಂಬರ ಆಡಳಿತದ ವ್ಯಾಪ್ತಿಯಲ್ಲಿದ್ದಿತ್ತೆಂದು ಸ್ಪಷ್ಟಪಡಿಸಬಹುದು.

**ಬಾದಾಮಿ ಚಾಳುಕ್ಯರು (ಕ್ರಿ.ಶ.೫೭೮ ರಿಂದ ಕ್ರಿ.ಶ.೭೫೭)**

ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ಚಾಲುಕ್ಯರನ್ನು ಬಾದಾಮಿಯ ಚಲಿಕ್ಯರೆಂದು ಇತಿಹಾಸದಲ್ಲಿ ಗುರುತಿಸುತ್ತಾರೆ. ಇವರು ಆಳ್ವಿಕೆಯ ಪ್ರಾಚೀನ ಕುರುಹುಗಳಾಗಿ ಬಾದಾಮಿಯಲ್ಲಿ ಒಂದನೆಯ ಪುಲಿಕೇಶಿಯ ಶಾಸನಗಳು ದೊರೆತಿವೆ. ಬಾದಾಮಿ ೧೩೬ರ ಶಾಸನವನ್ನು ಪಲ್ಲವ ನರಸಿಂಹವರ್ಮನ ಕಡೆಯವರು ಬಾದಾಮಿಯನ್ನು ಗೆದ್ದಾಗ ಸುಟ್ಟಿರಬಹುದು. ಅಲ್ಲಿ ಶಾಸನದ ಕೆಲವು ಅಕ್ಷರಗಳು ಮಾತ್ರ ಉಳಿದಿದ್ದು ಅವುಗಳ ತಲೆಕಟ್ಟುಗಳು ಚಿಕ್ಕ ಗೆರೆಯಂತಿರದೆ ಸ್ವಲ್ಪ ಪೆಟ್ಟಿಗೆಯಾಕಾರದಲ್ಲಿವೆ ಹಾಗೂ ಅಕ್ಷರಗಳು ಉದ್ದುದ್ದವಾಗಿವೆ. ಇದೇ ಶಾಸನದ ಪೂರ್ವಪಾಠವು ಇದೇ ಬಂಡೆಯ ಎದುರಿಗೆ ಬಾದಾಮಿಯ ಮ್ಯೂಸಿಯಂ ಹಿಂಬದಿಯಲ್ಲಿ ಕಣಿವೆಯಲ್ಲಿ ದೊರೆತಿದೆ. ಇದು ಕಾಲಯುಕ್ತವಾದ ಶಾಸನ.

ಶಕವರ್ಷ ೪೬೫ರಲ್ಲಿ(ಕ್ರಿ.ಶ.೫೪೩) ಚಲಿಕ್ಯವಲ್ಲಭೇಶ್ವರನು ವಾತಾಪಿದುರ್ಗವನ್ನು ಅಜೇಯವಾಗಿ ನಿರ್ಮಿಸಿದಂತೆ ಅದರಲ್ಲಿ ಹೇಳಿದೆ.[೩೯] ಶಾಸನದಲ್ಲಿ ಇವನನ್ನು ಶ್ರುತಿಗಳಲ್ಲಿ ಹೇಳಿರುವ ರೀತಿಯಲ್ಲಿ ಅಶ್ವಮೇಧವೇ ಮೊದಲಾದ ಯಜ್ಞಗಳನ್ನು ಮಾಡಿದನೆಂದು ಹೇಳಿದೆ. ಇದೇ ಅರಸನ ಕಾಲದ ತ್ರುಟಿತ ಶಾಸನವೊಂದು ದೊರೆತಿದ್ದು ಅದರಲ್ಲಿ ಅವನು ವಿಜಯ ವಾತಾಪಿಯಲ್ಲಿದ್ದಂತೆ ಹೇಳಿ, ಅವನನ್ನು ಪರಮ ಭಾಗವತನೆಂದು ಕರೆದಿದೆ. ಮುಂದಿನ ಚಲಿಕ್ಯ ಅರಸರ ಶಾಸನಗಳಲ್ಲಿ ಕಾಣಬರುವ ಸ್ವಾಮಿಮಹಾಸೇನ ಮಾತ್ರ ಗಣಪಾದಾನುದ್ಧತಾನಾಂ, ಹಾರಿತೀಪುತ್ರಾಣಾಂ ಮುಂತಾದ ವಿವರಗಳನ್ನು ಇಲ್ಲಿಯೂ ನೀಡಲಾಗಿದೆ. ಶಾಸನದಲ್ಲಿ ಸ್ಪಷ್ಟವಾಗಿ 'ಪೊಲಕೇಸಿವಲ್ಲಭ' ಎಂದು ಹೆಸರಿಸಿದೆ. ಹೀಗೆ ಒಂದನೆಯ ಪುಲಿಕೇಶಿಯ ಕಾಲದಲ್ಲಿ ಬಾದಾಮಿ ಚಲಿಕ್ಯರ ರಾಜ್ಯ ಒಂದು ಸ್ಥಿರತೆಯನ್ನು ಪಡೆಯಿತು. ರನ್ನನೂ ಸಹ ಈ ಪುಲಿಕೇಶಿಯನ್ನು ವಾತಾಪಿಪುರ ಪರಮೇಶ್ವರ ಅಶ್ವಮೇಧ ಯಜ್ಞದೀಕ್ಷಿತ ಮೊದಲಾಗಿ ಕರೆದಿದ್ದಾನೆ (ಗದಾಯುದ್ಧ, ಎರಡನೆಯ ಆಶ್ವಾಸ).[೪೦] ಶಾತವಾಹನರ ನಂತರ ದಕ್ಷಿಣ ಭಾರತದಲ್ಲಿ ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿದ ಕೀರ್ತಿ ಚಾಳುಕ್ಯರಿಗೆ ಸಲ್ಲುತ್ತದೆ. ಕ್ರಿ.ಶ.೫೪೦ರಲ್ಲಿ ಕದಂಬರನ್ನು ಸೋಲಿಸಿ ಪುಲಿಕೇಶಿಯು ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಈತನ ಕಾಲಾವಧಿಯಲ್ಲಿ ಕ್ರಿ.ಶ.೫೪೩ರಲ್ಲಿ ಬಾದಾಮಿಯಲ್ಲಿ ಅಬೇಧ್ಯವಾದ ಕೋಟೆಯನ್ನು ಕಟ್ಟಿ ತನ್ನ ರಾಜ್ಯವನ್ನು ಭದ್ರಪಡಿಸಿದನೆಂದು ಬಾದಾಮಿಯಲ್ಲಿ ದೊರೆತ ಬಂಡೆಗಲ್ಲು ಶಾಸನದಿಂದ ತಿಳಿಯುತ್ತದೆ.[೪೧] ಬಾದಾಮಿ ಚಾಳುಕ್ಯ ಅರಸರ ಕಾಲದ ದ್ರಾವಿಡ ಹಾಗೂ ಔತ್ತರೇಯ ಮಾದರಿಯ ದೇವಾಲಯವನ್ನು ಬಾದಾಮಿ, ಪಟ್ಟದಕಲ್ಲು, ಐಹೊಳೆ ಹಾಗೂ ಮಹಾಕೂಟದಲ್ಲಿ ನೋಡಬಹುದು. ಇವರ ಕಾಲದ ವಾಸ್ತುಶೈಲಿಯನ್ನು ಬಾದಾಮಿ ಚಾಲುಕ್ಯ ಶೈಲಿ ಎಂದು ಕರೆಯುವರು. ಗುಜರಾತ್, ಮಹಾರಾಷ್ಟ್ರ, ಆಂಧ್ರ ಪ್ರದೇಶ ಹಾಗೂ ಕರ್ನಾಟಕವನ್ನೊಳಗೊಂಡ ಇವರ ಸಾಮ್ರಾಜ್ಯದ ವ್ಯಾಪ್ತಿಯು ಉತ್ತರದ ನರ್ಮದೆಯಿಂದ ದಕ್ಷಿಣದ ಕಾವೇರಿವರೆಗೆ ಹಬ್ಬಿತ್ತು.

ಕ್ರಿ.ಶ.೫೪೩ರಲ್ಲಿ ಬಾದಾಮಿಯಲ್ಲಿ ನಿರ್ಮಿಸಿದ ಕೋಟೆಯು ಪ್ರಥಮ ಶಾಸನೋಕ್ತ ಕೋಟೆಯಾಗಿದೆ. ಆನಂತರ ಅಧಿಕಾರಕ್ಕೆ ಬಂದ ಒಂದನೆಯ ಕೀರ್ತಿವರ್ಮ(೫೬೬–೫೯೬). ಮಂಗಳೇಶ(೫೯೬–೬೦೮), ಎರಡನೆಯ(ಇಮ್ಮಡಿ) ಪುಲಿಕೇಶಿ(೬೦೮–೬೪೨)ಯು ದಕ್ಷಿಣಭಾರತದ ಎಲ್ಲ ರಾಜರುಗಳನ್ನು ಸೋಲಿಸಿ ಸಾರ್ವಭೌಮನಾಗಿದ್ದನು. ರವಿಕೀರ್ತಿ ರಚಿಸಿದ ಐಹೊಳೆ ಶಾಸನವು ಈತನ ಪ್ರಶಸ್ತಿಯನ್ನು ವಿವರಿಸುತ್ತದೆ. ಇವನ ನಂತರ ಸಿಂಹಾಸನವೇರಿದ ಒಂದನೆಯ ವಿಕ್ರಮಾದಿತ್ಯ(೬೫೫–೬೮೧). ವಿನಯಾದಿತ್ಯ(೬೮೧–೬೯೬),

ವಿಜಯಾದಿತ್ಯ(೬೯೬–೭೩೩) ಇಮ್ಮಡಿ(ಎರಡನೆಯ) ವಿಕ್ರಮಾದಿತ್ಯ(೭೩೩–೭೪೫) ಪ್ರಮುಖರಾಗಿದ್ದಾರೆ.

ರಾಷ್ಟ್ರಕೂಟ ಒಂದನೆಯ ಕೃಷ್ಣನು ಕ್ರಿ.ಶ.೭೫೭ರಲ್ಲಿ ಚಾಳುಕ್ಯರ ಕೊನೆಯ ಅರಸ ಇಮ್ಮಡಿ ಕೀರ್ತಿವರ್ಮ(೭೪೪–೭೫೭)ನನ್ನು ಸಂಪೂರ್ಣವಾಗಿ ಸೋಲಿಸುವುದರ ಮೂಲಕ ದಂತಿದುರ್ಗ ನಿಂದ ಸ್ಥಾಪಿಸಲ್ಪಟ್ಟ ರಾಷ್ಟ್ರಕೂಟ ಮನೆತನಕ್ಕೆ ಸ್ವತಂತ್ರ ಅಡಿಪಾಯವನ್ನು ಹಾಕಿದನು. ಬಾದಾಮಿ ಚಾಲುಕ್ಯ ಮನೆತನ ಬಾಗಲಕೋಟೆ ಜಿಲ್ಲೆಯಲ್ಲಿರುವುದು ಹೆಮ್ಮೆಯಾಗಿದೆ. ಹಾಗಾಗಿ ಇಡಿ ವಿಶ್ವಮಟ್ಟ ದಲ್ಲಿ ವಿಶ್ವಪಾರಂಪರಿಕ ತಾಣವಾಗಿ ಬಾಗಲಕೋಟೆ ಜಿಲ್ಲೆಯ ಐಹೊಳೆ, ಪಟ್ಟದಕಲ್ಲು ದೇವಾಲಯಗಳ ಸಮೂಹ ಮಾನ್ಯತೆ ಪಡೆದು ಗುರುತಿಸಿಕೊಂಡಿದೆ.

## ಪಲ್ಲವರು ಮತ್ತು ಬಾದಾಮಿ ಚಾಲುಕ್ಯರ ಸಂಬಂಧ

ಕ್ರಿ.ಶ.೫೯೯ರ ಶಾಸನದಲ್ಲಿ ಮಂಗಲೇಶನು ಗೆದ್ದ ರಾಜರ ಪಟ್ಟಿಯಲ್ಲಿ ಪಲ್ಲವರ ಹೆಸರಿಲ್ಲ. ಆದರೆ ದಮಿಳ, ಪಾಂಡ್ಯ ಚೋಳ(ಬಾ.೪೧೦) ಎಂದು ಪ್ರತ್ಯೇಕವಾಗಿ ಹೆಸರಿಸಿರುವುದರಿಂದ ದಮಿಳವೇ ಪಲ್ಲವರಾಜ್ಯವಾಗಿದ್ದಿರಬೇಕು. ಇಮ್ಮಡಿ ಪುಲಿಕೇಶಿ ಕಾಲದ ಕ್ರಿ.ಶ.೬೩೪ರ ಶಾಸನದಲ್ಲಿ ಪೊಲಕೇಶಿಯು ಕಾಂಚಿಯನ್ನು ಗೆದ್ದು ಪಲ್ಲವರನ್ನು ಸೋಲಿಸಿದ ಉಲ್ಲೇಖ ಬರುತ್ತದೆ. ಇಮ್ಮಡಿ ಪುಲಿಕೇಶಿಯು ಪಲ್ಲವರನ್ನು ಗೆದ್ದಾಗ ಕಂಚಿಯ ಅರಸನಾಗಿದ್ದವನು ಒಂದನೆಯ ಮಹೇಂದ್ರವರ್ಮ. ಇವನ ಮಗ ನರಸಿಂಹವರ್ಮ ಪಟ್ಟಕ್ಕೆ ಬಂದಾಗ ಬಾದಾಮಿಯ ಚಾಲುಕ್ಯರ ಮೇಲೆ ಯುದ್ಧ ಸಾರಿದ ಈ ಯುದ್ಧದಲ್ಲಿ ಇಮ್ಮಡಿ ಪುಲಿಕೇಶಿ ಸೋಲೊಪ್ಪುತ್ತಾನೆ.ಈ ಪುಲಿಕೇಶಿಯ ಬಗ್ಗೆ ಮುಂದೆ ವಿವರಗಳು ದೊರೆಯುವುದಿಲ್ಲ. ಮಣಿಮಂಗಲ, ಪಲಿಯಾಲ ಮುಂತಾದ ಕಡೆಯ ಶಾಸನಗಳಲ್ಲಿ ನರಸಿಂಹವರ್ಮನು 'ಪುಲಿಕೇಶಿಯ ಬೆನ್ನ ಮೇಲೆ ಸೋಲು ಎಂಬ ಪದವನ್ನು  ಬರೆದ' ಎಂದಿದೆ. ಇದಲ್ಲದೆ ಬಾದಾಮಿಯ ಮ್ಯೂಸಿಯಂ ಮುಂದೆ ಇರುವ ಬಂಡೆಗಲ್ಲಿನ ಶಾಸನವು ನರಸಿಂಹವರ್ಮನ ೧೩ನೆಯ ವರ್ಷದ ಶಾಸನವಾಗಿದ್ದು ಅದರಲ್ಲಿ ಅವನನ್ನು ಮಹಾಮಲ್ಲನೆಂದು ಕರೆದಿದೆ. ಅವನು ವಾತಾಪಿಯನ್ನು ಆಕ್ರಮಿಸಿದ್ದಕ್ಕೆ ಈ ಶಾಸನ ಉದಾಹರಣೆ ಯಾಗಿದೆ. ಇತ್ತೀಚಿನ ಗಮನಿಕೆಗಳ ಪ್ರಕಾರ ಈ ನರಸಿಂಹವರ್ಮನು ಕನ್ನಡ ಲಿಪಿ. ಸಂಸ್ಕೃತ ಭಾಷೆಯಲ್ಲಿ ಒಂದನೆಯ ಪುಲಿಕೇಶಿ ಹಾಕಿಸಿದ್ದ ಬಂಡೆಗಲ್ಲು ಶಾಸನವನ್ನು ಆಳಿಸಿ ಅದರ ಮೇಲೆ ತನ್ನ ಶಾಸನವನ್ನು ಬರೆಸಿರುವುದು ಸ್ಪಷ್ಟವಾಗಿದೆ (ಬಾದಾ.೨೭೮). ಬಹುಶಃ ನರಸಿಂಹ ವರ್ಮನು ಹೋದ ಮೇಲೆ ಅಳಿಸಿದ ಶಾಸನಪಾಠವನ್ನು ಈಗ ಇರುವ ಜಾಗದಲ್ಲಿ ಬರೆದಿರ ಬಹುದು. ಇಲ್ಲಿಂದ ಮುಂದೆ ಪಲ್ಲವ ಮತ್ತು ಚಾಳುಕ್ಯರ ಯುದ್ಧಗಳು ನಡೆಯುತ್ತಲೇ ಇರುತ್ತವೆ. ಬಹುಶಃ ಪುಲಕೇಶಿಯು ಸೋತ ಕಾಲದಿಂದ

ಅಂದರೆ ಕ್ರಿ.ಶ.೬೪೨ರಿಂದ ವಿಕ್ರಮಾದಿತ್ಯನು ಪಟ್ಟಕ್ಕೆ ಬಂದ ಕ್ರಿ.ಶ.೬೫೫ರವರೆಗೆ ಬಾದಾಮಿ ಅಥವಾ ಚಲುಕ್ಯ ರಾಜ್ಯದ ಕೆಲವು ಭಾಗಗಳು ಪಲ್ಲವರ ಅಧೀನದಲ್ಲಿದ್ದಿರಬೇಕು. ನರಸಿಂಹವರ್ಮ ತನ್ನ ಆಳ್ವಿಕೆಯ ಕುರುಹಾಗಿ ಬಾದಾಮಿಯಲ್ಲಿನ ಶಾಸನವನ್ನು ಪಲ್ಲವಗ್ರಂಥ ಲಿಪಿ, ಸಂಸ್ಕೃತ ಭಾಷೆಯಲ್ಲಿ ಬರೆಸಿದ್ದಾನೆ. ಚಲುಕ್ಯ ಇಮ್ಮಡಿ ವಿಕ್ರಮಾದಿತ್ಯನು ಕಂಚಿಯನ್ನು ಗೆದ್ದಾಗ ಅಲ್ಲಿ ಕನ್ನಡ ಲಿಪಿ ಕನ್ನಡ ಭಾಷೆಯ ಶಾಸನ ಹಾಕಿಸಿರುವುದು ಇದೇ ಪ್ರವೃತ್ತಿಯ ಸೂಚಕ.

**ರಾಷ್ಟ್ರಕೂಟರು (ಕ್ರಿ.ಶ.೭೫೭ ರಿಂದ ೯೭೩)**

ಬಾದಾಮಿ ಚಾಲುಕ್ಯರ ಕೊನೆಯ ದೊರೆ ಇಮ್ಮಡಿ(ಎರಡನೆಯ) ಕೀರ್ತಿವರ್ಮನನ್ನು ಸೋಲಿಸಿ ರಾಷ್ಟ್ರಕೂಟರ ದಂತಿದುರ್ಗನು ಕ್ರಿ.ಶ.೭೫೩ರಲ್ಲಿ ರಾಷ್ಟ್ರಕೂಟ ಮನೆತನವನ್ನು ಸ್ಥಾಪಿಸಿದನು. ಇವರ ಮೊದಲ ರಾಜಧಾನಿ ಏಲಾಪೂರ(ಎಲ್ಲೋರ). ಮುಂದೆ ಮಳಖೇಡ ಅಥವಾ ಮಾನ್ಯಖೇಡ (ಗುಲಬರ್ಗಾ ಜಿಲ್ಲೆ) ಇವರ ರಾಜಧಾನಿಯಾಯಿತು. ರಾಷ್ಟ್ರಕೂಟರ ಸಾಮ್ರಾಜ್ಯವು ಪ್ರಾಚೀನ ಪ್ರಪಂಚದ ನಾಲ್ಕು ವಿಶಾಲ ಸಾಮ್ರಾಜ್ಯಗಳಲ್ಲಿ ಒಂದಾಗಿದ್ದು, ಉಳಿದ ಚೀನಾ, ಪರ್ಶಿಯಾ ಹಾಗೂ ರೋಮ್ ಸಾಮ್ರಾಜ್ಯಗಳಿಗಿಂತ ವಿಶಾಲವಾಗಿತ್ತೆಂಬ ಅಂಶವನ್ನು ರಾಷ್ಟ್ರಕೂಟ ಅಮೋಘವರ್ಷ ನೃಪತುಂಗನ ಆಳ್ವಿಕೆಯಲ್ಲಿ ಭೇಟಿ ನೀಡಿದ್ದ ಅರಬ್ ದೇಶದ ವ್ಯಾಪಾರಿಯಾದ ಸುಲೈಮಾನ್ ದಾಖಲಿಸಿದ್ದಾನೆ.[೪೨] ಕನ್ನಡದ ಅತ್ಯಂತ ಪ್ರಾಚೀನ ಗ್ರಂಥವಾದ ಶ್ರೀ ವಿಜಯ ವಿರಚಿತ 'ಕವಿರಾಜ ಮಾರ್ಗ' ರಚನೆಯಾದುದು ಚಕ್ರವರ್ತಿ ಒಂದನೇ ಅಮೋಘವರ್ಷ ನೃಪತುಂಗನ ಆಸ್ಥಾನದಲ್ಲಿ ಕವಿರಾಜಮಾರ್ಗಕಾರ ತಿರುಳ್ಗನ್ನಡ ಪ್ರದೇಶದ ಗಡಿಗಳನ್ನು ಸೂಚಿಸುವಾಗ, ಪಟ್ಟದಕಲ್ಲನ್ನು ಗಡಿಯಾಗಿ ಉಲ್ಲೇಖಿಸಿರುವುದು ಗಮನಾರ್ಹವಾಗಿದೆ.[೪೩] ಇದರಿಂದ ರಾಷ್ಟ್ರಕೂಟರ ಆಡಳಿತದ ಗಡಿಯು ಜಿಲ್ಲೆಯವರೆಗೂ ಹರಡಿಕೊಂಡಿತ್ತು.

ಐಹೊಳೆಯ ರಾವಳಪಡಿ ಗುಹಾಲಯದ ಬಲಿ ಇರುವ ಶಾಸನವೊಂದು ಅಮೋಘವರ್ಷ ನೃಪತುಂಗನ ಕಾಲಕ್ಕೆ ಸೇರಿದ್ದು, ಸೂರ್ಯಕರ್ತಿರ ಭಟಾರ ಹಾಗೂ ಬಾಲಕರ್ತಾರ ಭಟರರು ಅಲ್ಲಿ ಚಾತುರ್ಮಾಸ ಕಳೆದ ಅಂಶವನ್ನು ದಾಖಲಿಸಿದೆ.[೪೪] ನಂದವಾಡಗಿಯ ೯೦೩ರ ತ್ರುಟಿತ ಶಾಸನ ಇಮ್ಮಡಿ ಕೃಷ್ಣನ ಆಳ್ವಿಕೆಯಲ್ಲಿ ದೇವಾಲಯ ನಿರ್ಮಾಣ ಹಾಗೂ ಭೂದಾನಗಳ ಬಗ್ಗೆ ತಿಳಿಸುತ್ತದೆ.[೪೫] ರಾಷ್ಟ್ರಕೂಟರ ಸಾಮಂತರಾದ ಚಲ್ಲಕೇತನ ಕಿರು ಅರಸು ಮನೆತನದ ವೀರಬಂಕೀಯ ಆಡಳಿತ ನಡೆಸುತ್ತಿದ್ದನು. ವೀರಬಂಕೇಯ ಮತ್ತು ತೈಲಕಬ್ಬೆ ದಂಪತಿಯ ಮಗನಾದ ಲೋಕಟೆ(ಲೋಕಾಧಿತ್ಯ ಕ್ರಿ.ಶ.೮೬೫–೯೪೬) ಅರಸ ತನ್ನ ಹೆಸರಿನಲ್ಲಿ

ಲೋಕಾಪುರ ಗ್ರಾಮವನ್ನು ಕ್ರಿ.ಶ.೮೯೮ರಲ್ಲಿ ಸ್ಥಾಪಿಸಿದನು.[೪೬] ಲೋಕಾಪುರ(ಮುಧೋಳ ತಾಲೂಕು) ೧೨ ಎಂದು ಆಡಳಿತ ವಿಭಾಗವಾಗಿತ್ತು. ಲೋಕಾಪುರದಲ್ಲಿ ಲೋಕ ಮಾಹೇಶ್ವರಿ ದೇವಾಲಯ, ಲೋಕನಾಥ ಬಸದಿ, ಲೋಕಸಮುದ್ರ, ಸರೋವರ ಹಾಗೂ ಹರಿ, ಹರ, ಜಿನ, ಸುತ(ವೈಷ್ಣವ ದೇವಾಲಯ, ಶೈವ ದೇವಾಲಯ, ಜೈನ ಬಸದಿ, ಬುದ್ಧ ವಿಹಾರ) ಎಂಬ ನಾಲ್ಕು ಧರ್ಮದ ದೇವಾಲಯಗಳನ್ನು ಸ್ಥಾಪಿಸಿದನು.[೪೭] ಮೂರನೆಯ ಅಮೋಘವರ್ಷನ ಕಾಲಕ್ಕೆ ಸೇರಿದ ಮಹಾಕೂಟ ಸಂಗಮೇಶ್ವರ ದೇವಾಲಯದಲ್ಲಿರುವ ೯೩೩ರ ಶಾಸನ, ನಂದಿಕೇಶ್ವರ ಹಾಗೂ ನೆಲುವಿಗೆ ಗ್ರಾಮಗಳನ್ನು ದಾನ ಬಿಟ್ಟ ವಿಷಯವನ್ನು ದಾಖಲಿಸಿದೆ.[೪೮] ಐಹೊಳೆಯ ಹುಚ್ಚಮಲ್ಲಿ ಗುಡಿ ಮುಂದೆ ನಿಂತಿರುವ ೯೪೫ ಶಾಸನ, ಕೆಯ್ಯಯ್ಯನು ಗೋಸಹಸ್ರ ದಾನ ಮಾಡಿದ ಅಂಶವನ್ನು ದಾಖಲಿಸಿದೆ. ಅಮೋಘವರ್ಷನ ನಂತರ ಎರಡನೆ ಕೃಷ್ಣ(೮೮೦-೯೧೪). ಮೂರನೆಯ ಇಂದ್ರ(೯೧೪-೯೨೮), ಮುಮ್ಮಡಿ ಅಮೋಘವರ್ಷ(೯೨೮-೯೩೯). ಮುಮ್ಮಡಿ ಕೃಷ್ಣ(೯೩೯-೯೬೬), ಕೊಟ್ಟಿಗ(೯೬೭-೯೭೨), ಕರ್ಕ-೨(೯೭೨-೯೭೩), ನಾಲ್ಕನೆಯ ಇಂದ್ರ(೯೭೩)ನು ರಾಷ್ಟ್ರಕೂಟ ಮನೆತನದಲ್ಲಿ ಆಡಳಿತ ನಡೆಸಿದ ಪ್ರಮುಖ ದೊರೆಗಳಾಗಿದ್ದಾರೆ. ಈ ಮನೆತನದ ಅರಸರ ದುರ್ಬಲತೆಯನ್ನು ಸದುಪಯೋಗಪಡಿಸಿಕೊಂಡ ಇವರ ಸಾಮಂತನಾದ ಎರಡನೆಯ ತೈಲಪನು ಕರ್ಕನನ್ನು ಸೋಲಿಸಿ ಕಲ್ಯಾಣ ಚಾಳುಕ್ಯರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ರಾಷ್ಟ್ರಕೂಟರ ಆಡಳಿತ ಬಾಗಲಕೋಟೆ ಜಿಲ್ಲೆಯಲ್ಲಿ ಇದ್ದಂತಹ ಸಮಯದಲ್ಲಿ ಹಲವಾರು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅವು ಇಂದಿಗೂ ಸಹ ಸುಸ್ಥಿತಿಯಲ್ಲಿವೆ. ಉದಾ: ಲೋಕಾಪುರದ ಶ್ರೀ ಲೋಕೇಶ್ವರ ದೇವಾಲಯ ಹಾಗೂ ಶ್ರೀ ಪಾಂಡುರಂಗ ವಿಠೋಭಾ ಮಂದಿರ(ಮೂಲ ಜೈನಬಸದಿ) ಇತ್ಯಾದಿಗಳಾಗಿ ಗುರುತಿಸಬಹುದು.

### ಕಲ್ಯಾಣ ಚಾಳುಕ್ಯರು(ಕ್ರಿ.ಶ.೯೭೩ರಿಂದ ೧೧೮೯)

ಬಾದಾಮಿ ಚಾಲುಕ್ಯರ ಮನೆತನಕ್ಕೆ ಸೇರಿದ ಇಮ್ಮಡಿ ತೈಲಪನು ಸುಮಾರು ೯೭೩ರಲ್ಲಿ ರಾಷ್ಟ್ರಕೂಟರ ಕರ್ಕನನ್ನು ಸೋಲಿಸಿ, ಚಾಳುಕ್ಯರ ಅಧಿಕಾರವನ್ನು ಎರಡು ಶತಮಾನಗಳ ನಂತರ ಪುನರ್ ಯಶಸ್ವಿಯಾದನು. ಆರಂಭದಲ್ಲಿ ಇವರ ರಾಜಧಾನಿ ಮಾನ್ಯಖೇಟವಾಗಿದ್ದು, ಒಂದನೆಯ ಸೋಮೇಶ್ವರನ ಕಾಲಕ್ಕೆ ಕಲ್ಯಾಣ(ಬಸವ ಕಲ್ಯಾಣ)ವು ಇವರ ರಾಜಧಾನಿ ಯಾಯಿತು.[೪೯] ಕಲ್ಯಾಣದ ಚಾಲುಕ್ಯರ ಕಾಲದ ಇತಿಹಾಸವನ್ನು ರಚಿಸುವಲ್ಲಿ ಶಾಸನಗಳು ಸಮೃದ್ಧವಾಗಿ ಲಭ್ಯವಿದ್ದು, ವಿಜಾಪುರ ಜಿಲ್ಲೆಯ ಇವರ ಕಾಲಕ್ಕೆ ಸೇರಿದ ಸುಮಾರು ೨೦೦

ಶಾಸನಗಳು ಈವರೆಗೆ ಲಭಿಸಿವೆ. ಹಾಗೇನೆ ವಿಕ್ರಮಾಂಕದೇವ ಚರಿತ್ರೆ, ಮಿತಾಕ್ಷರ, ಅಭಿಲಾಷಿತಾರ್ಥ ಚಿಂತಾಮಣಿ ಮುಂತಾದ ಸಾಹಿತ್ಯ ಕೃತಿಗಳು ಸಹ ಕಲ್ಯಾಣ ಚಾಲುಕ್ಯರ ಚರಿತ್ರೆ ದಾಖಲಿಸಲು ನೆರವಾಗುತ್ತವೆ.

ಪಟ್ಟದಕಲ್ಲಿನ ಮಲ್ಲಿಕಾರ್ಜುನ ಗುಡಿಯ ದ್ವಾರದ ಎಡ ಕಂಬದ ಮೇಲಿರುವ ಸುಮಾರು ಎಂಟನೆಯ ಶತಮಾನಕ್ಕೆ ಸೇರಿದ 'ಶ್ರೀ ಪೆರ್ಗಡೆ ಮಹಾರಾಜನ್ ತೈಲ ಮಹಾಧಿರಾಜ ಪೆಸರು' ಶಾಸನದಲ್ಲಿರುವ 'ಮಹಾಧಿರಾಜ ತೈಲ' ಉಲ್ಲೇಖವು ಬಾದಾಮಿ ಚಾಳುಕ್ಯ ವಿಜಯದಿತ್ಯ ಮೊಮ್ಮಗನಾದ ಒಂದನೆಯ ತೈಲಪನದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ.[೫೦] ಕ್ರಿ.ಶ.೯೯೦ರ ತ್ರುಟಿತ ಶಾಸನವೊಂದು ಹಳ್ಳೂರಿನ ಬಸವೇಶ್ವರ ದೇವಾಲಯದ ಮುಂದಿದ್ದು, ಬಹಳ ಹಾಳಾಗಿರುವುದರಿಂದ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.[೫೧] ಕೆಲವಡಿಯಿಂದ ವರದಿಯಾಗಿರುವ ೧೦೫೩ರ ಶಾಸನ, ಕೆಳವಾಡಿ-೩೦೦ ಅನ್ನು ಆಳುತ್ತಿದ್ದ ತ್ರೈಲೋಕ್ಯಮಲ್ಲನ ಮಹಾಸಾಮಂತನು ಲಾಟ, ಕರ್ನಾಟ, ಕರಹಾಡ, ಕಳಿಂಗ, ವಂಗ, ದೇಶಗಳ ಮೇಲೆ ಗೆಲುವು ಪಡೆದಿದ್ದನ್ನು ಹೇಳುತ್ತದೆ.[೫೨] ಶಿರೂರಿನ ಸಿದ್ದೇಶ್ವರ ಗುಡಿಯ ದಕ್ಷಿಣ ಗೋಡೆಯ ಮೇಲಿರುವ ೧೦೪೯ರ ಸಂಸ್ಕೃತ ಶಾಸನ, ಪ್ರಭು ಮಾರಸಿಂಗನು ಹುನಗುಂದ-೩೦ರಲ್ಲಿದ್ದ ಶ್ರೀಪುರ(ಶಿರೂರು)ದ ದಕ್ಷಿಣದಲ್ಲಿದ್ದ ಸಿದ್ದೇಶ್ವರ ದೇವರ ಸೇವೆಗೆಂದು ೨೦೦ ನಿರ್ವರ್ತನ ಭೂಮಿಯನ್ನು ಸೇರಿದಂತೆ ಇನ್ನಿತರ ದಾನಗಳನ್ನು ದಾಖಲಿಸಿದೆ.[೫೩] ತ್ರೈಲೋಕ್ಯಮಲ್ಲನು ಮಾಳವ, ಪಲ್ಲವ, ಪಾಂಡ್ಯ ಮಗಧ ಹಾಗೂ ಗೂರ್ಜರರ ಮೇಲೆ ಗೆಲುವು ಪಡೆದ ವಿಷಯವನ್ನು ದಾಖಲಿಸಿದೆ. ಜೊತೆಗೆ ಈ ಶಾಸನ ಹಿರಿಯರಾಣಿ ಮೈಳಲದೇವಿ, ಮಹಾಮಂಡಳೇಶ್ವರ ವತ್ಸರಾಜು ಹಾಗೂ ಭಾವನ ಗಂಧವಾರಣರನ್ನು ಉಲ್ಲೇಖಿಸಿ, ಅದರಲ್ಲೂ ನಂದವಾಡಗಿ ನಾಗಲಿಂಗೇಶ್ವರ ಗುಡಿ ಮಂಟಪ ನಿರ್ಮಿಸಿ, ಆ ದೇವಾಲಯದ ವಿವಿಧ ಚಾಕರಿಗಳಲ್ಲಿ ತೊಡಗಿದವರಿಗೆಂದು ವಿವಿದ ಭೂದಾನಗಳನ್ನು ನೀಡಿದ ಅಂಶವನ್ನು ಹುನಗುಂದ, ಪುರುಗೂರು ಕುಂದುರಗೆಗಳಲ್ಲಿ ಜಿನಾಲಯಗಳನ್ನು ನಿರ್ಮಿಸಿರುವುದನ್ನು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.[೫೪] ಈ ಶಾಸನಗಳಿಂದ ಜಿಲ್ಲೆಯ ಇತಿಹಾಸ ಪ್ರಾಚೀನವಾಗಿದ್ದುದ್ದಾಗಿದೆ ಎಂದು ಹೇಳಬಹುದು.

ಆರನೆಯ ವಿಕ್ರಮಾದಿತ್ಯ(೧೦೭೬–೧೧೨೬) ಆಡಳಿತದ ಅವಧಿಯಲ್ಲಿ ೬೦ ಶಾಸನಗಳು ವಿಜಯಪುರ ಜಿಲ್ಲೆಯಲ್ಲಿ ಪತ್ತೆಯಾಗಿವೆ. ಅದರಲ್ಲಿ ಹೆಚ್ಚಿನವು ದತ್ತಿ ಶಾಸನಗಳಾಗಿದ್ದು, ಕುಳೆ ಕುಮಟಗಿ, ಮುತ್ತಗಿ, ಜಮಖಂಡಿ, ಅರಸೀಬಿದಿ, ತಾಂಬಾ, ಕನ್ನೂರು, ಕನ್ನೊಳ್ಳಿ, ನೀಲಗುಂದ ಮಲಘಾಣ, ಐಹೊಳೆ, ಹುನಗುಂದ ಮುಂತಾಡೆಗಳಲ್ಲಿ ಶೈವ ಹಾಗೂ ಜೈನ ಮಂದಿರಗಳು ನಿರ್ಮಾಣಗೊಂಡ ಮಹತ್ವದ ಅಂಶವನ್ನು ತಿಳಿಸುತ್ತವೆ.[೫೫] ಇಮ್ಮಡಿ ಜಗದೇಕ ಮಲ್ಲ(೧೧೩೮–

೧೧೪೯)ನ ಆಡಳಿತದ ಅವಧಿಯಲ್ಲಿ ೨೦ ಶಾಸನಗಳು ಜಿಲ್ಲೆಯಲ್ಲಿ ದೊರೆತಿದ್ದು, ವಿಜಾಪುರ, ಕಟಕನಹಳ್ಳಿ, ದೇವರ ನಾವದಗಿ, ಸಾಲೋಟಗಿ, ಹಂದರಗಲು, ಶಿರೂರು, ಹೆರಕಲ್ ಮುಂತಾದ ಸ್ಥಳಗಳಲ್ಲಿ ದೇವಾಲಯಗಳು ನಿರ್ಮಾಣಗೊಂಡು, ದಾನಿಗಳು ದತ್ತಿ ಬಿಟ್ಟ ವಿಷಯ ವಿವಿಧ ಶಾಸನಗಳಿಂದ ತಿಳಿದುಬರುತ್ತದೆ.[೩೬] ಇಲ್ಲಿ ಹೆಚ್ಚಾಗಿ ದಾನದತ್ತಿ ಶಾಸನಗಳು ದೊರೆತಿರುವುದು ವಿಶೇಷವಾಗಿದೆ.

ಇಮ್ಮಡಿ ತೈಲಪ(೯೭೩–೯೯೭)ನಿಂದ ಸ್ಥಾಪಿತವಾದ ಕಲ್ಯಾಣ ಚಾಲುಕ್ಯ ಮನೆತನ ಪ್ರಮುಖ ಅರಸರೆಂದರೆ, ಇರಿವಬೆಡಂಗ ಸತ್ಯಾಶ್ರಯ (೯೯೭–೧೦೦೮), ಐದನೆಯ ವಿಕ್ರಮಾದಿತ್ಯ(೧೦೦೮–೧೦೧೫), ಇಮ್ಮಡಿ ಜಯಸಿಂಹ(೧೦೧೫–೧೦೪೪). ಒಂದನೆಯ ಸೋಮೇಶ್ವರ(೧೦೪೪–೧೦೬೮), ಎರಡನೆಯ ಸೋಮೇಶ್ವರ(೧೦೬೮–೧೦೭೬), ಆರನೆಯ ವಿಕ್ರಮಾದಿತ್ಯ(೧೦೭೬–೧೧೨೬), ಮುಮ್ಮಡಿ ಸೋಮೇಶ್ವರ(೧೧೨೬–೧೧೩೮) ಇಮ್ಮಡಿ ಜಗದೇಕಮಲ್ಲ(೧೧೩೮–೧೧೪೯), ಮೂರನೆಯ ತೈಲಪ(೧೧೪೯–೧೧೬೨) ನಾಲ್ಕನೆಯ ಸೋಮೇಶ್ವರ(೧೧೮೧–೧೧೯೮) ಆಡಳಿತ ನಡೆಸಿದರು. ಕಲ್ಯಾಣ ಚಾಲುಕ್ಯರು ನಿರ್ಮಿಸಿದ ದೇವಾಲಯಗಳು ಬಾಗಲಕೋಟೆ ಜಿಲ್ಲೆಯ ಕೆಲವು ಸ್ಥಳಗಳಲ್ಲಿ ಇಂದಿಗೂ ಸಹ ನೋಡಬಹುದು.

**ಕಳಚೂರಿಗಳು(೧೧೬೨–೧೧೮೪)**

ಕರ್ನಾಟಕವನ್ನು ಆಳಿದ ಅರಸು ಮನೆತನಗಳಲ್ಲಿ ಅತ್ಯಂತ ಅಲ್ಪಾವಧಿ ಆಡಳಿತ ನಡೆಸಿದ ರಾಜಮನೆತನ ಕಳಚೂರಿಗಳದು. ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ಕಲ್ಯಾಣದ ಚಾಳುಕ್ಯರ ಸಾಮಂತರಾಗಿ, ನಿಕಟ ಬಂಧುಗಳಾಗಿ ರಾಜಕೀಯ ಪ್ರಾಮುಖ್ಯತೆ ಹೊಂದಿದ್ದ ಇವರು, ಚಾಳುಕ್ಯ ಮುಮ್ಮಡಿ ಸೋಮೇಶ್ವರ ನಂತರ ಕ್ರಮೇಣ ಮಾಂಡಲಿಕತ್ವವನ್ನು ಸೂಚಿಸುವ ಬಿರುದುಗಳನ್ನು ಒಂದೊಂದಾಗಿ ಕೈ ಬಿಡುತ್ತಾ ಅಸಂತೃಪ್ತ ಚಾಳುಕ್ಯ ಸಾಮಂತರನ್ನು ತಮ್ಮೆಡೆಗೆ ಸೆಳೆದುಕೊಳ್ಳುತ್ತಾ ರಾಜಕೀಯ ಪ್ರಾಬಲ್ಯತೆಯನ್ನು ಗಳಿಸಿಕೊಳ್ಳುತ್ತಾ ಕಡೆಗೆ ಚಾಳುಕ್ಯ ಮುಮ್ಮಡಿ ತೈಲಪನ ಆಳ್ವಿಕೆಯಡಿಯಲ್ಲಿ ಉಂಟಾದ ರಾಜಕೀಯ ಕ್ಷೋಭೆಯ ಲಾಭ ಪಡೆದು. ಚಾಳುಕ್ಯರನ್ನು ಪದಚ್ಯುತಗೊಳಿಸಿ, ಕಲ್ಯಾಣವನ್ನು ವಶಪಡಿಸಿಕೊಂಡು ಪರಮಾಧಿಕಾರವನ್ನು ತಮ್ಮದಾಗಿಸಿಕೊಳ್ಳುವಲ್ಲಿ ಇಮ್ಮಡಿ ಬಿಜ್ಜಳನ ಮುಂದಾಳತ್ವದಲ್ಲಿ ಯಶಸ್ವಿಯಾದರು.[೩೭] ಮಧ್ಯಭಾರತದ ಕಲಚೂರಿ ವಂಶದ ಹೈಹಯ ಕುಲಕ್ಕೆ ಸೇರಿದ ಕರ್ನಾಟಕದ ಕಳಚೂರಿಗಳು ಮೊದಲು ತರ್ದವಾಡಿ ನಾಡಿನ ಪಶ್ಚಿಮೋತ್ತರ ಗಡಿಗೆ ತಗುಲಿದ ತರಿಕಾಡ ನಾಡನ್ನು ತಮ್ಮ ನೆಲೆವೀಡನ್ನಾಗಿಸಿ ಕೊಂಡರು. ಆ ನಾಡಿನ ಮುಖ್ಯ ಪಟ್ಟಣವಾದ ಮಂಗಳವಾಡ(ಇಂದಿನ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆಯ ತಾಲೂಕು ಸ್ಥಳ ಮಂಗಳವೇಡ) ಅವರ ರಾಜಧಾನಿ

ಯಾಯಿತು.[೫೮] ಈ ಮನೆತನಕ್ಕೆ ಸಂಬಂಧಿಸಿದಂತೆ ಈವರೆಗೆ ವಿಜಯಪುರ ಜಿಲ್ಲೆಯಲ್ಲಿ ಸುಮಾರು ೭೫ ಶಾಸನಗಳು ಪತ್ತೆಯಾಗಿದ್ದು ಅವುಗಳಲ್ಲಿ ಹೆಚ್ಚಿನ ಶಾಸನಗಳು ಜಿಲ್ಲೆಯ ಉತ್ತರದಾದ್ಯಂತ ವಿಜಯಪುರ, ಇಂಡಿ, ಸಿಂದಗಿ, ಬಾಗೇವಾಡಿ ಹಾಗೂ ಜಮಖಂಡಿ ತಾಲೂಕುಗಳಲ್ಲಿ ಲಭಿಸಿರುವುದು ಗಮನಾರ್ಹವಾಗಿದೆ.[೫೯] ಜಮಖಂಡಿ ಜಿಲ್ಲೆಯ ಪ್ರಮುಖ ತಾಲೂಕಾಗಿದೆ. ಹಾಗಾಗಿ ಕಳಚೂರಿಗಳ ಅಧಿಕಾರ ವ್ಯಾಪ್ತಿಯು ಬಾಗಲಕೋಟೆ ಜಿಲ್ಲೆಯವರೆಗೂ ವಿಸ್ತರಿಸಿತ್ತು.

ಇವರ ಆಳ್ವಿಕೆಯೂ ಕೂಡಾ ಹಲವಾರು ಕಾರಣಗಳಿಂದಾಗಿ ಶಾಂತಿಯುತವಾಗಿರಲಿಲ್ಲ. ಇಮ್ಮಡಿ ಬಿಜ್ಜಳನ ಆಳ್ವಿಕೆಯಲ್ಲಿ ಒಂದೆಡೆ ಬಸವಣ್ಣನವರ ಮುಂದಾಳತ್ವದಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಸಮಾನತೆಗಾಗಿ ವೀರಶೈವ ಚಳುವಳಿ ನಡೆದಿದ್ದರೆ, ಇನ್ನೊಂದೆಡೆ ಬಿಜ್ಜಳನ ಮಕ್ಕಳ ನಡುವೆ ಅಧಿಕಾರಕ್ಕಾಗಿ ದಾಯಾದಿ ಕಲಹ ಏರ್ಪಡುವುದರ ಮೂಲಕ ಕಲಚೂರಿ ಆಡಳಿತ ಆಶಕ್ತಗೊಳಿಸಿತು. ಕಲ್ಯಾಣದಲ್ಲಿ ಶರಣರು ಪಲಾಯನವಾದ ಮೇಲೆ ಬಸವಣ್ಣನವರ ಬಾಗಲಕೋಟೆ ಜಿಲ್ಲೆಯ ಕೂಡಲಸಂಗಮದಲ್ಲಿ ಐಕ್ಯರಾದರೆಂದು ನಂಬಲಾಗಿದೆ.

### ದೇವಗಿರಿಯ ಸೇವುಣರು(ಕ್ರಿ.ಶ.೧೧೮೧–೧೩೨೨)

ಮಧ್ಯಕಾಲೀನ ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ದೇವಗಿರಿಯ ಯಾದವ ಅಥವಾ ಸೇವುಣ ಹಾಗೂ ದ್ವಾರಸಮುದ್ರದ ಹೊಯ್ಸಳ ಮನೆತನಗಳು ಪ್ರಸಿದ್ಧವಾಗಿವೆ. ಈ ಎರಡು ರಾಜಮನೆತನಗಳು ಕಲ್ಯಾಣದ ಚಾಳುಕ್ಯರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ನಿಷ್ಠೆಯಿಂದ ಇದ್ದ ಅಂಶ ಚಾರಿತ್ರಿಕ ಸತ್ಯ. ಆದರೆ ನಾಲ್ಕನೆಯ ಸೋಮೇಶ್ವರನ ಆಳ್ವಿಕೆಯ ಅಂತ್ಯ ಭಾಗದಲ್ಲಿ ಚಳುಕ್ಯ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿ ಹೊಯ್ಸಳರು, ಉತ್ತರ ಭಾಗದಲ್ಲಿ ಸೇವುಣರು ಸ್ವತಂತ್ರ ಘೋಷಿಸಿಕೊಂಡು, ರಾಜಕೀಯ ಪ್ರತಿಷ್ಠೆಯ ಸಂಕೇತವಾದ ಚಾಳುಕ್ಯ ರಾಜಧಾನಿ ಕಲ್ಯಾಣದ ಮೇಲೆ ತಮ್ಮ ಪ್ರಭುತ್ವ ಸಾಧಿಸಲು ಪರಸ್ಪರ ಕಾದಾಟಕ್ಕೆ ಇಳಿದರು. ಆದರೆ ಅಂತಿಮವಾಗಿ ತುಂಗಭದ್ರಾ ನದಿ ಈ ಎರಡೂ ಸಾಮ್ರಾಜ್ಯಗಳ ನಡುವಿನ ಗಡಿಯಾಯಿತು. ಸೇವುಣರು ದೇವಗಿರಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ೧೪೦ ವರ್ಷಗಳ ಕಾಲ ರಾಜ್ಯಭಾರ ಮಾಡಿದರು.[೬೦] ಇವರ ಆಡಳಿತವು ಸಹ ಚರಿತ್ರೆಯಲ್ಲಿ ದಾಖಲಾಗಿದೆ.

ಸೇವುಣರನ್ನು ಶಾಸನಗಳಲ್ಲಿ ಸೇವುಣ, ಸೇಗು, ಸೇಉಣ, ಸೇಮುಣ, ಸೇಗುಣ್ಣ ಯಾದವರು ಎಂದು ಉಲ್ಲೇಖಿಸಲಾಗಿದೆ. ಮಹಮ್ಮದೀಯ ಚರಿತ್ರೆಕಾರರು ಕೂಡ ಇವರನ್ನು

ಯಾದವರೆಂದು ಕರೆದಿದ್ದಾರೆ. ಇವರ ರಾಜ್ಯವು ಬಹುಮಟ್ಟಿಗೆ ಕನ್ನಡದ ಜಿಲ್ಲೆಗಳನ್ನೇ ಒಳಗೊಂಡಿತ್ತು. ಶಿವಮೊಗ್ಗ, ಹಾಸನ, ಚಿತ್ರದುರ್ಗ, ಧಾರವಾಡ, ವಿಜಾಪುರ, ರಾಯಚೂರು, ಬೀದರ್, ಬಳ್ಳಾರಿ ಜಿಲ್ಲೆ ಅಥವಾ ಅವುಗಳ ಕೆಲವು ಭಾಗಗಳು ಸೇವುಣರ ರಾಜ್ಯದಲ್ಲಿ ಸೇರಿದ್ದವು. ಕಲ್ಯಾಣದ ಚಾಳುಕ್ಯರ ಅಧೀನದಲ್ಲಿ ಕೆಲವು ಮಾಂಡಲಿಕರು ಇವರ ಕಾಲದಲ್ಲೂ ಮುಂದುವರಿದರು. ಅವರಲ್ಲಿ ಪ್ರಮುಖವಾಗಿ ಕರ್ನಾಟಕದ ಸಿಂಧರು, ಸಾಂತಾರರು, ರಟ್ಟರು, ಗುತ್ತರ, ಹೈಹೆಯರು, ಸೇವುಣರು ಅಧೀನಕ್ಕಾಗಿ ಆಳಿದರು.[೯೧] ಬಿಲ್ಲಮ(ಕ್ರಿ.ಶ.೧೧೮೦-೧೧೯೨), ಜೈತುಗಿ(ಕ್ರಿ.ಶ.೧೧೯೨-೧೨೦೦), ಸಿಂಘಣ (ಕ್ರಿ.ಶ.೧೨೦೦-೧೨೪೭), ಕೃಷ್ಣ ಅಥವಾ ಕನ್ನರ(ಕ್ರಿ.ಶ.೧೨೪೭-೧೩೧೨), ಮಹದೇವ (ಕ್ರಿ.ಶ. ೧೨೬೦-೧೨೭೧), ರಾಮಚಂದ್ರ(ಕ್ರಿ.ಶ.೧೨೭೧-೧೩೧೨) ಇವರು ದೇವಗಿರಿ ಸೇವುಣ ಮನೆತನದ ಪ್ರಮುಖ ಅರಸರಾಗಿದ್ದಾರೆ. ಬಾಗಲಕೋಟೆ ಜಿಲ್ಲೆಯ ಜಮಖಂಡಿಯ ಕೆಲವು ಭಾಗಗಳು ಸೇವುಣರು ಆಡಳಿತದ ವ್ಯಾಪ್ತಿಗೆ ಒಳಪಟ್ಟಿದ್ದವು.

**ಸಿಂಧರು(ಬಾಗಡೆಯ ಸಿಂಧರು)**

ಕರ್ನಾಟಕದಲ್ಲಿ ಸಿಂಧರ ಮನೆತನಗಳು ಹತ್ತು ಇವೆ. ಈ ಸಂಖ್ಯೆ ಇನ್ನೂ ಹೆಚ್ಚಾಗಬಹುದು. ರಂಜೋಳ ಸಿಂಧರ ಶಾಸನಗಳಲ್ಲಿ(ಬೀದರ ತಾಲೂಕು) ಬಾಗಡೆಗೆಯ ಸಿಂಧರು, ಬಳ್ಳಾರಿಯ ಸಿಂಧರು(ಕುರುಗೋಡು), ರಂಜೋಳದ ಸಿಂಧರು, ಪಳಿಯಂಡ ಸಿಂಧರು, ಮೂಲತಃ ಒಂದೇ ಶಾಖೆಯವರೆಂದೂ ಬಾಗಡೆಯ ಸಿಂಧ ಶಾಖೆಗೆ ಪ್ರಭುಸೇವ್ಯನು ಕಾರಣನೆಂದೂಟ ಇವನ ತಮ್ಮ ಸತ್ಯಸೇಬ್ಯನು ಪಳಿಯಂಡ ಮಂಡಲಕ್ಯ, ಜಗತ್ಸೇವ್ಯನು ರಂಜೇರದ ಸಿಂದರು ಶಾಖೆಗೂ, ಬುಸೇವ್ಯನು ಬಳ್ಳರೆ ನಾಡಿನ ಸಿಂಧ ಶಾಖೆಗೆ ಕಾರಣರೆಂದು ತಿಳಿಸುತ್ತದೆ. ಬಾಗಲಕೋಟೆ ತಾಲೂಕಿನ ಶಾಸನಗಳು ಪ್ರಭುಸೇವ್ಯನಿಗಿಂತ ಮೊದಲಿದ್ದವನು ಸಿಂಧನೆಂದೂ ಇವನ ಪತ್ನಿ ಕದಂಬ ವಂಶದವಳೆಂಬ ವಿವರವನ್ನು ತಿಳಿಸುತ್ತವೆ.[೯೨] ಸಿಂಧರು ಸ್ವತಂತ್ರವಾಗಿ ರಾಜ್ಯಭಾರ ಮಾಡಲಿಲ್ಲ. ಆದರೆ ಕಲ್ಯಾಣ ಚಾಳುಕ್ಯರ ಮಾಂಡಳೀಕರಾಗಿಯೇ ರಾಜ್ಯ ಭಾರವನ್ನು ಮಾಡಿದ್ದಾರೆ. ಬಾದಾಮಿಯ ಕ್ರಿ.ಶ.೧೧೫೫ರ ಶಾಸನದಲ್ಲಿ ಸಿಂಧ ಚಾಮುಂಡನ ಪತ್ನಿ ಲಕ್ಷ್ಮಿದೇವಿ ವರ್ಣನೆಯಿದ್ದು ಆಕೆ ಸೂಂಡಿ, ಹೊಸೂವೂರ, ಕಡೆಕೆರೆ ಮೊದಲಾದ ಗ್ರಾಮಗಳನ್ನು ಆಳುತ್ತಿದ್ದಂತೆ ಹೇಳಿದೆ.[೯೩]

ಕಟಗೇರಿ ಶಾಸನದಲ್ಲಿ ಇದೇ ಸಿಂಧರು ಕಳಚೂರ್ಯ ಸಂಕಮನನ್ನು ಹೆಸರಿಸಿದ್ದು, ಚಾವುಂಡನ ಮಕ್ಕಳು ಬಿಜ್ಜಲ ಮತ್ತು ವಿಕ್ರಮಾದಿತ್ಯ ದೇವರು ಕಿಸುಕಾಡು ೭೦, ಬಾಡಗೆ

೭೦, ಹಂಗರಗೆ ೧೨, ನರೆಯಂಗಲಿ ೧೨ನ್ನು ರಾಜಧಾನಿ ಯರಂಬರಿಗೆಯಿಂದ ಆಳುತ್ತಿದ್ದಂತೆ ಹೇಳಿದೆ.[೧೪] ಅದೇ ಗ್ರಾಮದ ಕ್ರಿ.ಶ.೧೧೭೮ರ ಶಾಸನದಲ್ಲಿ ಸಂಕಮನ ಕಾಲದಲ್ಲಿ ಮೇಲೆ ಹೇಳಿದ ನಾಡುಗಳ ಜೊತೆಗೆ ಕರಿವಿಡಿ ೩೦ನ್ನು ಆಳುತ್ತಿದ್ದಂತೆ ಹೇಳಿದೆ. ಚಾವುಂಡನ ಪತ್ನಿ ದೇಮಲದೇವಿಯು ಜೈನಧರ್ಮದ ಬಗ್ಗೆ ಒಲವುಳ್ಳವಳಾಗಿದ್ದಳೆಂಬ ಸಂಗತಿ ಕ್ರಿ.ಶ.೧೧೫೧ರ ಶಾಸನದಿಂದ ತಿಳಿಯುತ್ತದೆ.[೧೫] ಜಮಖಂಡಿ ತಾಲೂಕಿನಲ್ಲಿಯೂ ಸಿಂಧ ಬಿಜ್ಜಳ ಮತ್ತು ವಿಕ್ರಮಾದಿತ್ಯರ ಶಾಸನ ದೊರೆತಿದೆ.[೧೬] ಈ ಎಲ್ಲಾ ಶಾಸನ ಆಧಾರಗಳಿಂದ ಸಿಂಧರ ಆಡಳಿತವು ಬಾಗಲಕೋಟೆ ಜಿಲ್ಲೆಯಲ್ಲಿಯ ಪ್ರದೇಶಗಳಲ್ಲಿ ಇದ್ದಿತು ಎಂದು ಹೇಳಬಹುದು.

**ರಟ್ಟರು**

ರಟ್ಟರ ಉಲ್ಲೇಖವು ಬಾಗಲಕೋಟೆ ಜಿಲ್ಲೆಯಲ್ಲಿ ಕ್ರಿ.ಶ.೧೦೪೧ರ ಶಾಸನದಲ್ಲಿ ಬರುತ್ತದೆ. ಮಂಟೂರು ಶಾಸನದಲ್ಲಿ ಸಾಮಂತರ ಎರೆಯಮ್ಮನ ಉಲ್ಲೇಖ ಬಂದಿದ್ದು, ಇವನನ್ನು ಶಾಸನದಲ್ಲಿ ಎತ್ತಲೂರು ಪುರವರೇಶ್ವರ ಸ್ವರ್ಣಗರಡುಧ್ವಜ ತ್ರಿವಳಿಪರೆಘೋಷಣ ಸಿಂಧೂರ ಲಾಂಛನ ರಟ್ಟಿ ವಂಶೋದ್ಭವ, ರಟ್ಟಿಮಾರ್ತಂಡ ಮುಂತಾದ ವಿಶೇಷಣಗಳಿಂದ ಕರೆಯಲಾಗಿದೆ.[೧೭] ಇವನ ಕಾಲದಲ್ಲಿ ಕಟ್ಟಿಸಿರುವ ಕೆರೆಗೆ ರಟ್ಟಸಮುದ್ರವೆಂದೂ ಕರೆಯಲಾಗಿದೆ.[೧೮] ಸುಮಾರು ಕ್ರಿ.ಶ.೧೧೨೦ರ ಶಾಸನದಲ್ಲಿ ಮೇಲೆ ಹೇಳಿರುವ ವಿಶೇಷಣಗಳೊಂದಿಗೆ ಕಾರ್ತವೀರ್ಯನ ಉಲ್ಲೇಖ ಬಂದಿದೆ.[೧೯] ಇದರಲ್ಲಿ ಕಾರ್ತವೀರ್ಯನನ್ನು ರಾಷ್ಟ್ರಕೂಟರನ್ವಯ ಎಂದು ಕರೆಯಲಾಗಿದೆ. ಇವನು ತ್ರಿಭುವನಮಲ್ಲನ ಸಾಮಂತನಾಗಿದ್ದಂತೆ ಹೇಳಿದೆ. ಕ್ರಿ.ಶ.೧೨೩೩ರ ಶಾಸನವೊಂದರಲ್ಲಿ[೨೦] ಎತ್ತಲೂರು ಪುರವರಾಧೀಶ್ವರ ಲಕ್ಷ್ಮೀದೇವರಸನ ಉಲ್ಲೇಖ ಬಂದಿದೆ. ಈ ಉಲ್ಲೇಖಗಳು ಬಿಟ್ಟರೆ ಉಳಿದಂತೆ ಬಾಗಲಕೋಟೆ ಜಿಲ್ಲೆಯಲ್ಲಿ ರಟ್ಟರ ಉಲ್ಲೇಖಗಳಿಲ್ಲ. ಆದರೂ ಸಹ ಕೆಲವು ಆಧಾರಗಳಿಂದ ರಟ್ಟರ ಆಡಳಿತವು ಜಿಲ್ಲೆಗೆ ವಿಸ್ತರಿಸಿತ್ತು ಎಂದು ಊಹಿಸಬಹುದು.

**ಚೋಳರು**

ಬಾಗಲಕೋಟೆ ತಾಲೂಕಿನ ತ್ರುಟಿತ ಶಾಸನವೊಂದರಲ್ಲಿ ಚೋಳ ವಂಶದ ವ್ಯಕ್ತಿಯೊಬ್ಬನ ಉಲ್ಲೇಖ ಬಂದಿದ್ದು, ಅವನ ಹೆಸರು ಹಾಳಾಗಿದೆ(ಒ)ರೆಯೊರುಪುರ ಪರಮೇಶ್ವರ, ಇಮುಟ್ಟ ಪರೆಘೋಷಣ, ವ್ಯಾಘ್ರಕೇತನ ಸಿಂಗಲಾಂಚನ, ಚೋಳಮಾರ್ತಾಂಡ ಮುಂತಾಗಿ ವರ್ಣನೆ ಬಂದಿದೆ.[೨೧] ಈ ಚೋಳರು ಏರಿ ಗಲ್ಡಾತಿಯ ಚೋಳರ ಶಾಖೆಯಾಗಿರಬಹುದು ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.

### ೨.೨.೨. ಮಧ್ಯಕಾಲೀನ ಇತಿಹಾಸ

**ಬಹುಮನಿ ಸಾಮ್ರಾಜ್ಯ(ಕ್ರಿ.ಶ.೧೨೪೭–೧೫೩೮)**

ಆಕ್ರಮಣಕಾರಿ ನೀತಿಯನ್ನು ಅನುಸರಿಸಿ ದಖನ್ ಪ್ರದೇಶಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದ ಮಹಮದ್ ಬಿನ್ ತುಘಲಕನು(೧೩೨೫–೫೦)ದಖನ್ನಿನ ಪೂರ್ಣ ಹಿಡಿತ ಸಾಧಿಸುವ ದೃಷ್ಟಿಯಿಂದ ರಾಜಧಾನಿಯನ್ನು ದೆಹಲಿಯಿಂದ ದೌಲತಬಾದಿಗೆ ಸ್ಥಳಾಂತರಿಸಿದನಾದರೂ ಉದ್ದೇಶ ವಿಫಲಗೊಂಡಾಗ ರಾಜಧಾನಿಯನ್ನು ಮತ್ತೆ ದೆಹಲಿಗೆ ವರ್ಗಾಯಿಸಿದನು. ದಖನ್ನಿನ ಆಡಳಿತವನ್ನು ನಿರ್ವಹಿಸಲು ಅಮೀರರನ್ನು ನೇಮಿಸಿದನು. ಆದರೂ ಅಮೀರರ ನಿಷ್ಠೆಯನ್ನು ಅನುಮಾನಿಸಿದ ಸುಲ್ತಾನನು ೧೩೪೭ರಲ್ಲಿ ದಖನ್ನಿನ ಅಮೀರರನ್ನು ದೌಲತಾಬಾದಿನಲ್ಲಿ ಸಭೆ ಸೇರಲು ಆಹ್ವಾನಿಸಿದರು. ಆದರೆ ಸುಲ್ತಾನನ ನಿರಂಕುಶ ಪ್ರಭುತ್ವದ ವಿರುದ್ಧ ಆಸಮಾಧಾನಗೊಂಡಿದ್ದ ಹಲವಾರು ಅಮೀರರಲ್ಲಿ ಮೀರಜಿನ ಜಾಗೀರುದಾರನಾದ ಆಫ್ಘನ ಮೂಲದ ಹಸನ್‌ಗಂಗು(ಜಾಫರ್ ಖಾನ್) ಒಬ್ಬನಾಗಿದ್ದು, ಇವನು ೧೩೪೭ರಲ್ಲಿ ಬಹುಮನಿ ಸಾಮ್ರಾಜ್ಯವನ್ನು ಸ್ಥಾಪಿಸಿ, ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಾವುದ್ದೀನ್ ಬಹುಮನ್ ಷಾ ಎಂಬ ಹೆಸರೊಂದಿಗೆ ಬಹಮನಿ ಸಿಂಹಾಸನವನ್ನು ಅಲಂಕರಿಸಿದನು.

ಅಧಿಕಾರದ ಗದ್ದುಗೆ ಅಲಂಕರಿಸಿದ ನಂತರ ಹಸನ್‌ಗಂಗು ಬಹಮನ್ ಷಾನು ಮೊದಲು ದೆಹಲಿ ಸುಲ್ತಾನರ ಮತ್ತು ಸ್ಥಳೀಯ ನಾಯಕರ ವಿರುದ್ಧ ದಂಡೆಯಾತ್ರೆಯನ್ನು ಕೈಗೊಂಡು ರಾಜ್ಯವಿಸ್ತರಣೆ ಮಾಡಲು ಮುಂದಾದನು. ಬಹಮನ್ ಷಾಗೆ ಹೊಸರಾಜ್ಯ ವಿಸ್ತರಣೆಗೆ ಹಿಂದೂ ಪ್ರಾಂತ್ಯಗಳಿಗಿಂತಲೂ ತುಘಲಕ್ ಪರವಾಗಿದ್ದ ನಾಯಕರೇ ಹೆಚ್ಚು ಪ್ರತಿರೋಧ ವ್ಯಕ್ತಪಡಿಸುತ್ತಿದ್ದರು. ಹೀಗಾಗಿ ತುಘಲಕ್‌ರ ಅಧೀನದಲ್ಲಿದ್ದ ಪ್ರದೇಶಗಳನ್ನು ವಶಪಡಿಸಿಕೊಳ್ಳುವುದು ಮುಖ್ಯ ಕಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಕೋಟಗಿರ ಮೇಲೆ ಗುರ್ಷಾಸ್ಪನು, ಮಾರಂ, ಮಹೇಂದ್ರಿ ಮತ್ತು ಅಕ್ಕಲಕೋಟೆಗಳ ಮೇಲೆ ರಜಿಯುದ್ದೀನ್‌ನು, ಕಲ್ಯಾಣದ ಮೇಲೆ ರೇರಖಾನ್‌ನು, ಬೀದರ ಮತ್ತು ಮಳಖೇಡ ಮೇಲೆ ಸಿಕಂದರಖಾನನು ದಾಳಿ ಮಾಡಿ ಈ ಸ್ಥಳಗಳನ್ನು ವಶಪಡಿಸಿಕೊಂಡರು. ಮಳಖೇಡದಿಂದ ರಾಜ್ಯವನ್ನು ವಾರಂಗಲ್‌ವರೆಗೆ ವಿಸ್ತರಿಸಲಾಯಿತು. ವಾರಂಗಲ್‌ನ ಕಾಪನಾಯಕನ ಜೊತೆ ರಾಜ ನೈತಿಕ ನೈಪುಣ್ಯದಿಂದ ಅವನನ್ನು ಬಹಮನಿ ಪ್ರಭಾವಲಯಕ್ಕೆ ಸೇರಿಸಲಾಯಿತು. ಪೋಚರೆಟ್ಟಿ ಎಂಬುವವನ ಅಧೀನದಲ್ಲಿದ್ದ ಗುಲಬರ್ಗಾವನ್ನು ವಶಪಡಿಸಿಕೊಂಡು ಅದಕ್ಕೆ ಅಹಸನಾಬಾದ್ ಎಂದು ನಾಮಕರಣ ಮಾಡಿದನು. ಅಲ್ಲದೇ ದೌಲತಾಬಾದ್‌ನಿಂದ ರಾಜಧಾನಿಯನ್ನು

ಗುಲಬರ್ಗಾಕ್ಕೆ ವರ್ಗಾಯಿಸಿದನು. ಕ್ರಿ.ಶ.೧೩೫೨ರ ಸುಮಾರಿಗೆ ಕೆಂಭಾವಿಯನ್ನು ವಶಪಡಿಸಿಕೊಂಡು ಮೇಲೆ ಮುಂದೆ ಸಾಗಿ ಮುಧೋಳವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ನಾರಾಯಣ ಎಂಬ ಹಿಂದೂ ಆಳುತ್ತಿದ್ದನು. ಇವನನ್ನು ಸೋಲಿಸಿ ಮುಧೋಳ, ಜಮಖಂಡಿಗಳ ಜೊತೆಗೆ ನಾರಾಯಣನ ದಂಡನಾಯಕ ಗೋಪಾಲ ಮತ್ತು ಇತರರ ರಕ್ಷಣೆಯಲ್ಲಿದ್ದ ತೇರದಾಳ ಮತ್ತು ಬಾಗಲಕೋಟೆ ಪ್ರದೇಶಗಳನ್ನು ವಶಪಡಿಸಿಕೊಂಡನು.[೭೩] ಹೀಗೆ ಬಹಮನಿ ಆಧಿಪತ್ಯಕ್ಕೆ ಅಂದು ಬಾಗಲಕೋಟೆ ಜಿಲ್ಲೆಯು ಒಳಪಟ್ಟಿತ್ತೆಂದು ಹೇಳಬಹುದು. ಒಂದನೆಯ ಮಹಮ್ಮದ (ಕ್ರಿ.ಶ.೧೩೫೮ರಿಂದ ೧೩೭೫), ಮೊದಲನೆಯ ಇಹಾಬುದ್ದೀನ್ ಅಹಮ್ಮದ್ ಷಾ (ಕ್ರಿ.ಶ.೧೪೨೨ರಿಂದ ೧೪೩೫), ಎರಡನೆಯ ಅಲ್ಲಾವುದ್ದೀನ್ ಅಹಮದ್(ಕ್ರಿ.ಶ.೧೪೩೫ರಿಂದ ೧೪೬೧), ಮೊದಲನೆಯ ನಿಜಾಮುದ್ದೀನ್ ಅಹ್ಮದ್ ಷಾ(ಕ್ರಿ.ಶ.೧೪೬೧ರಿಂದ ೧೪೬೩) ಶಂಸುದ್ದೀನ್ ಮಹಮದ್ ಷಾ(ಕ್ರಿ.ಶ.೧೪೬೩ರಿಂದ ೧೪೮೨) ಇವರೆಲ್ಲರು ಬಹಮನಿ ಸಾಮ್ರಾಜ್ಯದ ಪ್ರಮುಖ ಅರಸರಾಗಿದ್ದಾರೆ.

**ವಿಜಾಪುರ ಆದಿಲ್‌ಶಾಹಿಗಳು(ಕ್ರಿ.ಶ.೧೪೮೯ರಿಂದ ೧೬೮೬)**

ಟರ್ಕ್ ಮೂಲದ ಯೂಸೂಫ್ ಆದಿಲ್‌ಖಾನನು ೧೪೬೦ರಲ್ಲಿ ದಾಬೋಲಿಗೆ ಬಂದು ಬಹಮನಿ ಪ್ರಧಾನಿ ಮಹಮದ್ ಗವಾನನ ವಿಶ್ವಾಸಕ್ಕೆ ಪಾತ್ರನಾಗಿ, ಬಹಮನಿ ಸೈನ್ಯಕ್ಕೆ ಯೋಧನಾಗಿ ಸೇರಿ ಹಂತ ಹಂತವಾಗಿ ಮೇಲೆರುತ್ತಾ ಕಡೆಗೆ ದೌಲತ್‌ಬಾದ್ ಹಾಗೂ ಜುನ್ನಾರ್‌ಗಳ ತರಫದಾರನಾಗಿ ನೇಮಕಗೊಂಡನು ಮುಂದೆ ಗವಾನನ ಮರಣ ನಂತರ ಆವರೆಗೆ ಪ್ರಧಾನಿ ಗವಾನನ ಉಸ್ತುವಾರಿಯಲ್ಲಿದ್ದ 'ವಿಜಾಪುರ' ಪ್ರಾಂತ್ಯಕ್ಕೆ ತರಫದಾರನಾಗಿ ಸುಲ್ತಾನನಿಂದ ನೇಮಿಸಲ್ಪಟ್ಟನು. ಡೋಲಾಯಮಾನ ಸ್ಥಿತಿಯಲ್ಲಿದ್ದ ಬಹಮನಿ ಸಾಮ್ರಾಜ್ಯದ ಆಗುಹೋಗುಗಳಲ್ಲಿ ಭಾಗವಹಿಸುತ್ತಾ ಪ್ರಾದೇಶಿಕವಾಗಿ ಬಲಿಷ್ಠಗೊಳ್ಳುತ್ತಾ ಸ್ವತಂತ್ರಗೊಳ್ಳಬೇಕೆಂಬ ಹೆಬ್ಬಕೆಯನ್ನು ವ್ಯಕ್ತಪಡಿಸುವ ಎದೆಗಾರಿಕೆ ತೋರದೆ, ಸುಲ್ತಾನನಿಗೆ ತೋರಿಕೆಗೆ ವಿಧೇಯತೆ ವ್ಯಕ್ತಪಡಿಸುತ್ತಾ ಬಂದನು. ಮುಂದೆ ಆಫರೆ ಮೂಲದ ೫೦೦ ರಾಜ ಪ್ರತಿನಿಧಿಗಳ ಬೆಂಬಲದೊಂದಿಗೆ ಆದಿಲ್‌ಷಾಹಿ ಮನೆತನ ಸ್ಥಾಪನೆ ಕ್ರಿ.ಶ.೧೪೮೯ರಲ್ಲಿ ಅಡಿಪಾಯ ಹಾಕಿದನು.[೭೪] ಇದರಿಂದ ವಿಜಯಪುರದಲ್ಲಿ ಆದಿಲ್‌ಷಾಹಿಯ ಆಡಳಿತ ಪ್ರಾರಂಭಗೊಂಡಿತು.

ಟರ್ಕ್ ಮೂಲದ ಖಾಸೀಂ ಬರೀದನು ಹಾಗೂ ಗೋವೆಯ ಗೌರ್ನರ್ ಬಹದ್ದೂರ ಗಿಲಾನಿಯನ್ನು ಏಕಕಾಲದಲ್ಲಿ ಯುಸೂಫ್ ಎದುರಿಸಲು ರಾಜ ಸೂತ್ರವನ್ನು ಬಳಸಿ ರಾಯಚೂರ್ ದೋ–ಆಬ್ ಪ್ರದೇಶ ವಿಜಯನಗರ ಅರಸರೇ ಉಳಿಸಿಕೊಳ್ಳಲು ಒಪ್ಪಿಗೆ ನೀಡಿ, ಜಮಖಂಡಿ ಕೋಟೆಯನ್ನು ಗೋವೆಯ ಬಹದ್ದೂರ್ ಗಿಲಾನಿಗೆ ವಹಿಸಿಕೊಟ್ಟನು. ಮುಂದೆ ೧೪೯೪ರಲ್ಲಿ

ಗಿಲಾನಿ ಬಹದ್ದೂರನನ್ನು ಸೋಲಿಸಲು ಯುಸೂಫ್ ೫೦೦೦ ಸೈನಿಕರನ್ನು ಕಳುಹಿಸಿ ಗೆಲುವು ಸಾಧಿಸಿದನು. ಆಗ ಗಿಲಾನಿಯ ಜಹಗೀರನು ಯುಸೂಫ್‌ನ ಸಲಹೆಯಂತೆ ಐನ್-ಉಲ್-ಮುಲ್ಕ್‌ನಿಗೆ ನೀಡಲಾಗಿ, ಜಮಖಂಡಿ ಕೋಟೆ ಮತ್ತೆ ಯುಸೂಫ್‌ನಿಗೆ ಒಲಿಯಿತು.[೭೫]

ಇಮ್ಮಡಿ ಇಬ್ರಾಹಿಮ್ ಆದಿಲ್‌ಷಾನ ಆಳ್ವಿಕೆಗೆ ಸಂಬಂಧಿಸಿದಂತೆ ಈವರೆಗೆ ಸುಮಾರು ೧೯ ಶಾಸನಗಳು ವಿಜಾಪುರದಿಂದಲೇ ವರದಿಯಾಗಿದ್ದು, ಉಳಿದೆರಡು ಬೀಳಗಿಯಿಂದ ವರದಿಯಾಗಿವೆ. ಬೀಳಗಿಯ ಸಿದ್ಧೇಶ್ವರ ಗುಡಿಯ ದೀಪಮಾಲೆ ಕಂಬದ ಮೇಲಿರುವ ೧೫೪೯ರ ಮರಾಠಿ ಶಾಸನವು ವಜೀರ್ ಹೈದರ್‌ಖಾನ್‌ನ ಸಾಮಂತನಾದ ಖಂಡೆರಾಯ ತಿಮ್ಮಾಜಿಯು ಎರಡು ಸ್ತಂಭಗಳನ್ನು ನಿರ್ಮಿಸಿದ ವಿಷಯವನ್ನು ತಿಳಿಸುತ್ತದೆ. ಬೀಳಗಿಯ ರಾಯರ ಬಾವಿಯ ಬಳಿ ಇರುವ ೧೬೦೫ರ ಶಾಸನ ಕನ್ನಡ ಹಾಗೂ ಮರಾಠಿ ಭಾಷೆಗಳಲ್ಲಿದ್ದು, ಇಬ್ರಾಹಿಮನ ವಜೀರನಾದ ಖಾನ್ ಅಜಿಂ ಯಾಕೂಬಖಾನನು ಬೀಳಗಿಯಲ್ಲಿದ್ದಾಗ ತಿಮ್ಮಾಜಿ ಪಂಡಿತನ ಮಗ ಖಂಡೇರಾಯ ಪಂಡಿತನು ಬೀಳಗಿಯ ಪಶ್ಚಿಮದಲ್ಲಿ ಬಾವಿಯನ್ನು ಕಟ್ಟಿಸಲು ಮುಂದಾಗಿದ್ದು, ಬಾವಿಯ ನಿರ್ಮಾಣ ಕಾರ್ಯ ಒಂದು ವರ್ಷ, ಏಳು ತಿಂಗಳು ಹಾಗೂ ೧೯ ದಿನಗಳ ಕಾಲ ನಡೆಯಿತೆಂದು ತಿಳಿಸುತ್ತಾ ಇದರ ನಿರ್ವಹಣೆಗಾಗಿ ಅರ್ಧ ಚಾವರ ಭೂಮಿ ಹಾಗೂ ಒಂದು ತೋಟವನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೭೬] ಅದೇ ರೀತಿ ಬಾದಾಮಿಯ ಮೇನ ಬಸದಿ ಗುಹಾಲಯಗಳ ಹತ್ತಿರ ಒಂದು ಗುಮ್ಮಟ ಮಸೀದಿಯನ್ನು ಸಹ ಆದಿಲ್‌ಶಾಹಿಗಳು ಕಟ್ಟಿಸಿದ್ದಾರೆ.



ವಿಜಾಪುರ ಆದಿಲ್‌ಶಾಹಿ ಮನೆತನವನ್ನು ಯುಸೂಪ್ ಆದಿಲ್‌ಶಾಹಿ(ಕ್ರಿ.ಶ.೧೪೮೯-೧೫೧೦), ಇಸ್ಮಾಯಿಲ್ ಆದಿಲ್‌ಶಾಹಿ(ಕ್ರಿ.ಶ.೧೫೧೦-೧೫೩೪), ಒಂದನೆಯ ಇಬ್ರಾಹಿಮ್ ಆದಿಲ್‌ಶಾಹಿ(ಕ್ರಿ.ಶ.೧೫೩೫-೧೫೫೮) ಒಂದನೆ ಅಲಿ ಆದಿಲ್‌ಶಾಹಿ(ಕ್ರಿ.ಶ.೧೫೫೮-೧೫೮೦), ಮಹಮದ್ ಆದಿಲಶಾಹ(ಕ್ರಿ.ಶ.೧೬೨೭-೧೬೫೬), ಎರಡನೆಯ ಅಲಿ ಆದಿಲ್‌ಶಾಹ(ಕ್ರಿ.ಶ. ೧೬೫೬-೧೬೭೨), ಸಿಕಂದರ ಆದಿಲ್‌ಶಾಹ(ಕ್ರಿ.ಶ.೧೬೭೨-೧೬೮೬) ಇವರೆಲ್ಲ ಸುಲ್ತಾನರು ವಿಜಯಪುರದಲ್ಲಿ ಆಳ್ವಿಕೆ ಮಾಡಿದ ಪ್ರಮುಖರಾಗಿದ್ದಾರೆ.

## ಮೊಗಲರು

ವಿಜಾಪುರವನ್ನು ಮೊಗಲರು ವ್ಯವಸ್ಥಿತವಾಗಿ ಆಡಳಿತ ನಡೆಸಲು ವಿಫಲರಾದರು ಸಹ ವಿಜಾಪುರ ಮೊಗಲರ ಆಡಳಿತಕ್ಕೆ ಒಳಪಟ್ಟಿತು. ಔರಂಗಜೇಬನು ವಿಜಾಪುರವನ್ನು ವಶಪಡಿಸಿಕೊಂಡ ಮೇಲೆ ಅದನ್ನು ಮೊಗಲ್ ಸಾಮ್ರಾಜ್ಯದ ಪ್ರಾಂತವನ್ನಾಗಿ ಸೇರಿಸಿಕೊಂಡನು. ಆದಿಲ್‌ಶಾಹಿ ಆಡಳಿತದಲ್ಲಿದ್ದ ಅಧಿಕಾರಿಗಳನ್ನು ಕೆಲಸದಿಂದ ತೆಗೆದು ಹಾಕದೆ ತನ್ನ ಆಡಳಿತದಲ್ಲಿದ್ದ

ಅಧಿಕಾರಿ ಗಳನ್ನು ಕೆಲಸದಿಂದ ತೆಗೆದು ಹಾಕದೆ ತನ್ನ ಆಡಳಿತದಲ್ಲಿಯೂ ಮುಂದುವರೆಸಿದನು. ಅಲ್ಲದೆ ಅವರವರ ಯೋಗ್ಯತೆಯನ್ನು ಗುರುತಿಸಿ ಪದೋನ್ನತಿ ಕೊಟ್ಟು ಸಂತೋಷಪಡಿಸಿದನು.[೭೭] ಔರಂಗಜೇಬನು ಕ್ರಿ.ಶ.೧೬೮೯ರವರೆಗೆ ವಿಜಾಪುರದಲ್ಲೇ ಉಳಿದು ದೂರದ ದಕ್ಷಿಣ ಪ್ರಾಂತ್ಯಗಳನ್ನು ಸ್ವಾಧೀನಪಡಿಸಿಕೊಳ್ಳುವತ್ತ ಗಮನಹರಿಸಿದನು. ಈ ಅವಧಿಯಲ್ಲಿ ವಿಜಾಪುರ ಪ್ರಾಂತ್ಯದ ಆಡಳಿತ ನಿರ್ವಹಣೆಗೆಂದು ಫೌಜುದಾರ ಹಾಗೂ ಖಾಲ್ಸ್ ದಿವಾನರೆಂಬ ಇಬ್ಬರು ಅಧಿಕಾರಿಗಳನ್ನು ನೇಮಿಸಿದನು. ರೋಹಲ್ಲಾಖಾನ್‌ನಿಗೆ ಪಂಜ ಹಜಾರೀ ಬಿರುದನ್ನು ನೀಡಿದನಲ್ಲದೆ, ನಾಲ್ಕು ಸಾವಿರ ಕುದುರೆ ಸವಾರರನ್ನು ಅವನ ಸ್ವಂತಕ್ಕೆ ಕೊಟ್ಟು ವಿಜಾಪುರ ಸುಬೇದಾರಿಯ ಹುದ್ದೆಯನ್ನು ನೀಡಿ ಗೌರವಿಸಿದನು.[೭೮] ಇದರಿಂದ ಆಡಳಿತ ವ್ಯವಸ್ಥಿತವಾಗಿ ನಡೆಯಲು ಪ್ರೋತ್ಸಾಹಿಸಿ ದಂತಾಯಿತು.

ಈ ಅವಧಿಯಲ್ಲಿ ಔರಂಗಜೇಬನು ವಿಜಾಪುರವನ್ನು ವಶಪಡಿಸಿಕೊಳ್ಳುವಲ್ಲಿ ತನ್ನೊಂದಿಗೆ ಶಾಮೀಲಾಗಿದ್ದ ಸರದಾರರನ್ನು, ಗಣ್ಯರನ್ನು ಸನ್ಮಾನಿಸಿದನು. ತನಗಾಗಿ ಸತ್ತ ವಿಜಾಪುರದ ಸರದಾರರಾದ ಖಾನ ಮಹಮದ್ ಹಾಗೂ ಖಾವಸ ಖಾನರಿಗಾಗು ಗುಮ್ಮಟಗಳನ್ನು ಸಹ ನಿರ್ಮಿಸಿದ್ದು, ಅವು ಇಂದು ಜೋಡಿಗುಮ್ಮಟ ಆವರಣದಲ್ಲಿವೆ.[೭೯] ವಿಜಾಪುರ ಹಾಗೂ ಬಾಗಲಕೋಟೆಯ ಪ್ರದೇಶಗಳು ಸಹ ಮೊಘಲರ ಆಡಳಿತದ ವ್ಯಾಪ್ತಿಗೊಳಪಟ್ಟಿದ್ದವು ಎಂಬುದನ್ನು ಇಲ್ಲಿಯ ಗುಮ್ಮಟ ಸ್ಮಾರಕಗಳನ್ನು ನೋಡುವುದರಿಂದ ಗುರುತಿಸಬಹುದು.

**ಹೈದರಾಬಾದ್ ನಿಜಾಮ**

ಹೈದರಾಬಾದ್‌ನಲ್ಲಿ ಅಸಪ್ ಜಾ ಮನೆತನ ಸ್ವತಂತ್ರವಾಗಿ ಆಳಲು ಆರಂಭಿಸುವುದರೊಂದಿಗೆ ವಿಜಾಪುರ ಪ್ರಾಂತವು ೧೭೨೪ರ ನಂತರ ನಿಜಾಮರ ಅಧೀನಕ್ಕೊಳಪಟ್ಟಿತು. ೧೭೪೪ರ ವರೆಗೆ ಕೃಷ್ಣೆಯ ಉತ್ತರ ಭಾಗದ ಆಡಳಿತದ ಹೊಣೆಯನ್ನು ನಾಸಿರ್‌ಜಂಗನಿಗೂ, ದಕ್ಷಿಣ ಭಾಗದ ಆಡಳಿತವನ್ನು ಸವಣೂರ ನವಾಬನಿಗೂ ಹೈದರಾಬಾದಿನ ನಿಜಾಮನು ವಹಿಸಿದ್ದನು. ಸುಮಾರು ೧೭೪೬ರಲ್ಲಿ ಬಾಗಲಕೋಟೆ ಹಾಗೂ ಬಾದಾಮಿ ಪ್ರದೇಶಗಳನ್ನು ಸವಣೂರಿನ ನವಾಬನು ಒಪ್ಪಂದಂತೆ ಮರಾಠ ಪೇಶ್ವೆಗಳಿಗೆ ಒಪ್ಪಿಸಬೇಕಾಯಿತು. ಈ ಎರಡು ಪ್ರದೇಶಗಳ ಜವಾಬ್ದಾರಿಯನ್ನು ಪೇಶ್ವೆಗಳು ಮಲಾಹರಿರಾವ್ ರಾಸ್ತಿಯಾನಿಗೆ ವಹಿಸಿದ್ದು, ಅವನು ಕೃಷ್ಣಾಜಿ ವಿಶ್ವನಾಥನನ್ನು ತನ್ನ ಪ್ರತಿನಿಧಿಯನ್ನಾಗಿ ಅಲ್ಲಿಗೆ ಕಳುಹಿಸಿದನು.[೮೦] ಒಪ್ಪಂದದ ಪ್ರಕಾರ ನಿಜಾಮರ ಅಧೀನದಲ್ಲಿದ್ದ ವಿಜಾಪುರ ಪ್ರಾಂತ್ಯದ ಹೆಚ್ಚಿನ ಪ್ರದೇಶಗಳು ಮರಾಠರಿಗೆ ವರ್ಗಾಯಿಸಲ್ಪಟ್ಟವು. ಹುನಗುಂದ ಪ್ರದೇಶವು ನಿಜಾಮನ ವಶದಲ್ಲಿ ಇದ್ದರೂ, ಅಲ್ಲಿಂದ ಕಾಲಭಾಗ ಕಂದಾಯವನ್ನು ಸಂಗ್ರಹಿಸುವ ಹಕ್ಕು ಮರಾಠರದಾಗಿತ್ತು.[೮೧] ನಿಜಾಮ ಉಲ್–

ಮುಲ್ಕ್‌ನು ಕ್ರಿ.ಶ.೧೭೪೮ರಲ್ಲಿ ನಿಧನ ಹೊಂದಿದ್ದರಿಂದ ಹೈದರಾಬಾದಿನ ಗಾದಿಗಾಗಿ ಅಂತಃಕಲಹ ಉದ್ಭವಿಸಿತು. ನಿಜಾಮ್ ಸಲಬತ್ ಜಂಗನು ಕ್ರಿ.ಶ.೧೭೫೯ರಲ್ಲಿ ವಿಜಾಪುರದ ಜಮೀನ್ದಾರರನ್ನು ಅಧಿಕ ಹಣಕ್ಕಾಗಿ ಒತ್ತಾಯಿಸಿದಾಗ ಬಾಲಾಜಿ ಪೇಶ್ವೆ ಹಾಗೂ ಸದಾಶಿವ ಬಾವುಗಳ ಮುಂದಾಳತ್ವದಲ್ಲಿ ಮುನ್ನುಗ್ಗಿದ್ದ ಮರಾಠ ಸೈನ್ಯ, ನಿಜಾಮ್ ಸಲಾಬತ್‌ಜಂಗ್ ಹಾಗೂ ಅವನ ಸಹೋದರ ಅಲಿಯನ್ನು ಉದಯಗಿರಿ ಬಳಿಯಲ್ಲಿ ಸೋಲಿಸಿತು. ಇದರ ಪರಿಣಾಮವಾಗಿ ಏರ್ಪಟ್ಟ ಒಪ್ಪಂದದಂತೆ ನಿಜಾಮರ ಅಧೀನದಲ್ಲಿದ್ದ ವಿಜಾಪುರ ಪ್ರಾಂತ್ಯದ ಹೆಚ್ಚಿನ ಪ್ರದೇಶಗಳು ಮರಾಠರಿಗೆ ವರ್ಗಾಯಿಸಲ್ಪಟ್ಟಿತು.[೮೨] ಪೇಶ್ವೆ, ಮರಾಠ, ನಿಜಾಮರಿಗೆ ಇಲ್ಲಿ ಅಧಿಕಾರಕ್ಕಾಗಿ ನಿರಂತರ ಹೋರಾಟ ನಡೆಯುತ್ತಲೇ ಇದ್ದಿತ್ತು.

**ಮರಾಠರು**

ಕ್ರಿ.ಶ.೧೭೯೦ರ ವರೆಗೆ ರಾಸ್ತಿಯನ ಪ್ರತಿನಿಧಿಗಳಾದ ಯಶವಂತರಾಯ ಹಾಗೂ ಕೃಷ್ಣರಾಯ ಉಸ್ತುವಾರಿಯಲ್ಲಿದ್ದ ವಿಜಾಪುರ ಪ್ರದೇಶವು ಸಮೃದ್ಧವಾಗಿದ್ದು, ಕೃಷಿಗೆ ಹೆಚ್ಚಿನ ಆದ್ಯತೆಯನ್ನು ನೀಡಿ ಆಡಳಿತ ಮುಂದುವರೆಯಿತು. ಮತ್ತೆ ೧೭೯೦-೯೧ರಲ್ಲಿ ಮತ್ತೊಮ್ಮೆ ಬರಗಾಲಕ್ಕೆ ತುತ್ತಾದ ಈ ಪ್ರದೇಶವು ಅಶಾಂತಿಯ ಆಗರವಾಯಿತು. ಮರಾಠರು ೧೭೯೫ರಲ್ಲಿ ಹೈದರಾಬಾದ್ ನಿಜಾಮನನ್ನು ಸೋಲಿಸಿ ಹುನಗುಂದ ಪ್ರದೇಶವನ್ನು ವಶಪಡಿಸಿಕೊಂಡರು.[೮೩] ಮರಾಠರ ಕೊನೆಯ ಪೇಶ್ವೆ ಬಾಜಿರಾಯನ(೧೭೯೬-೧೮೧೮) ಅಧಿಕಾರಾವಧಿಯಲ್ಲಿ ರಾಸ್ತಿಯ ಕುಟುಂಬದ ಮೇಲಿನ ದ್ವೇಷದಿಂದಾಗಿ ಮರಾಠರು ನಿರಂತರವಾಗಿ ಬಾಗಲಕೋಟೆ ಮೇಲೆ ದಾಳಿ ಮಾಡಿದರು. ೧೮೧೦ರಲ್ಲಿ ಪೇಶ್ವೆಗಳು ರಾಸ್ತಿಯ ಮನೆತನದವರನ್ನು ಸೋಲಿಸಿ ಬಾಗಲಕೋಟೆಯನ್ನು ವಶಪಡಿಸಿಕೊಂಡರು.[೮೪] ಆಗ ಮರಾಠರ ಪ್ರಭುತ್ವ ಜಿಲ್ಲೆಗೆ ವಿಸ್ತರಿಸಿತು.

ಪೇಶ್ವೆ ಬಾಜಿರಾಯನು ೧೮೦೪ರಲ್ಲಿ ಕರ್ನಾಟಕ ಪ್ರಾಂತ್ಯದ ರಾಜ್ಯಪಾಲನಿಗೆ ಬಾದಾಮಿ, ಬಾಗಲಕೋಟೆ ಹಾಗೂ ಜಾಲಿಹಾಳ ಪ್ರದೇಶಗಳನ್ನು ಅದರ ಅಧಿಕಾರಿಯಾದ ಮಾಧವರಾಯ ರಾಸ್ತಿಯನು ಪೂನಾ ಸರ್ಕಾರಕ್ಕೆ ೪೦ ಲಕ್ಷ ರೂಪಾಯಿಗಳನ್ನು ಸಲ್ಲಿಸಿ ಬಾಗಲಕೋಟೆ, ಬಾದಾಮಿ ಹಾಗೂ ಜಾಲಿಹಾಳ ಪ್ರದೇಶಗಳ ವ್ಯವಸ್ಥಾಪಕ(ಕಮವಿಸ್‌ದಾರ್)ನಾಗಲು ಯತ್ನಿಸಿದ್ದು, ಲಾಡ್ ವೆಲೆಸ್ಲಿಯ ಪ್ರಭಾವದಿಂದಾಗಿ ಆರು ವರ್ಷಗಳ ಕಾಲ ಈ ಭಾಗದ ಒಡೆತನವನ್ನು ಹೊಂದಿದ್ದನು.[೮೫] ಸುಮಾರು ೧೮೦೮ರಲ್ಲಿ ವಿಜಾಪುರಕ್ಕೆ ಭೇಟಿ ನೀಡಿದ್ದ ಬ್ರಿಟಿಷ್ ಅಧಿಕಾರಿ ಸರ್ ಜೇಮ್ಸ್ ಮ್ಯಾಕಿನ್ ತೋಷನು ಉತ್ತರ ವಿಜಾಪುರ ಪ್ರದೇಶವು ಬರಡು ಬಿದ್ದಿದ್ದ ಅಂಶವನ್ನು ದಾಖಲಿಸಿದ್ದಾನೆ. ರಾಸ್ತಿಯ ಮನೆತನಕ್ಕೆ ಸೇರಿದ ಆನಂದರಾವ್ ಬಿಕ್ಕಾಜಿಯು ಬಾಗಲಕೋಟೆಯಲ್ಲಿ ನೆಲೆಸಿದ್ದು, ಅವನು ಸುಮಾರು ೧೮೦೦ರಲ್ಲಿ ಅರಮನೆಯೊಂದನ್ನು

ನಿರ್ಮಿಸಿದ್ದು, ಅದರ ಅವಶೇಷಗಳನ್ನು ಬಾಗಲಕೋಟೆಯಲ್ಲಿ ಇಂದಿಗೂ ಕಾಣಬಹುದು.[೮೬] ಬಾಜಿರಾಯನು ೧೮೧೦ರಲ್ಲಿ ರಾಸ್ತಿಯನಿಂದ ಬಾಗಲಕೋಟೆ ಹಾಗೂ ಬಾದಾಮಿ ಪ್ರದೇಶಗಳನ್ನು ಕಸಿದುಕೊಂಡು ಪೇಶ್ವೆಯು ಬಾಗಲಕೋಟೆಯ ಹೊಣೆಯನ್ನು ನೀಲಕಂಠರಾವ್ ಸುಬೇದಾರನಿಗೆ ೧೮೧೦ರಲ್ಲಿ ವಹಿಸಿಕೊಟ್ಟಿದ್ದು, ಥಾಮಸ್ ಮನ್ರೊ ಬಾಗಲಕೋಟೆಯನ್ನು ೧೮೧೮ರಲ್ಲಿ ವಶಪಡಿಸಿಕೊಳ್ಳುವವರೆಗೆ ಅವನು ಅಧಿಕಾರದಲ್ಲಿದ್ದನು. ಬಾಗಲಕೋಟೆಯಲ್ಲಿ ೧೮೩೫ರ ವರೆಗೆ ಟಂಕಸಾಲೆ ಇದ್ದಿತು. ಹಾಗಾಗಿ ಈ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಬ್ರಿಟಿಷರ ಆಡಳಿತಾವಧಿಯಲ್ಲಿ ಟಂಕಿಸಿದಂತಹ ಸುಮಾರು ಹದಿನಾರು(೧೬) ನಾಣ್ಯಗಳನ್ನು ಸಂಗ್ರಹಿಸಲಾಗಿದೆ. ವಿಶೇಷವಾಗಿ ಕೃಷ್ಣಾ-ಮಲಪ್ರಭಾ ಹಾಗೂ ಘಟಪ್ರಭಾ ನದಿ ದಂಡೆಗಳ ಮೇಲಿದ್ದ ಸುಮಾರು ೪೫ ಗ್ರಾಮಗಳು ಸತತವಾಗಿ ಮರಾಠರ ದಾಳಿಗೆ ಸಿಲುಕಿ ಬಡವಾಗಿದ್ದವು. ಈ ಅವಧಿಯಲ್ಲಿ ಪೇಶ್ವೆ ರಾಜ್ಯಪಾಲರುಗಳ ಕೈಯಲ್ಲಿ ವಿಜಾಪುರದ ಸುಲ್ತಾನರ ಕಾಲದ ಕಟ್ಟಡಗಳನ್ನು ಸಾಕಷ್ಟು ಹಾನಿಗೊಳಗಾದವು. ಕಟ್ಟಡಗಳಲ್ಲಿ ತೇಗದ ಮರದ ತೊಲೆ, ಕಿಟಕಿ, ಬಾಗಿಲುಗಳೇ ಮುಂತಾದ ವಸ್ತುಗಳು ಕಣ್ಮರೆಯಾಗಿ ಕಟ್ಟಡಗಳು ಪಾಳುಬಿದ್ದವು.

ಬಾಗಲಕೋಟೆ ಪ್ರದೇಶದ ಮೇಲೆ ಒಂದು ಕಡೆ ಪ್ರಕೃತಿವಿಕೋಪ, ಬರಗಾಲ ಮತ್ತೊಂದೆಡೆ ಮರಾಠರ ನಿರಂತರ ಲೂಟಿಯ ದಬ್ಬಾಳಿಕೆಯ ಆಡಳಿತದ ದಾಳಿ ನಿರಂತರವಾಗಿರುವುದರಿಂದಲೇ ಈ ಭಾಗದ ಕೆಲವು ಪ್ರದೇಶಗಳು ಇಂದಿಗೂ ಅಭಿವೃದ್ಧಿಯನ್ನು ಹೊಂದದೇ ಬರಡು ನೆಲಗಳಾಗಿವೆ ಎಂದು ಹೇಳಬಹುದು. ಕಲಾದಗಿಯಿಂದ ವಿಜಯಪುರಕ್ಕೆ ಜಿಲ್ಲಾ ಕೇಂದ್ರವನ್ನು ಬ್ರಿಟಿಷರು ವರ್ಗಾಯಿಸುವಾಗ ವಿಜಯಪುರದ ಆದಿಲ್‌ಶಾಹಿ ಕಟ್ಟಡಗಳ ಜೀರ್ಣೋದ್ಧಾರ ಕೆಲಸ ಅತ್ಯಂತ ಗಮನಾರ್ಹವಾದುದ್ದಾಗಿದೆ.

## ಪ್ರಾದೇಶಿಕ ಸಂಸ್ಥಾನಗಳು

ಭಾರತವು ಸ್ವಾತಂತ್ರ್ಯಪೂರ್ವದಲ್ಲಿ ಕರ್ನಾಟಕದಲ್ಲಿ ವಿವಿಧ ಭಾಗಗಳಲ್ಲಿ ಪ್ರಾದೇಶಿಕ ಸಂಸ್ಥಾನಗಳು ರಾಜಕೀಯ ಪ್ರಾಬಲ್ಯತೆಯನ್ನು ಹೊಂದಿದ್ದವು. ಅವುಗಳಲ್ಲಿ ಜಮಖಂಡಿ, ಮುಧೋಳ ಮತ್ತು ಸವಣೂರು ಸಂಸ್ಥಾನಗಳು ಮುಖ್ಯವಾಗಿದ್ದವು. ಇವುಗಳಲ್ಲದೆ ಅವಿಭಜಿತ ಜಿಲ್ಲೆಯಾದ ತೇರದಾಳ, ರಬಕವಿ ಸೇರಿದಂತೆ ೧೩ ಗ್ರಾಮಗಳು ಸಾಂಗಲಿ ಸಂಸ್ಥಾನಕ್ಕೆ ೧೭ ಹಳ್ಳಿಗಳು ಜಾಂದ್ ಸಂಸ್ಥಾನಕ್ಕೆ ೯ ಗ್ರಾಮಗಳು ಹಿರಿಯ ಕುರಂದವಾಡ ಸಂಸ್ಥಾನಕ್ಕೆ ಮತ್ತು ಕೆಲವು ಭಾಗ ರಾಮದುರ್ಗ ಸಂಸ್ಥಾನಕ್ಕೂ ಸೇರಿದ್ದವು. ಇವೆಲ್ಲವೂ ಮರಾಠ ಮೂಲದ ಸಂಸ್ಥಾನಗಳಾಗಿದ್ದವು. ಸಹಜವಾಗಿ ಅಲ್ಲಿ ಮರಾಠಿ ಭಾಷೆಯು ಆಳುವ ವರ್ಗದ ಭಾಷೆಯಾಗಿತ್ತು. ರಾಜಕೀಯ ಅಸ್ಥಿರತೆ, ಆರ್ಥಿಕ ಅಭದ್ರತೆಗಳ ಜೊತೆ ವಿಜಾಪುರ ಪ್ರದೇಶವು ಭಾಷಾ ದಬ್ಬಾಳಿಕೆಗೂ

ಒಳಗಾಯಿತು.[೮೭] ಅದರಂತೆ ಬಾಗಲಕೋಟೆಯ ಇಂದಿನ ಜಿಲ್ಲೆಯ ಹಲವಾರು ಪ್ರದೇಶಗಳು ಕೂಡಾ ಮರಾಠಿ ಭಾಷಿಕ ಸ್ಥಳಗಳಾಗಿದ್ದವು. ಸಂಸ್ಥಾನಗಳು ಸಾರ್ವಜನಿಕ ಏಳಿಗೆಗಾಗಿ ಹಲವಾರು ರೀತಿಯ ಕೊಡುಗೆಗಳನ್ನು ನೀಡಿವೆ. ಇದಕ್ಕೆ ಉದಾಹರಣೆಯೆಂದರೆ ಮುಧೋಳ, ಜಮಖಂಡಿ ಪ್ರದೇಶಗಳಲ್ಲಿ ಇಂದಿಗೂ ಜನಸಮುದಾಯ ಸಂಸ್ಥಾನಿಕರ ಜನಪರ ಸೇವೆ, ಕೆಲಸಕಾರ್ಯಗಳ ಕುರಿತು ಹಾಡಿ ಹೊಗುಳುತ್ತಿದ್ದಾರೆ.

**ಮುಧೋಳ ಸಂಸ್ಥಾನ**

ಆದಿಲ್‌ಶಾಹಿ ಮನೆತನವು ೧೪೮೯ರಲ್ಲಿ ಸ್ಥಾಪನೆಯಾಗುತ್ತದೆ. ಯೂಸೂಫ್ ಆದಿಲ್‌ಖಾನನು ಘೋರ್ಪಡೆ ಸೇನಾ ನಾಯಕನನ್ನು ಬೆಳೆಸುವುದರೊಂದಿಗೆ ಸ್ಥಳೀಯ ಆಡಳಿತಗಾರನಾಗಿ ಪ್ರವರ್ಧಮಾನಕ್ಕೆ ಬರುತ್ತಾನೆ. ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ಘೋರ್ಪಡೆ ಎಂಬ ಹೆಸರಿನಿಂದಲೇ ಮಹಾರಾಷ್ಟ್ರ ಹಾಗೂ ಆಂಧ್ರದಲ್ಲಿಯೂ ಈ ಘರಾಣಾದ ವಂಶದವರು ನಡೆಸಿದ್ದು ಗಮನಾರ್ಹವೆನಿಸಿದೆ.[೮೮] ಮುಧೋಳ ಸಂಸ್ಥಾನವನ್ನು ಆಳಿದ ಬೋಸಲೆ, ಘೋರ್ಪಡೆ ಮನೆತನ ಮಹಾರಾಷ್ಟ್ರದ ಪ್ರಾಚೀನ ಸಂಸ್ಥಾನಿಕ ಮನೆತನಗಳಲ್ಲಿ ಒಂದಾಗಿದೆ. ಸುಮಾರು ೧೩೫೨ರಲ್ಲಿ ಬಹುಮನಿ ಸುಲ್ತಾನ ಅಲ್ಲಾವುದ್ದೀನ್ ಹಸನ್ ಬಹಮನ್ ಷಾಹನು ನೀಡಿರುವ ಫರ್ಮಾನೊಂದರಲ್ಲಿ ಜಮಖಂಡಿಯ ಕೋಟೆಯಲ್ಲಿ ಅವಿತುಕೊಂಡಿದ್ದ ಮುಧೋಳದ ದೊರೆ ನಾರಾಯಣನನ್ನು ಸೋಲಿಸಿ ಜಮಖಂಡಿ ಕೋಟೆಯನ್ನು ವಶಪಡಿಸಿಕೊಳ್ಳುವಲ್ಲಿ ಮೇವಾರ ರಜಪೂತ್ ಮನೆತನಕ್ಕೆ ಸೇರಿದ ದಿಲೀಪ ಸಿಂಘನು ಸುಲ್ತಾನನಿಗೆ ನೆರವು ನೀಡಿದ್ದಕ್ಕಾಗಿ ಅವನಿಗೆ ಸುಲ್ತಾನನು ದೌಲತ್‌ಬಾದ್ ಪ್ರಾಂತ್ಯದಲ್ಲಿ ೧೦ ಹಳ್ಳಿಗಳನ್ನು ಇನಾಮ್ ನೀಡಿದ ವಿಷಯವು ದಾಖಲಾಗಿದೆ.[೮೯] ಸೋತು ಸೆರೆಯಾದ ಮುಧೋಳದ ದೊರೆ ನಾರಾಯಣನನ್ನು ಕ್ಷಮಿಸಿ ಸಾಮಂತನಂತೆ ಮುಧೋಳದಲ್ಲಿ ಅಧಿಕಾರದಲ್ಲಿ ಮುಂದು ವರೆಯಲು ಸುಲ್ತಾನನು ಅನುಮತಿಸಿದ್ದನು. ಇದರಿಂದ ಆ ವೇಳೆಯಲ್ಲಿ ಜಮಖಂಡಿ ಕೋಟೆಯು ಮುಧೋಳ ದೊರೆ ನಾರಾಯಣನ ಅಧೀನದಲ್ಲಿದ್ದ ಅಂಶವು ವೇದ್ಯವಾಗುತ್ತದೆ.[೯೦] ಅಧಿಕಾರಕ್ಕಾಗಿ ಸಂಸ್ಥಾನಿಕರ ಕಾಳಗ ನಿರಂತರವಾಗಿ ನಡೆಯುತ್ತಲೇ ಇದ್ದಿತ್ತು.

ಮುಧೋಳ ಉಲ್ಲೇಖ ಬಹಮನಿ ಸುಲ್ತಾನನ ಮೂರನೆಯ ಮಹಮದ್ ಬಹಮನ್ ಷಾನ ಕಾಲಕ್ಕೆ ಸೇರಿದ ೧೪೭೧ರ ಫರ್ಮಾನೊಂದರಲ್ಲಿ ಕಂಡುಬರುತ್ತದೆ. ಅದರಂತೆ ಮುಧೋಳ ಘೋರ್ಪಡೆ ಸಂಸ್ಥಾನಿಕರು ಆದಿಲ್‌ಷಾಹಿ ಅರಸರ ಸಾಮಂತರಾಗಿ ಮುಂದು ವರಿದಂತೆ ತೋರು ತ್ತದೆ.[೯೧] ಮುಧೋಳ ಸಂಸ್ಥಾನವು ೧೮೮೨-೮೩ರಲ್ಲಿ ೩೬೧ ಚದರ ಮೈಲುಗಳಷ್ಟು ವಿಸ್ತೀರ್ಣವಿದ್ದು, ೮೧ ಹಳ್ಳಿಗಳನ್ನು ಹೊಂದಿದ್ದು, ೨,೪೫,೩೬೦ ರೂಪಾಯಿಗಳ

ವಾರ್ಷಿಕ ಆದಾಯವನ್ನು ಹೊಂದಿತ್ತು. ಇದರಲ್ಲಿ ಮುಧೋಳ, ಡವಳೇಶ್ವರ, ಜಂಬಗಿ, ಮಾಚಕನೂರು ಹಾಗೂ ಲೋಕಾಪುರ ಎಂಬ ಪಂಚ ಮಹಲಗಳಿದ್ದವು. ಮಾಲೋಜಿರಾವ್ ಘೋರ್ಪಡೆ, ವೆಂಕಟರಾವ್ ಘೋರ್ಪಡೆ ನಾರಾಯಣರಾವ್ ಘೋರ್ಪಡೆ ಹಾಗೂ ಇಮ್ಮಡಿ ಮಾಲೋಜಿರಾವ್ ಘೋರ್ಪಡೆ ಈ ಸಂಸ್ಥಾನವನ್ನು ಆಳಿದ ಘೋರ್ಪಡೆ ಮನೆತನದ ಪ್ರಮುಖ ಅರಸರುಗಳಾಗಿದ್ದು, ಇವರು ಸಂಸ್ಥಾನದ ಅಭ್ಯುದಯಕ್ಕಾಗಿ ಆಡಳಿತವನ್ನು ನಡೆಸಿ ಜನಪ್ರಿಯರಾಗಿದ್ದರು.[೯೨] ಮುಧೋಳದಲ್ಲಿ ವೆಂಕಟರಾವ್ ಘೋರ್ಪಡೆಯವರು ನಿರ್ಮಿಸಿರುವ ಮಹಾರಾಯನ ಕೆರೆ ಜನರಿಗೆ ಕುಡಿಯುವ ನೀರಿಗೆ ಮೂಲಾಧಾರವಾಗಿದೆ. ಕುಸ್ತಿಯ ಅಖಾಡ, ಮುಧೋಳ ಬೇಟೆ ನಾಯಿ ತಳಿ ಇವರ ಕೊಡುಗೆಯಾಗಿದೆ. ಮಾಲೋಜಿರಾವ್ ಘೋರ್ಪಡೆಯವರ ಆಡಳಿತ ವೈಖರಿ ಮೇಲೆ ಅಂದಿನ ಮುಂಬಯಿ ಸರಕಾರ ಒಂಬತ್ತು ಕುಶಾಲ ತೋಪುಗಳನ್ನು ಹಾರಿಸುವ ಗೌರವವನ್ನು ನೀಡಿದ್ದರು. ಸಂಸ್ಥಾನಿಕರು ಮರಾಠರಾಗಿದ್ದುದರಿಂದ ಆಡಳಿತ ಭಾಷೆಯು ಮರಾಠ ಆಡಳಿತ ಭಾಷೆಯಾಗಿತ್ತು. ಭಂಟನೂರು ಗ್ರಾಮದವರಾದ ಶ್ರೀ ರಾಮಣ್ಣ ಸೊನ್ನದವರಂತಹ ಶಿಕ್ಷಣ ಪ್ರೇಮಿಗಳಿಂದ ಸಂಸ್ಥಾನದಲ್ಲಿ ಕನ್ನಡ ಭಾಷೆಯೂ ಕೂಡಾ ಬಳಕೆಗೆ ಬಂದಿತು.[೯೩] ಬ್ರಿಟಿಷರ ಆಡಳಿತದ ಕಾಲಾವಧಿಯಲ್ಲಿ ಮುಧೋಳ ಕೊಲ್ಲಾಪುರ ಪೊಲಿಟಿಕಲ್ ಏಜೆಂಟನ ಅಧೀನದಲ್ಲಿತ್ತು. ೧೮೫೭ರಲ್ಲಿ ಬ್ರಿಟಿಷರ ವಿರುದ್ಧ ಬಂಡಾಯ ಎದ್ದಿರುವ ಹಲಗಲಿ ಬೇಡರು ಸಹ ಸಂಸ್ಥಾನಿಕರ ಆಡಳಿತದ ವ್ಯಾಪ್ತಿಯಲ್ಲಿದ್ದರೂ ಸಹ ಈ ಬಂಡಾಯ ನಿಯಂತ್ರಿಸಲು ಸಾಧ್ಯವಾಗಲಿಲ್ಲ. ಮುಧೋಳ ಸಂಸ್ಥಾನ ಭಾರತ ಸ್ವಾತಂತ್ರ್ಯಾನಂತರ ೧೯೪೮ರಲ್ಲಿ ಮುಂಬೈ ರಾಜ್ಯದಲ್ಲಿ ವಿಲೀನಗೊಂಡು ವಿಜಾಪುರ ಜಿಲ್ಲೆಯ ಒಂದು ತಾಲೂಕಾಗಿ ಸೇರಿತು. ಈಗ ೧೯೯೭ರಿಂದ ಬಾಗಲಕೋಟೆ ಜಿಲ್ಲೆಯಲ್ಲಿ ತಾಲೂಕಾಗಿ ಗುರುತಿಸಿಕೊಂಡಿದೆ.

**ಜಮಖಂಡಿ ಸಂಸ್ಥಾನ**

**ಕೊಣ್ಣೂರ ದೇಸಾಯಿಯವರ ಆಳ್ವಿಕೆ**

ಸುಮಾರು ೧೪ನೇ ಶತಮಾನದ ಮಧ್ಯಭಾಗದಲ್ಲಿ ಈ ದೇಸಗತಿ ಮನೆತನದವರು ವಿಜಯನಗರ ಅರಸರ ಕಾಲದಲ್ಲಿ ಆನೆಗುಂದಿಯಲ್ಲಿ ಗಜದಳದ ಸೈನಿಕರಾಗಿ(ಗಾಣಿಗರು)ಸೇವೆ ಸಲ್ಲಿಸುತ್ತಿದ್ದರು. ಈ ಮನೆತನದ ಮೂಲ ಪುರುಷನಾದ "ದೊಡ್ಡಪ್ಪನಾಯಕನೆಂಬುವನು ವಿಜಯನಗರ ಅರಸನ ವೈರಿಯ ಜೊತೆಗೆ ಹೋರಾಡಿ ಅವನ ಶಿರಚ್ಛೇದನ ಮಾಡಿ ರುಂಡವನ್ನು ತಂದು ಅರಸನಿಗೆ ತೋರಿಸಿದಾಗ, ಅರಸನು ಈ ವೀರನು ಮುಂದೆ ತನಗೆ ವೈರಿಯಾಗಬಹುದೆಂದು ಭಾವಿಸಿ ಅವನ ಬಲಗೈಯನ್ನು ಕತ್ತರಿಸಿದನಂತೆ ಆಗ ದೊಡ್ಡಪ್ಪನಾಯಕನು

ಅಂಗಹೀನನಾದ ಕಾರಣ ಅವನ ಉಪಜೀವನಕ್ಕಾಗಿ ವಿಜಯನಗರದ ಅರಸನು ಕೃಷ್ಣಾ ತೀರದ ಫಲವತ್ತಾದ ಭೂಪ್ರದೇಶವನ್ನು ಇನಾಮ ಹಾಕಿ ಕೊಟ್ಟನು. ಈ ಇನಾಮ ಭೂಮಿಯನ್ನು ಪಡೆದುಕೊಂಡವರೆಂದರೆ ಇಂದಿನ ಬಾಗೇವಾಡಿ ತಾಲೂಕಿನ ಕೋಲ್ಹಾರ(ಕೋರ್ತಿ) ಬೀಳಗಿ ತಾಲೂಕಿನ ಗಿರಿಸಾಗರ ಮತ್ತು ಹೊನ್ನಿಹಾಳ ಅಲ್ಲದೇ ಜಮಖಂಡಿ ತಾಲೂಕಿನ ಕೊಣ್ಣೂರ ದೇಸಾಯಿ ಮನೆತನದವರೆಂದು ಹೇಳಲಾಗುತ್ತಿದೆ.[೪] ಕೊಣ್ಣೂರು ದೇಸಾಯಿಯವರಿಗೆ ೨೨ ಹಳ್ಳಿಯ ಇನಾಮದಾರಿಕೆ ಇದ್ದಿತ್ತು. ಇವರಿಗೆ ಮೊದಲು ಜಮಖಂಡಿ ದೇಸಾಯಿಯವರೆಂದು ಕರೆಯುತ್ತಿದ್ದರು. ಕ್ರಿ.ಶ.೧೫೬೫ರ ನಂತರ ವಿಜಯನಗರ ಪತನ ನಂತರ ಜಮಖಂಡಿ ಪ್ರದೇಶವು ವಿಜಯಪುರ ಆದಿಲ್‌ಶಾಹಿಗಳ ವಶವಾಯಿತು. ಆದಿಲ್‌ಶಾಹಿ ३३ ಹಳ್ಳಿಗಳ ಇನಾಮ್ ಹಾಕಿಕೊಟ್ಟು ಜಮಖಂಡಿ ಪ್ರದೇಶ ದೇಸಾಯಿಯವರೆಂಬ ಹೆಸರು ಬಂದಿತು. ಇವರ ಕುಲಗುರು 'ಕನ್ನೇರಿ ಮಠದ ಕಾಡಸಿದ್ದೇಶ್ವರ[೫] ದೇವರರಾಗಿದ್ದುದು' ಕಂಡುಬರುತ್ತದೆ.

ಕ್ರಿ.ಶ.೧೭೯೯ರಲ್ಲಿ ಕಾಡಪ್ಪ ದೇಸಾಯಿಯವರು ಮರಣ ಹೊಂದಿದರು. ನಂತರ ಅವರ ಕಿರಿಯ ಸಹೋದರ ಗದಿಗೆಪ್ಪ ದೇಸಾಯಿಯು ಪಟವರ್ಧನ ವಿರುದ್ಧ ಜಮಖಂಡಿಯ ಅಧೀನದಲ್ಲಿದ್ದ ಜಗದಾಳ ಮೊದಲಾದ ಗ್ರಾಮಗಳನ್ನು ವಶಪಡಿಸಿಕೊಂಡನು. ಆಗ ಭಾಸ್ಕರ ಪಂತ ನಾನಾ ಸುಖದೇವ ಜಗದಾಳದ ಮೇಲೆ ದಾಳಿ ಮಾಡಿ ಗದಿಗೆಪ್ಪ ದೇಸಾಯಿ ಸುಮಾರು ೧೫೦ ಜನ ಸೈನಿಕರನ್ನು ಧ್ವಂಸ ಮಾಡಿದನು.[೬] ಆಗ ಗದಿಗೆಪ್ಪ ದೇಸಾಯಿ ಅಲ್ಲಿಂದ ಪಾರಾಗಿ, ಮುಂದೆ ಮೂರು ವರ್ಷಗಳ ವರೆಗೆ ಸ್ಥಾನ ಭ್ರಷ್ಟನಾಗಿ ಸಂಚರಿಸುತ್ತ ಕೊನೆಗೆ ಕ್ರಿ.ಶ.೧೮೦೨ರಲ್ಲಿ ಮರಣ ಹೊಂದಿದನು. ಗದಿಗೆಪ್ಪ ದೇಸಾಯಿ ಮರಣದ ನಂತರ ಅವನ ಮಗ ಮತ್ತು ಕುಟುಂಬದ ಸದಸ್ಯರು ಸುಮಾರು ಹತ್ತು ವರ್ಷಗಳ ಕಾಲ ಮುಧೋಳದಲ್ಲಿಯೇ ವಾಸವಾಗಿದ್ದರು. ಮುಂದೆ ಕ್ರಿ.ಶ.೧೮೧೨ರಲ್ಲಿ ಜಮಖಂಡಿ ಸಂಸ್ಥಾನಿಕರಾದ ರಾಮಚಂದ್ರ ಪಂತಾ ಅಪ್ಪ ಅವರು ದೇಸಾಯಿಯವರಿಗೆ ಜಮಖಂಡಿಗೆ ಬಂದು ನೆಲೆಸಲು ಅನುಮತಿ ನೀಡಿದರು. ನಂತರ ಕೊಣ್ಣೂರು ದೇಸಾಯಿಯವರ ವಂಶಸ್ಥರಿಗೆ ಜಮಖಂಡಿಯ ಸಂಸ್ಥಾನದ ದರ್ಬಾರದಲ್ಲಿ ಒಂದು ಗೌರವಾನ್ವಿತವಾದ ಸ್ಥಾನವನ್ನು ನೀಡ ಲಾಯಿತು.[೭] ಇದರಿಂದ ಜಮಖಂಡಿಯಲ್ಲಿ ಕೊಣ್ಣೂರು ದೇಸಾಯಿಯವರ ಆಡಳಿತ ಪ್ರಾರಂಭವಾಯಿತು.

**ಪಟವರ್ಧನ ಸಂಸ್ಥಾನಿಕರ ಆಳ್ವಿಕೆ**

ಸುಮಾರು ೧೭ನೇ ಶತಮಾನದ ಮಧ್ಯದಲ್ಲಿ ಈ ಮನೆತನದ ಮೂಲ ಪುರುಷನಾದ 'ಹರಭಟ್ಟ'ಎಂಬುವರು ರತ್ನಾಗಿರಿ ಜಿಲ್ಲೆಯ ಕೋಟವಾಡೆ ಎಂಬ ಹಳ್ಳಿಯಲ್ಲಿ ವಾಸಿಸುತ್ತಿದ್ದರು. ಇವರು ಅದೇ ಹಳ್ಳಿಯಲ್ಲಿ "ಸಹಸ್ರಬುದ್ದೆ" ಎಂಬ ಪ್ರತಿಷ್ಠಿತ ಮನೆತನದ ಪುರೋಹಿತರಾಗಿದ್ದರು.

ಇವರಿಗೆ ಬಾಳಂಭಟ್ಟ, ಕೃಷ್ಣಭಟ್ಟ ಮತ್ತು ರಘುನಾಥ ಭಟ್ಟ ಎಂಬ ೩ ಜನ ಮಕ್ಕಳಿದ್ದರು.[೮] ೨ನೇ ಹರಭಟ್ಟರು, ೧ನೇ ಪರಶುರಾಮ ಬಾವು ಪಟವರ್ಧನ ಪ್ರಮುಖ ಅರಸರಾಗಿದ್ದು(೧೭೪೦-೧೭೯೯), ೧೭೬೪-೬೫ರಲ್ಲಿ ಮರಾಠ ಮೈಸೂರು ಯುದ್ಧದಲ್ಲಿ ಹೋರಾಡಿ ಸೋಲಿಸಲು ಪ್ರಮುಖವಾಗಿದೆ. ಕೊಣ್ಣೂರು ದೇಸಾಯಿ ಸೋಲಿಸಿ ಪಟವರ್ಧನ ಸಂಸ್ಥಾನ ಜಮಖಂಡಿಯಲ್ಲಿ ಸ್ಥಾಪಿಸಿ 'ತಾಸಗಾಂವ' ಜಹಗೀರ ಪಡೆದುಕೊಂಡ ಜಮಖಂಡಿ ಅದರ ಒಂದು ಭಾಗವಾಗಿತ್ತು.

* ೧೭೮೫ರಲ್ಲಿ ಟಿಪ್ಪು-ಮರಾಠ ಯುದ್ಧ(ನಿಜಾಮನೊಡನೆ)
* ೧೭೯೦-೯೨ರಲ್ಲಿ ೩ನೇ ಆಂಗ್ಲೋ-ಮೈಸೂರು(ತ್ರಿಪಕ್ಷ ಕೂಟ-ಇಂಗ್ಲಿಷ, ನಿಜಾಮ ಮರಾಠ) ಆಗ ಭಾವು ಮರಾಠ ಸೈನ್ಯ ನೇತೃತ್ವ ವಹಿಸಿದ್ದನು.
* ೧೭೯೫ ಕರಾಡ ಕಾಳಗ ಪ್ರಮುಖವಾದವುಗಳು.

ಜಮಖಂಡಿ ಸಂಸ್ಥಾನಿಕರ ಆಡಳಿತದ ಕಾಲಾವಧಿಯಲ್ಲಿ ಜಮಖಂಡಿಯ ಪರಿಸರದಲ್ಲಿ ಹಲವಾರು ಸಾಮಾಜಿಕ ಕಾರ್ಯಗಳನ್ನು ಕೈಗೊಂಡರು. ಸಂಸ್ಥಾನಿಕರು ನಿರ್ಮಿಸಿದಂತಹ ಕಟ್ಟಡಗಳು ಇಂದಿಗೂ ಸಹ ವ್ಯವಸ್ಥಿತವಾಗಿ ಕಾರ್ಯವನ್ನು ನಿರ್ವಹಿಸುತ್ತಾ ಜನಮಣ್ಣನೆಗೆ ಪಾತ್ರವಾಗಿವೆ. ಅಂತಹ ಕಟ್ಟಡಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ. ಶೈಕ್ಷಣಿಕ ಕಟ್ಟಡಗಳಾದ ಪಿ.ಬಿ.ಹೈಸ್ಕೂಲ್, ಶ್ರೀಮತಿ ರಮಾಬಾಯಿ ವಾಚನಾಲಯ, ಪೇರಿಸ್ಕೂಲ, ಗರ್ವ್ಹನರ್ ಬಂಗ್ಲೋ(ಪೋಲೋ ಪ್ಯಾಲೆಸ್) ೨ನೇ ನಂಬರ ಮರಾಠಿ ಶಾಲೆ, ಪಾಗಾ ಶಾಲೆ, ಶಕುಂತಲಾ ಬಾಲಕೆಯರ ಮಾಡೆಲ್ ಮರಾಠಿ ಪ್ರಾಥಮಿಕ ಶಾಲೆ ಇತ್ಯಾದಿ ಸ್ಮಾರಕಗಳು ಅಥವಾ ಕಟ್ಟಡಗಳನ್ನು ಅವಲೋಕಿಸಿದಾಗ ಸಂಸ್ಥಾನಿಕರ ಶೈಕ್ಷಣಿಕ ವಲಯದ ಬಗೆಗೆ ಇರುವಂತಹ ಕಳಕಳಿ, ಪ್ರೀತಿ, ಆಸಕ್ತಿ ಇರುವುದು ಗೊತ್ತಾಗುತ್ತದೆ. ಅದರಂತೆ ಸಾರ್ವಜನಿಕ ಕಟ್ಟಡಗಳಾದ ದರ್ಬಾರ ಹಾಲ್, ಸರಕಾರಿ ಅಸ್ಪತ್ರೆ, ಅತಿಥಿಗ್ರಹ(ರಮಾ ನಿವಾಸ) ಎಸ್.ಆರ್.ಎನ್.ಕ್ಲಬ್, ಪೋಲೋ ಮೈದಾನ, ಪರಶುರಾಮ ತಾಲೀಮ ಖಾನೆ(ಗರಡಿ ಮನೆ), ಸುವರ್ಣ ಚಿತ್ರಮಂದಿರ, ಜಮಖಂಡಿ ಅರ್ಬನ್ ಬ್ಯಾಂಕ್ ಮುಂತಾದ ಕಟ್ಟಡಗಳನ್ನು ಸಂಸ್ಥಾನಿಕರು ಜನರಿಗಾಗಿ ಜನರ ಹಿತಾಭಿವೃದ್ಧಿಗಾಗಿ ನಿರ್ಮಿಸಿದ್ದಾರೆ ಎಂಬುದು ದಾಖಲಾಗಿದೆ. ಈ ಮೇಲಿನ ಸ್ಮಾರಕಗಳು ಇಂದಿಗೂ ಸಹ ಗಟ್ಟಿಮುಟ್ಟಾಗಿವೆ. ಅದಕ್ಕೆ ಕಾರಣವೆಂದರೆ ಹಣಕಾಸಿನ ಶ್ರಮಿಕರ ಸಹಾಯವನ್ನು ಸಂಸ್ಥಾನಿಕರು ನೀಡುತ್ತಿದ್ದರೆ. ಆದರೆ ಎಲ್ಲಾ ಸ್ಮಾರಕಗಳ ನೀಲನಕ್ಷೆ, ಕೆತ್ತನೆ, ವಿನ್ಯಾಸ, ವಾಸ್ತುಶಿಲ್ಪ ಎಲ್ಲವೂ ಯುರೋಪ ಮಾದರಿಯಲ್ಲಿರುತ್ತಿದ್ದವು. ಏಕೆಂದರೆ ಬ್ರಿಟಿಷ್ ಅಧಿಕಾರಿಗಳು, ಇಂಜನಿಯರರು ವಸಾಹತುಶೈಲಿಯಲ್ಲಿ ನಿರ್ಮಿಸುವ ಮೂಲ ಉದ್ದೇಶ ಹೊಂದಿರುತ್ತಿದ್ದರು. ಕಟ್ಟಡಗಳ ನೀಲ ನಕ್ಷೆ ತಯಾರಿಸುವವರು ಎಲ್ಲರೂ ಬ್ರಿಟಿಷರೇ ಹಾಗೂ ಯುರೋಪಿನ

ಇಂಜನಿಯರರು ಆಗಿರುತ್ತಿದ್ದರು. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಯೂರೋಪಿನ ಇಂಜನಿಯರುಗಳು ನೇಮಕಾತಿ ಅತಿ ಹೇರಳವಾಗಿ ನಡೆಯಿತು. ಹಾಗಾಗಿ ಜಮಖಂಡಿ ಪರಿಸರದಲ್ಲಿ ಇಂದಿಗೂ ಸಹ ಸ್ಮಾರಕಗಳನ್ನು ನೋಡಿ ಕಣ್ತುಂಬಿಕೊಳ್ಳಬಹುದಾಗಿದೆ.

**೨.೨.೩. ಆಧುನಿಕ ಕಾಲದ ಇತಿಹಾಸ**

ಮೊತ್ತಮೊದಲನೆಯದಾಗಿ ೧೮ನೆಯ ಶತಮಾನವು ಉರುಳುವ ಹೊತ್ತಿಗೆ, ವ್ಯಾಪಾರ, ಸಂಸ್ಥೆಯಾಗಿ ಬಂದ ಬ್ರಿಟಿಷರು ಭಾರತದಲ್ಲಿ ತಮ್ಮ ವ್ಯಾಪಾರ ವೃತ್ತಿಯನ್ನು ಬದಿಗೊತ್ತಿ ದೇಶ ವಿಜಯಗಳೆಂಬ ಹಮ್ಮನ್ನು ಬಹಿರಂಗವಾಗಿ ತೋರಿಸುತ್ತ ಬಂದರು. ಎರಡನೆಯದಾಗಿ ೧೮ನೆಯ ಶತಮಾನದ ಹೊತ್ತಿಗೆ ಮರಾಠರ ಆಕ್ರಮಣ ಮನೋವೃತ್ತಿ ದಕ್ಷಿಣ ಭಾರತದ ಕಡೆಗೆಲ್ಲ ತಿರುಗಿತ್ತು. ೧೭೨೦ರಿಂದ ಮರಾಠರ ಪ್ರಭಾವ ಉತ್ತರ ಕರ್ನಾಟಕದಲ್ಲಿ ಭದ್ರವಾಗಿ ನೆಲೆಗೊಂಡಿತ್ತು. ತತ್ಫಲವಾಗಿ ಉತ್ತರ ಕರ್ನಾಟಕವು ಈಚಿನ ಕಾಲದವರೆಗೂ ದಕ್ಷಿಣ ಮಹಾರಾಷ್ಟ್ರ ಪ್ರದೇಶವೆಂಬ ಅಭಿದಾನಕ್ಕೆ ಪಾತ್ರವಾಗಿ ಹೋಗಿತ್ತು.[೯೯] ಕ್ರಿ.ಶ.೧೭೯೯ರ ಶ್ರೀರಂಗಪಟ್ಟಣದ ಕೊನೆಯ ಕಾಳಗದಲ್ಲಿ ಟಿಪ್ಪುವು ಯುದ್ಧದಲ್ಲಿ ಮಡಿದಾಗ ಮೈಸೂರು ಪ್ರದೇಶಗಳು ಬ್ರಿಟಿಷರ ಕೈವಶವಾದವಲ್ಲದೆ ಮೈಸೂರು ಸಂಸ್ಥಾನದ ಆಡಳಿತ ಅವರ ಕೈಗೆ ಬಂದಿತು. ಕರ್ನಾಟಕದಲ್ಲಿ ಬ್ರಿಟಿಷರು ನೇರವಾದ ಆಡಳಿತಕ್ಕೆ ಒಳಗಾದ ಮೊಟ್ಟಮೊದಲಿನ ಪ್ರದೇಶವೆಂದರೆ ಕೆನರಾ(೧೭೯೯) ಅದು ಟಿಪ್ಪುವಿನಿಂದ ದೊರೆತದ್ದು. ಮರು ವರ್ಷ ನಿಜಾಮನು ಬಳ್ಳಾರಿ ವಿಭಾಗವನ್ನು ಬ್ರಿಟಿಷರಿಗೆ ಬಿಟ್ಟುಕೊಟ್ಟನು.[೧೦೦] ಇತ್ತ ಪಶ್ಚಿಮದಲ್ಲಿ ಮರಾಠರು ಬ್ರಿಟಿಷರೊಡನೆ ಸ್ನೇಹ ಬೆಳೆಸುವ ಸಲುವಾಗಿ ಕ್ರಿ.ಶ.೧೮೦೧ರಲ್ಲಿ ಪೇಶ್ವೆ ಬಾಜಿರಾಯ ಅವರಿಗೆ ಧಾರವಾಡ ಸುಭಾವನ್ನು ಬಿಟ್ಟುಕೊಟ್ಟನು. ಮರಾಠರಿಂದ ಸ್ನೇಹಪೂರ್ವಕವಾಗಿ ಪಡೆದು ಅದನ್ನು ಬಳ್ಳಾರಿ ಕಲೆಕ್ಟರೇಟ್‌ಗೆ ವಹಿಸಲಾಯಿತು.

ಬ್ರಿಟಿಷರು ಮರಾಠರ ಮತ್ತು ನಿಜಾಮನ ಸಹಾಯದಿಂದ ಟಿಪ್ಪುವನ್ನು ೧೭೯೨ರಲ್ಲಿ ಸೋಲಿಸಿದಾಗ ಅವನ ರಾಜ್ಯದಲ್ಲಿ ಅರ್ಧಭಾಗವನ್ನು ಕಿತ್ತುಕೊಂಡರು. ಅದು ಈ ಮೂವರಲ್ಲಿ ಹರಿದು ಹಂಚಿ ಹೋಯಿತು. ಹಳೆಯ ಮೈಸೂರಿನ ಪಶ್ಚಿಮ ದಕ್ಷಿಣಪೂರ್ವ ದಿಕ್ಕುಗಳಿಗಿದ್ದ ಭಾಗವನ್ನು ಬ್ರಿಟಿಷರು ತಮ್ಮ ಪಾಲಿಗಿಟ್ಟುಕೊಂಡರು. ಮರಾಠರು ತುಂಗಭದ್ರೆಯ ದಕ್ಷಿಣದ ಗಡಿಯಾದ ಉತ್ತರ ಕರ್ನಾಟಕದ ಸೀಮೆಯನ್ನು ಸ್ವಾಧೀನಪಡಿಸಿಕೊಂಡರು. ನೈಜವಾದ ಪಾಲಿಗೆ ಹಳೆಯ ಮೈಸೂರಿನ ಈಶಾನ್ಯ ಭಾಗವೂ ಹೈದರಾಬಾದ್ ಸಂಸ್ಥಾನದಲ್ಲಿ ಐಕ್ಯವಾದ ಕನ್ನಡ ಜಿಲ್ಲೆಗಳೂ ಸೇರಿದವು. ಸೋತ ಟಿಪ್ಪು ಹೀಗೆ ತನ್ನ ರಾಜ್ಯದಲ್ಲಿ ಅರ್ಧಭಾಗದಷ್ಟು ಪರಾಧೀನ ವಾಗುವುದಕ್ಕೆ ಒಪ್ಪಿಕೊಳ್ಳಬೇಕಾಯಿತು. ಬ್ರಿಟಿಷರು ಅವನ ಇಬ್ಬರು ಮಕ್ಕಳನ್ನು

ಒತ್ತೆಯಾಳುಗಳನ್ನಾಗಿ ಕಾವಲಲ್ಲಿರಿಸಿಕೊಂಡರು. ಹೀಗೆ ಮಕ್ಕಳು ಬಂಧಿಗಳಾಗಿ ತನಗೆ ಬಂದ ಸೋಲಿನ ತೇಜೋವಧೆಯ ನೋವಿನ ಜೊತೆಗೆ ಟಿಪ್ಪು ಹೃದಯ ವಿದ್ರಾವಕ ಯಾತನೆಯನ್ನು ಅನುಭವಿಸಬೇಕಾಯಿತು.[೧೦೧] ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ದಕ್ಷಿಣ ಭಾರತದಲ್ಲಿ ವಿಸ್ತರಿಸುವ ಉದ್ದೇಶದಿಂದ ಮುಂದಿನ ೧೬ ವರ್ಷಗಳವರೆಗೆ ಮರಾಠರ ಜೊತೆ ಹಲವು ಹೋರಾಟಗಳನ್ನು ಮಾಡಿದರು. ಕ್ರಿ.ಶ.೧೮೧೮ ಖಡಕಿ ಯುದ್ಧದ ಪರಿಣಾಮವಾಗಿ ಪೇಶ್ವೆ ಎರಡನೆಯ ಬಾಜೀರಾವ್, ಅಪ್ಪಸಾಹೇಬ್, ನಾಗಪುರದ ಬೋಂಸ್ಲೆ ಮುಖ್ಯಸ್ಥ ಮತ್ತು ಮಲ್ಹಾರಿರಾವ್ ಹೋಳ್ಕರ್ ಇವರೆಲ್ಲರೂ ಬ್ರಿಟಿಷರಿಂದ ಪರಾಜಿತರಾದರು. ಸೋತ ಬಾಜಿರಾಯನಿಗೆ ವಿಶ್ರಾಂತಿ ವೇತನದೊಂದಿಗೆ ಕಾನ್ಪುರದ ಬಳಿ ಬಿಥೊರಿಗೆ ಗಡಿಪಾರು ಮಾಡಲಾಯಿತು. ಮರಾಠರನ್ನು ಸೋಲಿಸಿದ ಬ್ರಿಟಿಷರು ಮುಂಬೈ ಪ್ರಾಂತ್ಯವನ್ನು ಒಳಗೊಂಡಂತೆ ಇಡೀ ಕರ್ನಾಟಕವನ್ನು ತಮ್ಮ ಕೈವಶ ಮಾಡಿಕೊಂಡರು.[೧೦೨] ಮರಾಠರಿಂದ ಮುಂಬೈ ಕರ್ನಾಟಕ ಪ್ರದೇಶಗಳನ್ನು ವಶಪಡಿಸಿಕೊಂಡ ಸರ್ ಥಾಮಸ್ ಮನ್ರೋನನ್ನೆ "ದಕ್ಷಿಣ ಮಹಾರಾಷ್ಟ್ರದ ದುವಾಬ" ಪ್ರಿನ್ಸಿಪಲ್ ಕಲೆಕ್ಟರ್ ಮತ್ತು ಪೊಲಿಟಿಕಲ್ ಏಜೆಂಟನನ್ನಾಗಿ ನೇಮಕ ಮಾಡಿದರು. ಧಾರವಾಡ ಇವರ ಮುಖ್ಯ ಕೇಂದ್ರವಾಗಿದ್ದು, ಜಿಲ್ಲಾ ಕೇಂದ್ರವಾಯಿತು. ಈ ಜಿಲ್ಲಾ ಕೇಂದ್ರದಲ್ಲಿ ೨೧ ತಾಲೂಕುಗಳನ್ನು ಮಾಡಿ ಒಂದೊಂದು ತಾಲೂಕಿಗೆ ಒಬ್ಬೊಬ್ಬ ಮಾಮಲೇದಾರರನ್ನು ನೇಮಿಸಿದರು.[೧೦೩] ತದನಂತರ ಸುಮಾರು ೧೮೦೦ರ ವೇಳೆಗೆ ಭಾರತದಲ್ಲಿ ಪ್ರಬಲ ರಾಜಕೀಯ ಶಕ್ತಿಯಾಗಿ ಆಂಗ್ಲರು ರೂಪಿತಗೊಂಡಿದ್ದರು. ತತ್ಪರಿಣಾಮವಾಗಿ ೧೮೧೭ರ ವೇಳೆಗೆ ಪೇಶ್ವೆ–ಬ್ರಿಟಿಷರ ನಡುವಿನ ಸಂಬಂಧ ಹದಗೆಟ್ಟು ಯುದ್ಧ ಅನಿವಾರ್ಯವಾಯಿತು. ಜನರಲ್ ಸರ್ ಥಾಮಸ್ ಮನ್ರೋ ಬೃಹತ್ತಾದ ಸೈನ್ಯದೊಂದಿಗೆ ಬಾದಾಮಿಗೆ ಮುತ್ತಿಗೆ ಹಾಕಿದನು. ಸುಮಾರು ೨ ದಿನಗಳ ಅಂತರದಲ್ಲಿ ಬಾದಾಮಿ ಹಾಗೂ ಬಾಗಲಕೋಟೆ ಪ್ರದೇಶಗಳು ಮನ್ರೋನ ಕೈವಶವಾದವು. ಇದರಿಂದ ಉತ್ತೇಜಿತನಾದ ಮನ್ರೋ ಕೃಷ್ಣೆಯ ಉತ್ತರ ಭಾಗವನ್ನು ೧೮೧೮ ಮೇ ೧೭ರ ವೇಳೆಗೆ ವಶಪಡಿಸಿಕೊಂಡನು. ಇದರಿಂದ ಬಿಜಾಪುರ ಪ್ರದೇಶ ಸಂಪೂರ್ಣ ಬ್ರಿಟಿಷರಿಗೆ ಸ್ವಾಧೀನವಾಯಿತು.[೧೦೪] ಬ್ರಿಟಿಷರು ವಿಜಾಪುರ ತಾಲೂಕನ್ನು ಸಾತಾರಾ ರಾಜನಿಗೆ ನೀಡಿದರು. ಮುಧೋಳ ಹಾಗೂ ಜಮಖಂಡಿಯು ಸಂಸ್ಥಾನಗಳಾಗಿ ಮುಂದುವರೆದವು. ೩೪೫ ಗ್ರಾಮಗಳನ್ನು ಹೊಂದಿದ್ದ ಇಂಡಿ ಹಾಗೂ ಮುದ್ದೇಬಿಹಾಳ ತಾಲೂಕುಗಳನ್ನು ಧಾರವಾಡ ಕಲೆಕ್ಟರೇಟಿಗೆ ಸೇರಿದ ಬಾಗಲಕೋಟೆ ಉಪ ಕಲೆಕ್ಟರೇಟಿಗೆ ವಹಿಸಿಕೊಡಲಾಗಿದ್ದು, ೧೮೨೯ರಲ್ಲಿ ಉಪ ಕಲೆಕ್ಟರೇಟು ರದ್ದಾಗುವುದರೊಂದಿಗೆ ಅವು ಕೂಡಾ ಧಾರವಾಡ ಕಲೆಕ್ಟರೇಟಿಗೆ ಸೇರಿದವು. ಮುಂದೆ ಅವೆರಡು ೧೮೨೫ರಲ್ಲಿ ಪೂನಾ

ಕಲೆಕ್ಟರೇಟಿಗೆ ವರ್ಗಾಯಿಸಲ್ಪಟ್ಟವು.[೧೦೫] ಆದರೆ ಮತ್ತೆ ೧೮೨೦ರಲ್ಲಿ ಇವೆರಡೂ ಧಾರವಾಡ ಕಲೆಕ್ಟರೇಟಿಗೆ ಪುನರ್ ವರ್ಗಾವಣೆಗೊಂಡವು. ಸೊಲ್ಲಾಪುರ ಕಲೆಕ್ಟರೇಟು ೧೮೩೮ರಲ್ಲಿ ರೂಪಿತಗೊಂಡಾಗ ಇವೆರಡು ಸೊಲ್ಲಾಪುರಕ್ಕೆ ವರ್ಗಾಯಿಸಲ್ಪಟ್ಟವು. ನಿಪ್ಪಾಣಿ ಸಂಸ್ಥಾನದ ಸಿದ್ದೇಜಿರಾವ್ ೨೦ ನಿಂಬಾಲ್ಕರನ್ನು ೧೮೪೯ರಲ್ಲಿ ಮರಣ ಹೊಂದಿದಾಗ ಅವನ ಅಧೀನದಲ್ಲಿದ್ದ ಚಾಂದಕವಾಟೆ ಹಾಗೂ ನಿಡಗುಂದಿ ಪರಗಣಗಳ ೩೧ ಹಳ್ಳಿಗಳನ್ನು ಸೊಲ್ಲಾಪುರ ಕಲೆಕ್ಟರೇಟಿಗೆ ಸೇರಿಸಲಾಯಿತು. ಇದಕ್ಕೆ ಇಂಡಿ, ಮುದ್ದೇಬಿಹಾಳ ತಾಲೂಕುಗಳ ಕೆಲವು ಗ್ರಾಮಗಳನ್ನು ಸೇರಿಸಿ ಅದೇ ವರ್ಷ ಹಿಪ್ಪರಗಿ(ಸಿಂದಗಿ) ತಾಲೂಕನ್ನು ರೂಪಿಸಲಾಯಿತು. ಸಾತಾರಾ ರಾಜನೊಂದಿಗೆ ಪ್ರದೇಶಗಳ ಕೈ ಕೈ ಬದಲಾವಣೆಯಿಂದಾಗಿ ಬಂದ ನೂತನ ಪ್ರದೇಶಗಳನ್ನು ಒಗ್ಗೂಡಿಸಿ ೧೮೫೨ರಲ್ಲಿ ಮನಗೂಳಿ(ಬಾಗೇವಾಡಿ) ತಾಲೂಕು ರಚಿಸಲ್ಪಟ್ಟಿತು.[೧೦೬] ಬ್ರಿಟಿಷರು ವಿಜಾಪುರ ತಾಲೂಕನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಸಾತಾರ ಕಲೆಕ್ಟರೇಟಿಗೆ ಕೂಡಿಸಿದರು. ಮುಂದೆ ಅದು ೧೮೬೨ರಲ್ಲಿ ಸೊಲಾಪುರಕ್ಕೆ ವರ್ಗಾಯಿಸಲ್ಪಟ್ಟಿತು. ಕೃಷ್ಣಾ ನದಿಯ ಉತ್ತರ ಭಾಗದಂತಿದ್ದ ಇಂಡಿ, ಮುದ್ದೇಬಿಹಾಳ, ಹಿಪ್ಪರಗಿ(ಸಿಂದಗಿ) ಮನಗೊಳಿ(ಬಾಗೇವಾಡಿ) ಹಾಗೂ ವಿಜಾಪುರ ತಾಲೂಕು ಅಥವಾ ಉಪ ವಿಭಾಗಗಳು ೧೮೬೪ರ ನವೆಂಬರ್ ವರೆಗೆ ಸೊಲ್ಲಾಪುರ ಕಲೇಕ್ಟರೇನಲ್ಲಿದ್ದವು.[೧೦೭] ಆಡಳಿತದ ಅನುಕೂಲಕ್ಕಾಗಿ ಬ್ರಿಟಿಷರು ನಿರಂತರವಾಗಿ ತಾಲೂಕು ಮತ್ತು ಜಿಲ್ಲಾ ಕೇಂದ್ರಗಳನ್ನು ರಚಿಸುವುದು ಮತ್ತು ಬದಲಾಯಿಸುವ ಪ್ರಕ್ರಿಯೆಯು ಇಲ್ಲಿ ನಡೆದಿದೆ.

ಬಾಗಲಕೋಟೆ, ಬಾದಾಮಿ ಹಾಗೂ ಹುನಗುಂದ ತಾಲೂಕುಗಳು ೧೮೧೮ರಿಂದ ೧೮೩೬ರ ವರೆಗೆ ಧಾರವಾಡ ಕಲೆಕ್ಟರೇಟಿನ ಅಧೀನದಲ್ಲಿದ್ದವಾದರೂ ೧೮೩೬ರಲ್ಲಿ ಹೊಸದಾಗಿ ಬೆಳಗಾವಿ ಜಿಲ್ಲೆ ರೂಪಿತಗೊಂಡಾಗ ಅದಕ್ಕೆ ವರ್ಗಾಯಿಸಲ್ಪಟ್ಟವು. ಚಿಂಚಲಿಯ ಗೋವಿಂದರಾವ್ ಪಟವರ್ಧನನು ೧೮೪೯-೫೦ರಲ್ಲಿ ಗತಿಸುವುದರೊಂದಿಗೆ ೧೫ ಹಳ್ಳಿಗಳು ನರಗುಂದದ ಭಾಸ್ಕರರಾಯನ ಮರಣದೊಂದಿಗೆ ಇನ್ನೂ ೧೫ ಗ್ರಾಮಗಳು ೧೮೧೮-೧೮೬೪ರ ಅವಧಿಯಲ್ಲಿ ಮೇಲಿನ ಮೂರು ತಾಲೂಕುಗಳಿಗೆ ಸೇರ್ಪಡೆಯಾದವು. ಈ ಎಂಟು ತಾಲೂಕುಗಳಷ್ಟೇ ಅಲ್ಲದೇ ಬಾಗಲಕೋಟೆ ಹಾಗೂ ಬಾದಾಮಿ ತಾಲೂಕುಗಳಿಗೆ ಕ್ರಮವಾಗಿ ಸೇರಿದ ಬೀಳಗಿ ಹಾಗೂ ಕೆರೂರು ಉಪ ತಾಲೂಕುಗಳಿದ್ದವು.[೧೦೮] ಇವತ್ತಿಗೂ ಈ ಪ್ರದೇಶಗಳು ಹಾಗೆ ಮುಂದುವರೆದಿವೆ.

ಬೆಳಗಾವಿ ಕಲೆಕ್ಟರೇಟ್‌ನಲ್ಲಿ ಕಲಾದಗಿಯು ಒಂದು ಪ್ರಮುಖ ಆಡಳಿತದ ವಿಭಾಗವಾಗಿತ್ತು. ಬ್ರಿಟಿಷ್ ಸರಕಾರದ ಆರಂಭದಲ್ಲಿ ದಕ್ಷಿಣ ಮಹಾರಾಷ್ಟ್ರದ ಜಹಗೀರದಾರರು, ಸರಕಾರದ

ನೌಕರಿಗೆ ಇಟ್ಟ ರಾಹುತರು ಕಲಾದಗಿಯಲ್ಲಿ ಇರುತ್ತಿದ್ದರು. ಕ್ರಿ.ಶ.೧೮೫೭ರ ದಂಗೆಯಲ್ಲಿ ಸುರಪುರದ ನಾಲ್ವಡಿ ವೆಂಕಟಪ್ಪ ನಾಯಕನನ್ನು ಬ್ರಿಟಿಷರ ವಿರುದ್ಧ ದಂಗೆಯಲ್ಲಿ ತೊಡಗಿದ್ದಾನೆಂದು ಸುದ್ದಿ ತಿಳಿದು ಬ್ರಿಟಿಷ್ ಗವರ್ನರ್ ಜನರಲ್‌ನ್ನು ಆರು ತೋಪುಗಳನ್ನು ಹದಿನೈದು ನೂರು(೧೫೦೦) ಸೈನಿಕರನ್ನು ಕಲಾದಗಿಯಿಂದ ತರಿಸುವ ವ್ಯವಸ್ಥೆ ಮಾಡಿಸಿದ್ದನು.[೧೯] ಈ ಸಮಯದಲ್ಲಿ ಕಲಾದಗಿಯು ಸೈನಿಕ ನೆಲೆಯಾಗಿ ರಚನೆಗೊಂಡಿತು. ೧೮೫೭ರ ಹಲಗಲಿ ಬಂಡಾಯದಲ್ಲಿಯೂ ಸಹ ಕಲಾದಗಿಯ ಸೈನಿಕ ನೆಲೆ(ಕಂಟೋನ್ಮೆಂಟ್)ಯಿಂದ ಕಾರ್ಯಾಚರಣೆ ಮಾಡಿ ಬ್ರಿಟಿಷರು ಹಲಗಲಿ ಬೇಡರ ಬಂಡಾಯ ಅಡಗಿಸಿದರು. ಜೆ.ಎಸ್.ಫ್ಲೀಟು ಲಾವಣಿಯಲ್ಲಿ ಹಲಗಲಿ ಬಂಡಾಯದ ಕಥನವನ್ನು ಸಂಗ್ರಹಿಸಿದ್ದಾರೆ.

ಬ್ರಿಟಿಷ್ ಸಾಮ್ರಾಜ್ಯದ ದಕ್ಷಿಣ ಭಾಗದ ಕಂದಾಯ ಆಯುಕ್ತನಾದ ಡಬ್ಲು, ಹಾರ್ಟನ್ ಸಲಹೆಯಂತೆ ಆಡಳಿತದ ಅನುಕೂಲಕ್ಕಾಗಿ ಇಂಡಿ, ಹಿಪ್ಪರಗಿ, ವಿಜಾಪುರ, ಮನಗೂಳಿ, ಮುದ್ದೇಬಿಹಾಳ, ಬಾಗಲಕೋಟೆ, ಬಾದಾಮಿ ಹಾಗೂ ಹುನಗುಂದಗಳನ್ನೊಳಗೊಂಡ ಕಲಾದಗಿ ಕಲೆಕ್ಟರೇಟ್(ಜಿಲ್ಲಾ ಕೇಂದ್ರ) ೧೮೬೪ರ ಡಿಸೆಂಬರ್ ಒಂದರಂದು ಸ್ಥಾಪಿಸಲಾಯಿತು. ಬೀಳಗಿ ಉಪ ತಾಲೂಕಾಗಿ ಮುಂದುವರೆದು ಕೆರೂರು ಬಾದಾಮಿ ತಾಲೂಕಿನಲ್ಲಿ ವಿಲೀನಗೊಂಡಿತು. ಹಿಪ್ಪರಗಿ ಹಾಗೂ ಮನಗೊಳಿ ತಾಲೂಕುಗಳ ಕೇಂದ್ರಗಳು ಸಿಂದಗಿ ಹಾಗೂ ಬಾಗೇವಾಡಿಗಳಿಗೆ ೧೮೬೮ರಲ್ಲಿ ವರ್ಗಾವಣೆಗೊಂಡವು.[೧೧೦] ಕ್ರಿ.ಶ.೧೮೮೧ರ ದಾಖಲೆಯಂತೆ ಕಲಾದಗಿ ಜಿಲ್ಲೆಯು ೮ ತಾಲೂಕುಗಳು ೧೩೩೪ ಗ್ರಾಮಗಳು ಹಾಗೂ ೫೭೫೭ ಚ.ಕಿ.ಮೀ.ವಿಸ್ತೀರ್ಣವನ್ನು ಹೊಂದಿತು ಎಂದು ಗುರುತಿಸಲಾಗಿದೆ.[೧೧೧] ಮುಂದೆ ಜಿಲ್ಲಾ ಕೇಂದ್ರ ವಿಜಯಪುರಕ್ಕೆ ವರ್ಗಾಯಿಸಲಾಯಿತು.

ಬ್ರಿಟಿಷ್ ಅಧಿಕಾರಿ ಕರ್ನಲ್ ಸೆಂಟ್ ಕ್ಲಾರ್ ವಿಲ್ಕಿನ್ಸನು ಆಡಳಿತ ದೃಷ್ಟಿಯಿಂದ ಕಲಾದಗಿಗಿಂತ ವಿಜಾಪುರವೇ ಜಿಲ್ಲಾ ಕೇಂದ್ರವಾಗಲು ಹೆಚ್ಚು ಯೋಗ್ಯವೆಂಬ ಸಲಹೆಯನ್ನು ೧೮೭೬ರಷ್ಟು ಹಿಂದೆಯೇ ಸೂಚಿಸಿದ್ದು, ಅಂಗೀಕರಿಸಲ್ಪಟ್ಟಿದ್ದರೂ ೧೮೭೭ರ ಭೀಕರ ಬರಗಾಲದಿಂದಾಗಿ ೧೮೭೯ರ ವರೆಗೆ ಬರಪರಿಹಾರ ಕಾರ್ಯ ಮುಂದುವರಿಯಿತು. ಇದರಿಂದಾಗಿ ಜಿಲ್ಲಾ ಕೇಂದ್ರದ ಬದಲಾವಣೆ ಮುಂದೂಡಲ್ಪಟ್ಟಿತ್ತು. ೧೮೭೯-೮೫ರ ಅವಧಿಯಲ್ಲಿ ವಿಜಾಪುರದಲ್ಲಿದ್ದ ಪ್ರಾಚೀನ ಕಟ್ಟಡಗಳ ದುರಸ್ತಿ ಕಾರ್ಯ ನಡೆದು ಅಂತಿಮವಾಗಿ ೧೮೮೫ರಲ್ಲಿ ಕಲಾದಗಿಯನ್ನು ವಿಜಾಪುರಕ್ಕೆ ಜಿಲ್ಲಾ ಕೇಂದ್ರವಾಗಿ ವರ್ಗಾಯಿಸಲಾಯಿತು.[೧೧೨] ಇದರ ಗಡಿಯ ವ್ಯಾಪ್ತಿಗೆ ಹೊಂದಿಕೊಂಡು ಉತ್ತರಕ್ಕೆ ಭೀಮಾನದಿಯಿಂದ ಅಕ್ಕಲಕೋಟೆ ರಾಜ್ಯದ

ಸೊಲ್ಲಾಪುರ ಭಾಗವು. ಪೂರ್ವಕ್ಕೆ ಹೈದರಾಬಾದ್ ನಿಜಾಮ ಸಂಸ್ಥಾನದ ಸಗರ ಜಿಲ್ಲೆಯ ಶರಾಪುರ ಮತ್ತು ರಾಯಚೂರು, ದಕ್ಷಿಣಕ್ಕೆ ರಾಮದುರ್ಗ ಸಂಸ್ಥಾನ, ಪಶ್ಚಿಮಕ್ಕೆ ಮುಧೋಳ, ಜಮಖಂಡಿ ಸಂಸ್ಥಾನಗಳು ಹಾಗೂ ಬೆಳಗಾವಿ ಜಿಲ್ಲೆಯ ಉಪವಿಭಾಗ ಅಥಣಿ ಮತ್ತು ಸಾಂಗಲಿ ಸಂಸ್ಥಾನ(ಜತ್, ಕರ್ಜಗಿ, ಮಂಗಳವೇಡ)ಗಳಿದ್ದವು.[೧೧೩] ಕಲಾದಗಿಯಿಂದ ವಿಜಾಪುರ ಜಿಲ್ಲಾ ಕೇಂದ್ರವನ್ನು ವರ್ಗಾಯಿಸುವ ಸಮಯದಲ್ಲಿ ಬ್ರಿಟಿಷರು ಕಲಾದಗಿಯಲ್ಲಿ ನಿರ್ಮಿಸಿದ ಕಟ್ಟಡಗಳನ್ನು ನೆಲಸಮಗೊಳಿಸಿದರು ಎಂಬುದು ಸ್ಥಳೀಯರ ಅಭಿಪ್ರಾಯವಾಗಿದೆ.

ಮುಂಬೈ ವಿಧಾನಸಭೆಯಲ್ಲಿ ಭಾಷಾವಾರು ಪ್ರಾಂತ್ಯ ರಚನೆಯನ್ನು ಒತ್ತಾಯಿಸುವ ಠರಾವನ್ನು ೧೯೪೬ರಲ್ಲಿ ಮಂಡಿಸಲಾಯಿತು. ೧೯೪೭ರ ವೇಳೆಗೆ ಆಯಾ ಸಂಸ್ಥಾನಗಳಲ್ಲಿದ್ದ ಪ್ರಜಾಪರಿಷತ್‌ಗಳು ಸಂಸ್ಥಾನಗಳ ವಿಲೀನೀಕರಣಕ್ಕಾಗಿ ನಡೆಸಿದ ಚಳವಳಿಗಳ ಪರಿಣಾಮವಾಗಿ ಭಾರತ ಗಣರಾಜ್ಯದಲ್ಲಿ ಸಂಸ್ಥಾನಗಳು ವಿಲೀನಗೊಂಡು ಜಮಖಂಡಿ ತಾಲೂಕು, ಮುಧೋಳ ತಾಲೂಕು, ಸಾಂಗಲಿ ಸಂಸ್ಥಾನದ ತೇರದಾಳ, ರಬಕವಿ ಸೇರಿದಂತೆ ೧೩ ಗ್ರಾಮಗಳು ಜಾಂದ್ ಸಂಸ್ಥಾನದ ೧೭ ಗ್ರಾಮಗಳು, ಹಿರಿಯ ಕುರಂದವಾಡ ಸಂಸ್ಥಾನದ ೯ ಹಳ್ಳಿಗಳು, ರಾಮದುರ್ಗ ಸಂಸ್ಥಾನದ ಕೆಲವು ಭಾಗಗಳು ವಿಜಾಪುರ ಜಿಲ್ಲೆಗೆ ಸೇರಿದವು.[೧೧೪] ಹೀಗೆ ಒಟ್ಟುಗೂಡಿದ ವಿಜಾಪುರ ಜಿಲ್ಲೆಯ ಪಂಚನದಿಗಳನ್ನು ಹೊಂದಿ ಅತ್ಯಂತ ದೊಡ್ಡ ಜಿಲ್ಲೆಯಾಗಿ ರಾಜ್ಯದಲ್ಲಿ ಗುರುತಿಸಿಕೊಂಡಿತು. ಮುಂದೆ ಜನಸಂಖ್ಯೆ ಹೆಚ್ಚಳ ಜನರ ಆಡಳಿತದ ದೃಷ್ಟಿಕೋನ ಅನುಕೂಲಕ್ಕಾಗಿ ವಿಜಾಪುರ ಜಿಲ್ಲೆಯನ್ನು ವಿಭಜಿಸಿ ನೂತನ ಬಾಗಲಕೋಟೆ ಜಿಲ್ಲೆಯಾಗಿ ಆಗಸ್ಟ್ ೧೫, ೧೯೯೭ರಂದು ರಚಿಸಲಾಯಿತು. ಈ ಎರಡು ಜಿಲ್ಲೆಗಳ ಮಧ್ಯ ಕೃಷ್ಣಾನದಿ ಗಡಿರೇಖೆಯಾಗಿದೆ. ವಿಜಯಪುರ, ಸಿಂದಗಿ, ಇಂಡಿ, ಬಸವನಬಾಗೇವಾಡಿ ಮತ್ತು ಮುದ್ದೇಬಿಹಾಳ ಸೇರಿಕೊಂಡು ಒಟ್ಟು ೫ ತಾಲೂಕು ಸೇರಿಸಿಕೊಂಡು ವಿಜಯಪುರ ಜಿಲ್ಲೆಯಾಗಿ ಉಳಿಯಿತು. ಹಾಗೇನೇ ಬಾಗಲಕೋಟೆ, ಬಾದಾಮಿ, ಬೀಳಗಿ, ಹುನಗುಂದ, ಮುಧೋಳ ಮತ್ತು ಜಮಖಂಡಿ ತಾಲೂಕುಗಳನ್ನು ಸೇರಿಸಿಕೊಂಡು ಒಟ್ಟು ೬ ತಾಲೂಕುಗಳಿಂದ ನೂತನ ಬಾಗಲಕೋಟೆ ಜಿಲ್ಲೆಯಾಗಿ ರಚಿಸಿಕೊಂಡು ಆಡಳಿತವನ್ನು ಮುಂದುವರೆಸುತ್ತಿದೆ.

**ಕೊನೆ ಟಿಪ್ಪಣಿಗಳು**

೧. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ವಿಜಾಪುರ ಜಿಲ್ಲಾ ಗ್ಯಾಸೆಟಿಯರ್, ಪು.೧೭೦

೨. ಅದೇ, ಪು.೧೭೧

೩. ಶೀಲಾಕಾಂತ ಪತ್ತಾರ(ಪ್ರ.ಸಂ.), ಕೃಷ್ಣಪ್ರಭೆ, ಪು.೯

೪. ಮಲ್ಲಿಕಾರ್ಜುನ ಹುಲಗಬಾಳಿ(ಸಂ), ಬಾಗಲಕೋಟೆ ಜಿಲ್ಲಾ ದರ್ಶನ, ಪು.೧–೬

೫. ಸೌತ್ ಇಂಡಿಯನ್ ಇನಸ್ಕ್ರಿಪಷನ್-1, 74, XVIII-94, XV., ಪು.155

೬. ಸೌತ್ ಇಂಡಿಯನ್ ಇನಸ್ಕ್ರಿಪಷನ್ XI-1, ಪು.166

೭. ಶೀಲಾಕಾಂತ ಪತ್ತಾರ(ಪ್ರಸಂ.), ಪೂರ್ವೋಕ್ತ, ಪು.೧೦

೮. ಅದೇ, ಪು.೧೧

೯. ಗಿರಿಸಾಗರ ಪಿ.ವಾಯ್, ಬಾಗಲಕೋಟೆ ತಾಲೂಕು ದರ್ಶನ, ಪು.೯

೧೦. ಅದೇ, ಪು.೧೧

೧೧. ಶೀಲಾಕಾಂತ ಪತ್ತಾರ(ಪ್ರಸಂ.), ಪೂರ್ವೋಕ್ತ, ಪು.೧೨

೧೨. ಗಿರಿಸಾಗರ ಪಿ.ವಾಯ್, ಪೂರ್ವೋಕ್ತ, ಪು.೯

೧೩. ಅದೇ, ಪು.೭

೧೪. ಷೇಕ್ ಅಲಿ ಬಿ.(ಸಂ), ೧೯೯೭, ಕರ್ನಾಟಕ ಚರಿತ್ರೆ, ಸಂ.೧, ಪು.೯೭

೧೫. ಅದೇ, ಪು.೯೬

೧೬. ವಾಸುದೇವ ಬಡಿಗೇರ(ಸಂ), ೨೦೧೦, ಬಸವನ ಬಾಗೇವಾಡಿ, ಪು.೪

೧೭. ಕಡಕೋಳ ಎಚ್.ಎಂ.(ಸಂ), ೨೦೧೦, ಬಿಜಾಪುರ ಜಿಲ್ಲಾ ಸಂಸ್ಕೃತಿ, ಪು.೩೦

೧೮. ವಿಜಯಕುಮಾರ ಕಟಗಿಹಳ್ಳಿಮಠ(ಪ್ರಸಂ.), ೨೦೧೪, ಬಾಗಲಕೋಟೆ ಜಿಲ್ಲಾ ಸಂಸ್ಕೃತಿ, ಪು.೩೭

೧೯. ಅದೇ, ಪು.೩೮

೨೦. ಅದೇ, ಪು.೩೮

೨೧. ಅದೇ, ಪು.೩೯

೨೨. ಅದೇ, ಪು.೩೯

೨೩. ಅದೇ, ಪು.೪೦

೨೪. ಅದೇ, ಪು.೪೦

೨೫. ಅದೇ, ಪು.೪೦

೨೬. ಅದೇ, ಪು.೪೦-೪೧

೨೭. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೬೪

೨೮. ನರಸಿಂಹಮೂರ್ತಿ ಎ.ವಿ.(ಅನು), ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ, ಸಂ.೩, ಪು.೪೭

೨೯. ವಾಸುದೇವ ಬಡಿಗೇರ(ಸಂ), ಪೂರ್ವೋಕ್ತ, ಪು.೪೭

೩೦. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೬೪

೩೧. ಅದೇ, ಪು.೬೫

೩೨. ಪಂಚಮುಖಿ ರಾ.ಸ್ವಾ., ೨೦೦೮, ಕರ್ನಾಟಕ ಇತಿಹಾಸ, ಸಂ.೧, ಪು.೩೦೧

೩೩. ನಾಗೇಗೌಡ ಎಚ್.ಎಲ್., ೨೦೦೬, ಪ್ರವಾಸಿ ಕಂಡ ಇಂಡಿಯಾ, ಸಂ.೧, ಪು.೧೦೭

೩೪. ಅದೇ, ಪು.೧೦೭

೩೫. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೬೭

೩೬. ಪಂಚಮುಖಿ ರಾ.ಸ್ವಾ., ೨೦೦೮, ಕರ್ನಾಟಕ ಇತಿಹಾಸ, ಸಂ.೧, ಪು.೩೦೧

೩೭. ಶಿವಶಂಕರ ಎಂ.ಎಲ್. ಮತ್ತು ಚನ್ನಬಸಪ್ಪ ಎಸ್.ಪಾಟೀಲ(ಸಂ), ೧೯೯೭, ಕದಂಬ ಅಧ್ಯಯನ, ಪು.೩೫

೩೮. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೬೭

೩೯. ದೇವರಕೊಂಡಾರೆಡ್ಡಿ(ಮು.ಸಂ.), ೨೦೦೬, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯, ಬಾಗಲಕೋಟೆ ಜಿಲ್ಲೆ, ಪು.XXX

೪೦. ಅದೇ, ಪು.XXX

೪೧. ಪಂಚಮುಖಿ ರಾ.ಸ್ವಾ., ೨೦೦೮, ಪೂರ್ವೋಕ್ತ, ಸಂ.೧, ಪು.೧೩೫

೪೨. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೬೭

೪೩. ಅದೇ, ಪು.೮೨

೪೪. ಅದೇ, ಪು.೮೨

೪೫. ಅದೇ, ಪು.೮೨

೪೬. ಕನ್ನಡ ರಿಸರ್ಚ್ ರಿಪೋರ್ಟ್(ಕೆ.ಆರ್.ಆಯ್), ೧೯೪೨-೪೩(ಲೋಕಾಪುರ)

೪೭. ವಿಜಾಪುರ ಜಿಲ್ಲಾ ಶಾಸನ ಸೂಚಿ, ಲೋಕಾಪುರ, ಮುಧೋಳ(ತಾ)

೪೮. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೮೩

೪೯. ಅದೇ, ಪು.೮೪

೫೦. ಅದೇ, ಪು.೮೫

೫೧. ಅದೇ, ಪು.೮೭

೫೨. ಅದೇ, ಪು.೮೯

೫೩. ಅದೇ, ಪು.೮೯

೫೪. ಅದೇ, ಪು.೯೦

೫೫. ಅದೇ, ಪು.೯೪

೫೬. ಅದೇ, ಪು.೯೬

೫೭. ಅದೇ, ಪು.೯೯

೫೮. ಕೊಪ್ಪ ಎಸ್.ಕೆ., ೧೯೯೦, ತರ್ದವಾಡಿ ನಾಡು, ಪು.೬೪

೫೯. ಅದೇ, ಪು.೯೯

೬೦. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೧೦೭

೬೧ ಅದೇ, ಪು.೧೦೭

೬೨. ದೇವರಕೊಂಡಾರೆಡ್ಡಿ(ಮು.ಸಂ.), ಪೂರ್ವೋಕ್ತ, ಪು.xiii

೬೩. ಅದೇ, ಪು.xiii

೬೪. ಅದೇ, ಬಾದಾಮಿ ೨೦ ಕ್ರಿ.ಶ.೧೧೭೬

೬೫. ಅದೇ, ಹುನಗುಂದ ೧೧೯

೬೬. ಅದೇ, ಜಮಖಂಡಿ ೫

೬೭. ಅದೇ, ಪು.xivi

೬೮. ಅದೇ, ಮುಧೋಳ ೧೦

೬೯. ಅದೇ, ಜಮಖಂಡಿ ೧

೭೦. ಅದೇ, ಮುಧೋಳ ೮

೭೧. ಅದೇ, ಬಾಗಲಕೋಟೆ ೪೩

೭೨. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೧೨೧

೭೩. ಷೇಕ್ ಅಲಿ ಬಿ., ಚರಿತ್ರೆ ಸಂಪುಟ ೪, ಪು.೨೮

೭೪. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೧೨೪

೭೫. ಅದೇ, ಪು.೧೨೫

೭೬. ಅದೇ, ಪು.೧೪೬

೭೭. ಕೃಷ್ಣ ಕೋಲಾರಕುಲಕರ್ಣಿ ಮತ್ತು ಮೆಹಬೂಬುರ್ ರಹಮಾನ ಮದನಿ(ಅನು) ೨೦೧೪, ಗುಲದಸ್ತಾಯೆ ಬಿಜಾಪುರ, ಪು.೧೭೦-೧೭೧

೭೮. ಅದೇ, ಪು.೧೮೧

೭೯. ಮುನಿಸ್ವಾಮಿ ಆರ್.(ಮು.ಸಂ), ಪೂರ್ವೋಕ್ತ, ಪು.೧೬೦

೮೦. ಅದೇ, ಪು.೧೬೧

೮೧. ಅದೇ, ಪು.೧೬೨

೮೨. Abdul Gani Imaratwale, 2007, History of Bijapur Subh, Pp.262-265

೮೩. ಮುನಿಸ್ವಾಮಿ ಆರ್.(ಮು.ಸಂ.), ಪೂರ್ವೋಕ್ತ, ಪು.೧೬೩

೮೪. ಅದೇ, ಪು.೧೬೩

೮೫. ಅದೇ, ಪು.೧೬೩

೮೬. ಅದೇ, ಪು.೧೬೩-೧೬೪

೮೭. James M.Campbell(Ed), 1884, Gazettery of the Bombay Presidency, Vol-XXXIII, Pp.448-449

೮೮. ಸಂಗಮೇಶ ಕಲ್ಯಾಣಿ, ೨೦೧೦, ಘೋರ್ಪಡೆ ಘರಾಣಾ, ಪು.೫

೮೯. ಮುನಿಸ್ವಾಮಿ ಆರ್.(ಮು.ಸಂ), ಪೂರ್ವೋಕ್ತ, ಪು.೧೬೫

೯೦. ಅದೇ, ಪು.೧೬೫

೯೧. ಅದೇ, ಪು.೧೬೫

೯೨. ಅದೇ, ಪು.೧೬೫-೧೬೬

೯೩. ಅದೇ, ಪು.೧೬೬

೯೪. ಮಟೋಳಿ ಎಸ್.ಬಿ., ೨೦೦೮, ಜಮಖಂಡಿ ಇತಿಹಾಸ ದರ್ಪಣ, ಪು.೨೮

೯೫. ಅದೇ, ಪು.೨೮-೩೦

೯೬. ಅದೇ, ಪು.೩೧-೩೨

೯೭. ಅದೇ, ಪು.೩೨

೯೮. ಅದೇ, ಪು.೩೨

೯೯. ಕರ್ನಾಟಕ ಪರಂಪರೆ ಸಂ.೨, ಮಧ್ಯಕಾಲ ಮತ್ತು ಆಧುನಿಕ ಕಾಲ, ೨೦೦೬, ಪು.೩೧೩

೧೦೦. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡ ಅರುಣೋದಯ, ಪು.೭

೧೦೧. ಕರ್ನಾಟಕ ಪರಂಪರೆ, ಸಂ.೨, ಪೂರ್ವೋಕ್ತ, ಪು.೩೧೫

೧೦೨. ನರಸಿಂಹಮೂರ್ತಿ ಎ.ವಿ.(ಅನು), ಪೂರ್ವೋಕ್ತ, ಪು.೩೦

೧೦೩. ವೆಂಕಟ ರಂಗೋ ಕಟ್ಟಿ(ಅನು) ಗ್ಯಾಸೆಟಿಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಪು.೫೦

೧೦೪. ಮುನಿಸ್ವಾಮಿ ಆರ್.(ಮು.ಸಂ), ಪೂರ್ವೋಕ್ತ, ಪು.೧೭೦

೧೦೫. ಅದೇ, ಪು.೧೭೦

೧೦೬.ಅದೇ, ಪು.೧೭೧

೧೦೭.ಅದೇ, ಪು.೧೭೧

೧೦೮.ಅದೇ, ಪು.೧೭೧

೧೦೯.ಷೇಕ್ ಅಲಿ ಬಿ.(ಪ್ರ.ಸಂ), ಜೋಸೆಫ್ ಸೆಬಾಸ್ಟಿಯನ್(ಸಂ), ೨೦೧೨, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ ೬, ಪು.೬೮

೧೧೦. ಮುನಿಸ್ವಾಮಿ ಆರ್.(ಮು.ಸಂ), ಪೂರ್ವೋಕ್ತ, ಪು.೧೭೧

೧೧೧. Abdul Gani Imaratwale, 2007, ಪೂರ್ವೋಕ್ತ, Pp.330

೧೧೨. ಮುನಿಸ್ವಾಮಿ ಆರ್.(ಮು.ಸಂ), ಪೂರ್ವೋಕ್ತ, ಪು.೧೭೧

೧೧೩. ಸೂರ್ಯನಾಥ ಕಾಮತ್, ಕರ್ನಾಟಕ ಏಕೀಕರಣ ಇತಿಹಾಸ, ಪು.೪೩

೧೧೪. ಮಂಜುನಾಥ ಪಾಟೀಲ, ೨೦೧೬, ವಿಜಯಪುರ ಜಿಲ್ಲೆಯ ರಕ್ಷಣಾ ವಾಸ್ತುಶಿಲ್ಪ, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು.೭೨.

# ಅಧ್ಯಾಯ: ಮೂರು

## ವಸಾಹತು ಕಲೆ ಮತ್ತು ವಾಸ್ತುಶಿಲ್ಪ

೩.೧. ವಸಾಹತುಶಾಹಿ ಪದ ನಿಷ್ಪತ್ತಿ
೩.೨. ಭಾರತದಲ್ಲಿ ವಸಾಹತುಶಾಹಿ ಆಗಮನ
೩.೩. ವಸಾಹತು ವಾಸ್ತುಶೈಲಿಗಳು ಹಾಗೂ ಲಕ್ಷಣಗಳು
೩.೪. ಐರೋಪ್ಯ ವಾಸ್ತುಶಿಲ್ಪದ ಪ್ರಭಾವ
೩.೫. ಪಾಶ್ಚಾತ್ಯ ಕಲಾ ಪ್ರಕಾರಗಳು
೩.೬. ತಂತ್ರಜ್ಞರು ಮತ್ತು ಶ್ರಮಿಕರು

# ಅಧ್ಯಾಯ ಮೂರು

# ವಸಾಹತು ಕಲೆ ಮತ್ತು ವಾಸ್ತುಶಿಲ್ಪ

## ೩.೧. ವಸಾಹತುಶಾಹಿ ಪದ ನಿಷ್ಪತ್ತಿ

ಕನ್ನಡದ ವಸಾಹತುಶಾಹಿ ಎಂಬ ಪದವು ಇಂಗ್ಲಿಷನ Colonialism ಗೆ ಸಮಾನವಾದುದು. Colonialism ಎಂಬುದು Colony ಶಬ್ಧ ಸ್ವರೂಪದೊಂದಿಗೆ ಸಂಬಂಧವನ್ನು ಹೊಂದಿದೆ. (Colonialism is Realiting to a colony) Colonialism ಎನ್ನುವುದರಲ್ಲಿ ಎರಡು ಪ್ರತ್ಯೇಕ ಪದಗಳಿವೆ. ಒಂದು colony ಇನ್ನೊಂದು ism. colony ಎಂದರೆ ವಸಾಹತು. ಅಂದರೆ ವ್ಯಾಪಾರದ ಮಳಿಗೆ, ವಲಸೆ ನಗರ, ವಲಸೆ ಬಂದವರ ಪ್ರದೇಶ, ವಿದೇಶ ಜನರ ಗುಂಪು ಇತ್ಯಾದಿಯಾಗಿ ನಿಘಂಟು ಅರ್ಥಗಳಿವೆ. ಇನ್ನೂ ಮುಂದುವರೆದು ಹೀನಾಯ ಪ್ರಜ್ಞೆಯಿಂದ ಹಿಂದುಳಿದ ಅಥವಾ ದುರ್ಬಲ ಜನಾಂಗವನ್ನು ಶೋಷಿಸುವ ಅತ್ಯಂತ ದೊಡ್ಡ ಶಕ್ತಿಯೆಂದು ಅರ್ಥೈಸಲಾಗಿದೆ. "The colonial system or principle now frq used is the derogatary sense of an alleged Policy of Explotation of backword of weak peoples by a large power.[೧] colony ಎನ್ನುವುದು ಯಾವಾಗಲೂ ಪರಕೀಯವಾಗಿರುತ್ತದೆ ಮತ್ತು ಹೊರದೇಶಕ್ಕೆ ಅಥವಾ ಪರಿಚಯವಲ್ಲದ ಇನ್ನೊಂದು ಸ್ಥಳಕ್ಕೆ ಹೋಗಿ ಒಕ್ಕಲು ಮಾಡಿದ ನೆಲೆಯಾಗಿರುತ್ತದೆ. ism ಎಂದರೆ ನಿರ್ದಿಷ್ಟ ತತ್ವಸಿದ್ದಾಂತ ಎಂದು ಹೇಳಲಾಗಿದೆ. ism ಯಾವಾಗಲೂ ಒಂದು ಘಟನೆ ಮತ್ತು ಸಾಮಾಜಿಕ ಸಂಗತಿಯೊಂದರ ಮೂಲಕ ಹುಟ್ಟಿಕೊಳ್ಳುತ್ತದೆ. ಮುಖ್ಯವಾಗಿ ism ತನ್ನಷ್ಟಕ್ಕೆ ತಾನು ಸ್ವತಂತ್ರವಾದುದಲ್ಲ. ಅದಕ್ಕೊಂದು ನಿರ್ದಿಷ್ಟ ಕಾರಣವಿರಬೇಕು. ಆ ಕಾರಣವೇ ಕ್ರಮೇಣವಾಗಿ ಸಮಾಜದಲ್ಲಿ ಒಂದು ದೊಡ್ಡ ಸಮಸ್ಯೆಯಾಗಿ, ಐಡಿಯಾಲಜಿಯಾಗಿ ರೂಪುಗೊಳ್ಳುತ್ತದೆ. Colonialism ರೂಪುಗೊಂಡಿದ್ದು[೨] ಕೂಡಾ ಇಂತಹ ಕ್ರಮದಲ್ಲಿ ಎಂದು ಹೇಳಬಹುದು.

## ವಸಾಹತು ನೀತಿ

ಒಂದು ದೇಶ ಇನ್ನೊಂದು ದೇಶವನ್ನು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ವಶಪಡಿಸಿಕೊಂಡು ಶೋಷಿಸುವ ಅಥವಾ ದಬ್ಬಾಳಿಕೆಯ ಆಡಳಿತ ನಡೆಸುವ ಒಂದು ವ್ಯವಸ್ಥೆಗೆ ವಸಾಹತು ನೀತಿ ಎಂದು ಕರೆಯುತ್ತಾರೆ. ಆರ್ಥಿಕ ಲಾಭದೃಷ್ಟಿಯಿಂದ ವಲಸೆ ಬಂದ ಜನರು ವಸಾಹತುಗಳನ್ನು ಸ್ಥಾಪಿಸುವ ಮೂಲಕ ವಸಾಹತುಶಾಹಿ ಆಡಳಿತ ವ್ಯವಸ್ಥೆಯನ್ನು ರೂಪಿಸಿ ಶೋಷಣೆಗೆ ಕಾರಣರಾದವರು.[೩] ೨೦೦ ವರ್ಷಗಳ ಬ್ರಿಟಿಷ ವಸಾಹತುಶಾಹಿ ಆಳ್ವಿಕೆಯಲ್ಲಿ (೧೭೫೭-೧೯೪೭) ಭಾರತ ಸಾಮಂತ ವ್ಯವಸ್ಥೆಯಿಂದ ಮುಕ್ತವಾಯಿತಲ್ಲದೆ ಕಾನೂನು ಮತ್ತು ನ್ಯಾಯ ವ್ಯವಸ್ಥೆ, ಪಾಶ್ಚಾತ್ಯ ಲೌಕಿಕ ಶಿಕ್ಷಣ, ರಾಜಕೀಯ ಚಿಂತನೆಗಳು, ವೈಜ್ಞಾನಿಕ ಅರಿವು, ವೈದ್ಯಕೀಯ, ವ್ಯವಸ್ಥೆ, ಆಧುನಿಕ ಸಾರಿಗೆ ಸಂಪರ್ಕ ಇತ್ಯಾದಿಗಳ ಲಾಭವನ್ನು ಪಡೆಯಿತೆಂದು ಗುರುತಿಸಬಹುದು.

ವಸಾಹತುಶಾಹಿಗಳು ಮುಖ್ಯವಾಗಿ ತಮ್ಮ ಆರ್ಥಿಕ ಲಾಭ ಮತ್ತು ಆ ಪ್ರದೇಶಗಳ ಮೇಲೆ ರಾಜಕೀಯ ಹಿಡಿತವನ್ನು ಸಾಧಿಸಿ ಪ್ರಭುತ್ವವನ್ನು ಸ್ಥಾಪಿಸುವುದು ಮುಖ್ಯ ಉದ್ದೇಶವಾಗಿತ್ತು. ಭಾರತದಲ್ಲಿ ಹೆಚ್ಚಾಗಿ ಜಾತಿವ್ಯವಸ್ಥೆ, ಅಸಮಾನತೆ, ಲಿಂಗತಾರತಮ್ಯ, ಕೆಲವರಿಗೆ ಮಾತ್ರ ಶೈಕ್ಷಣಿಕ ನೀತಿ, ಇತ್ಯಾದಿ ಅಮಾನವೀಯ ಚಟುವಟಿಕೆಗಳನ್ನು ಬ್ರಿಟಿಷರು ಮುಂದೆ ಇಟ್ಟುಕೊಂಡು, ಈ ಎಲ್ಲಾ ಅನಿಷ್ಟಗಳನ್ನು ಹೋಗಲಾಡಿಸುವ ನೆಪದಲ್ಲಿ ತಮ್ಮ ಸ್ಥಾನವನ್ನು ಭಾರತದಲ್ಲಿ ಭದ್ರಗೊಳಿಸಿದರು. ಇದರ ಜೊತೆಗೆ ದೇಶದ ಆರ್ಥಿಕ ಹಾಗೂ ಅಮೂಲ್ಯ ಸಂಪತ್ತು ಹೊರ ದೇಶಕ್ಕೆ ಕೊಳ್ಳೆ ಹೊಡೆಯುವ ಹಾಗೂ ರಫ್ತು ಮಾಡುವ ಪ್ರಕ್ರಿಯೆ ಸಹ ನಿರಂತರವಾಗಿಯೇ ನಡೆಯುತ್ತಿತ್ತು. ಕ್ರೈಸ್ತ ಮಿಶನರಿಗಳಾದ ಬಾಸೆಲ್ ಮಿಸೆನ್‌ನಂತಹ ಸಂಸ್ಥೆಗಳು ಶೈಕ್ಷಣಿಕ, ವೈದ್ಯಕೀಯ ಹಾಗೂ ಧಾರ್ಮಿಕ ಸಂಸ್ಥೆಗಳ ಮೂಲಕ ಭಾರತದಲ್ಲಿ ಜನ ಸಮುದಾಯಗಳ ಸೇವೆಯನ್ನು ಆರಂಭಿಸಿದರು. ಇದರಿಂದ ಕ್ಷಿಪ್ರಗತಿಯಲ್ಲಿ ಕ್ರೈಸ್ತಮತ ಜನಮನ್ನಣೆಯನ್ನು ಪಡೆದುಕೊಂಡಿತು. ಸ್ಥಳೀಯವಾಗಿರುವ ಭಾಷೆಗಳನ್ನು ಬ್ರಿಟಿಷರು ಕಲಿಯಲಾರಂಭಿಸಿದರು. ಹಾಗಾಗಿ ವಸಾಹತು ನೀತಿಯು ಭಾರತದಲ್ಲಿ ಬಹು ಬೇಗನೆ ವ್ಯಾಪಿಸಿತು ಎಂದು ಗುರುತಿಸ ಬಹುದು.

## ೩.೨. ಭಾರತದಲ್ಲಿ ವಸಾಹತುಶಾಹಿ(ಆರಂಭ)ಆಗಮನ

ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ಕಾಲೋನಿ ಸ್ವರೂಪದ ಚಟುವಟಿಕೆಗಳು ಆರಂಭ ವಾಗಿದ್ದೆ ಯುರೋಪಿಯನ್ ವ್ಯಾಪಾರಿಗಳ ಆಗಮನದಿಂದ ಎಂದು ಸ್ಪಷ್ಟವಾಗಿ ಗುರುತಿಸಲಾಗಿದೆ. ಮಹಮ್ಮದ್ ಘೋರಿಯಿಂದ ನಡೆದ ದಾಳಿಗಳು ಈ ಬಗೆಯ ಕಾಲೋನಿಗಳನ್ನು

ಎಲ್ಲಿಯೂ ಸ್ಥಾಪಿಸಲಿಲ್ಲ. ಯಾಕೆಂದರೆ ವಸಾಹತುಶಾಹಿಗೆ ಇರುವ ಆರ್ಥಿಕ ಪ್ರಣಾಳಿಕೆ ಅದಕ್ಕಿರಲಿಲ್ಲ ಮತ್ತು ಭಾರತೀಯ ಸಮಾಜದೊಳಗೆ ಅದು ಹಸ್ತಕ್ಷೇಪವನ್ನು ಮಾಡಲು ಪ್ರಯತ್ನಿಸಲಿಲ್ಲ. ಭಾರತ ಇಂಗ್ಲೆಂಡಿನೊಡನೆ ಹೊಂದಿದ ಸಂಪರ್ಕಕ್ಕಿರುವಷ್ಟು ಮೂಲಭೂತ ಪ್ರಾಮುಖ್ಯತೆ ಕೂಡಾ ಇದಕ್ಕಿದ್ದಿರಲಿಲ್ಲ. ಹಾಗಾಗಿ ಪರಕೀಯ ಕಾಲೋನಿಗಳು ಬಲವಾಗಿ ಬೇರೂರಿದ್ದು ಮತ್ತು ಜೀವಂತಿಕೆ ಪಡೆದದ್ದು ಯುರೋಪಿಯನ್ ಕಂಪನಿಗಳಿಂದ. ಭಾರತದಲ್ಲಿ ಈ ತರಹದ ಕಾಲೋನಿಗಳನ್ನು ಸ್ಥಾಪಿಸಲು ಡಚ್ಚ, ಪೋರ್ಚಗೀಸ್, ಫ್ರೇಂಚ್ ಮತ್ತು ಇಂಗ್ಲೀಷರ ಮಧ್ಯ ನಡೆದ ಸ್ಪರ್ಧೆಯಲ್ಲಿ ಅಂತಿಮವಾಗಿ ಗೆಲುವು ಸಾಧಿಸಿದ್ದು ಇಂಗ್ಲೇಂಡಿನ ಈಸ್ಟ್ ಇಂಡಿಯಾ ಕಂಪನಿ ಎಂಬುದು ದಾಖಲಾಗಿದೆ. ಕೇವಲ ವ್ಯಾಪಾರ ಹೊಟ್ಟೆ ತುಂಬಿಸಿ ಕೊಳ್ಳಲು ಬಂದ ಈ ಕಾಲೋನಿಗಳು ಕ್ರಮೇಣ ಭಾರತದ ರಾಜಕೀಯ ಲೋಕದೊಳಗೆ ಹಸ್ತಕ್ಷೇಪವನ್ನು ಮಾಡಿ ಇಲ್ಲಿನ ಸಾಮಾಜಿಕ ರಚನೆಯನ್ನು ಬದಲಾಯಿಸಿದವು ಎಂದು ಹೇಳಬಹುದು. ಆಗ ಅವು ಬರೀ ಬೇಡಿಕೊಳ್ಳುವ ಭಿಕ್ಷುಕರಾಗಲಿಲ್ಲ, ಸಂಬಳ ನೀಡುವ ಧಣಿಗಳಾದವು. ಇಲ್ಲಿಂದಲೇ ಕಾಲೋನಿ ದೊಡ್ಡ ಸಾಮ್ರಾಜ್ಯಶಾಹಿ ಶಕ್ತಿಯಾಗಿ ರೂಪುಗೊಂಡಿತು. ಮುಂದೆ ಅದು ತನ್ನ ವಂಶವಾಹಿ ಆಳ್ವಿಕೆಗೆ ಮತ್ತು ಭದ್ರವಾಗಿ ನೆಲೆಯಾಗಿರುವುದಕ್ಕೆ ವ್ಯಾಪಾರಿ ತಂತ್ರದ ಒಂದು ಅಜೆಂಡಾವನ್ನು ರೂಪಿಸಿಕೊಂಡಿತು.[೪] ಆ ಅಜೆಂಡಾವೆ ವಸಾಹತು ಶಾಹಿ, ಸಮಕಾಲೀನ ಭಾರತದಲ್ಲಿ ವಸಾಹತುಶಾಹಿ ಒಂದು ಸಾಂಸ್ಕೃತಿಕ ವಾಗ್ವಾದವಾಗಿ ಬೆಳೆಯುವುದಕ್ಕೆ ಈ ಅಜೆಂಡಾವೆ ಮುಖ್ಯ ಕಾರಣವಾಯಿತು.

ಭಾರತದಲ್ಲಿ ವ್ಯಾಪಾರಿ ಕಾಲೋನಿಯೊಂದನ್ನು ಸ್ಥಾಪಿಸಲು ಬಂದ ಕಂಪನಿಗಳು ಕೇವಲ ವ್ಯಾಪಾರಿ ಏಜನ್ಸಿಗಳಾಗಿ ಉಳಿಯದೇ ಸಾಮ್ರಾಜ್ಯಶಾಹಿಗಳಾಗಿ ಮೆರೆದಿದ್ದು ಜನತೆಯ ಸಾಮಾಜಿಕ ದೌರ್ಬಲ್ಯದ ಅಡಿಪಾಯದ ಮೇಲೆಯೇ ವಸಾಹತುಶಾಹಿಯ ಚಕ್ರಾಧಿಪತ್ಯ ಉಪಕಾರ ಮತ್ತು ಕಲ್ಯಾಣದಿಂದ ಶೋಷಣೆಯ ರೂಪಕ್ಕೆ ತಿರುಗುವುದೇ ಇಂತಹ ದೌರ್ಬಲ್ಯಗಳಿಂದ ಎಂದು ಹೇಳಬಹುದು. ಶೋಷಣೆ, ಹಿಂಸೆ ಎನ್ನುವುದು ಕೇವಲ ಅಧಿಕಾರದ ನೆಲೆಯಿಂದ ಹುಟ್ಟಿಕೊಳ್ಳುವುದಿಲ್ಲ. ಇಂತಹ ಅಧಿಕಾರ ಸ್ಥಾಪಿಸಲು ಹೊರಟ ಶೋಷಣೆಗೆ ಬಲಿಯಾಗಲು ಒಂದು ದುರ್ಬಲ ವರ್ಗವಿರಬೇಕು. ಯಾವಾಗ ಈ ವರ್ಗ ತನ್ನ ಪ್ರತಿರೋದವನ್ನು ಅಭಿವ್ಯಕ್ತಿಸುತ್ತಿದೆಯೋ ಆಗ ಮಾತ್ರ ಶೋಷಣೆ ಅನುಮಾನಾಸ್ಪಾದ ರೀತಿಯಲ್ಲಿ ಪಲಾಯನ ಮಾಡುತ್ತದೆ. ಆದರೆ ಅದು ಸಾಧ್ಯವಾಗದಿದ್ದಾಗ ದುರ್ಬಲತೆಯ ಮೇಲೆ ಶೋಷಣೆ ತನ್ನ ಚರಿತ್ರೆಯ ಗೋಪುರವನ್ನು ಕಟ್ಟಿಕೊಳ್ಳುತ್ತದೆ. ಆಳುವ ವರ್ಗದ ಶಕ್ತಿ ಸಹಜವಾಗಿ ಇಂಥಲ್ಲಿ ಬಹುರೂಪಿಯಾಗಿರುತ್ತದೆ. ಆಗ ಅದು ಸ್ಥಳೀಯ ಸಮಾಜವನ್ನು ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕವಾಗಿ ನಿಯಂತ್ರಿಸಲು ಪ್ರಯತ್ನಿಸುತ್ತದೆ. ಕೇವಲ

ಒಂದು ಕಾಲೋನಿ ಇಡೀ ಭಾರತ ಉಪಖಂಡವನ್ನೇ ಆಳುವ ಶಕ್ತಿಯಾಗಿ ರೂಪಗೊಂಡಿದ್ದು ಚರಿತ್ರೆಯ ಈ ಬಗೆಯ ರಚನೆಯಿಂದ ಎಂಬುದು ಗುರುತಿಸಲಾಗಿದೆ. ಇದಕ್ಕೆ ಒಂದು ಗ್ರಾಮದ ರಾಚನಿಕ ಉದಾಹರಣೆಯನ್ನು ತೆಗೆದುಕೊಳ್ಳುವುದಾದರೆ ಅಲ್ಲಿ ಅತ್ಯಂತ ಮುಖ್ಯವಾದ ಅಧಿಕಾರ ಶಕ್ತಿ ರೂಪುಗೊಳ್ಳುವುದೇ ಬಲಶಾಲಿಯಾದಂತಹ ಕಾಲೋನಿಯೊಂದರಿಂದ ಎಂದು ಹೇಳಬಹುದು.[೫] ಹೀಗೆ ರೂಪ ತಾಳಿದ ಅಧಿಕಾರ ಮೊದಲು ಪ್ರಯೋಗಗೊಳ್ಳುವುದು ಸಾಮಾಜಿಕ ಮತ್ತು ರಾಜಕೀಯವಾಗಿ ಹಿಂದುಳಿದ ಕೇರಿಯೊಂದರ ಮೇಲೆ ಮೊದ-ಮೊದಲು ಇದು ದುರ್ಬಲ ಜನಾಂಗಕ್ಕೆ ಒಳ್ಳೆಯದನ್ನು ಮಾಡುವಂತೆ ಕಂಡರೂ ಕ್ರಮೇಣ ಅದರ ನಿಸ್ಸಾಹಕ ಬದುಕನ್ನೆ ಬಂಡವಾಳವಾಗಿಸಿಕೊಂಡು ತನ್ನದೇ ಆದ ಭವಿಷ್ಯದ ರಾಜಕೀಯ ಪ್ರಣಾಳಿಕೆಯನ್ನು ಮತ್ತು ತನ್ನ ಇಷ್ಟಾರ್ಥಗಳ ಹಿತಾಸಕ್ತಿಯನ್ನು ಪೂರೈಸಿಕೊಳ್ಳುತ್ತದೆ. ಆಗ ತಮ್ಮ ಕೇರಿಯ ಮೇಲೆ ತಮಗೆ ಅಧಿಕಾರವಿರದ ದಲಿತರು ಪ್ರಬಲ ಯಜಮಾನ ಸಂಸ್ಕೃತಿಯ ಆಸೆ ಆಕಾಂಕ್ಷೆಗಳನ್ನು ಪೂರೈಸುವ ವಸಾಹತು ಪ್ರದೇಶದ ಜನರಾಗುತ್ತಾರೆ. ತಮ್ಮ ಕೇರಿಯ ಮಾರಿ ದೇವತೆಯ ಜಾತ್ರೆಯನ್ನು ಕೂಡಾ ಅಧಿಕಾರ ವರ್ಗದ ಆಜ್ಞಾನುಸಾರ ವಾಗಿಯೇ ನಿರ್ವಹಿಸಲಾಗುತ್ತದೆ. ಈ ಚಿತ್ರಣ ದಲಿತ ಕೇರಿಗೆ ಮಾತ್ರ ಸೀಮಿತವಾಗಿಲ್ಲ. ಮುಖ್ಯವಾಗಿ ಕೃಷಿಗೆ ಅಗತ್ಯವಿರುವ ವಸ್ತುಗಳನ್ನು ತಯಾರಿಸುವ ಕಸುಬು ಮತ್ತು ವೃತ್ತಿ, ಆಯಾಗಾರ ಕೇಂದ್ರಗಳೆಲ್ಲ ಈ ಫ್ಯೂಡಲ್ ವ್ಯವಸ್ಥೆಯ ಕೈಯೊಳಗಿರುತ್ತವೆ. ಹಿಂದುಳಿದ ದುಡಿವ ವರ್ಗಕ್ಕೂ ಮತ್ತು ಆಳುವ ವರ್ಗಕ್ಕೂ ಇರುವ ಹಳೆಯ ಕಾಲದ ಈ ಸಂಬಂಧ(ಈ ಚಿತ್ರಣವು ಇವತ್ತು ಕೈಗಾರಿಕಾ ಕ್ರಾಂತಿ ಮತ್ತು ಆಧುನಿಕ ವಿಜ್ಞಾನ ತಂತ್ರಜ್ಞಾನದಿಂದ ಬದಲಾಗಿ ಬೇರೆ ರೂಪ ಪಡೆದಿರಬಹುದು) ಇವತ್ತು ವಸಾಹತುಶಾಹಿಗೂ ಮತ್ತು ಭಾರತಕ್ಕೂ ಇರುವ ಸಂಬಂಧವೇ ಆಗಿದೆ. ವಸಾಹತು ಶಾಹಿಗಳಿಗೆ ವಸಾಹತುಶಾಹಿ ಅನಿವಾರ್ಯವೆಂಬ ಅಭಿಪ್ರಾಯವನ್ನು ಹುಟ್ಟುಹಾಕಿದ್ದರಿಂದಲೇ ಪರಕೀಯ ಆಳ್ವಿಕೆಗೆ ವಸಾಹತುಗಳು ಒಂದು ಧರ್ಮಬದ್ಧತೆಯನ್ನು ನಿರ್ಮಾಣ ಮಾಡಿಕೊಂಡಿವೆ.

ವೈರುಧ್ಯವೆಂದರೆ ಯಾವಾಗಲೂ ಪರಕೀಯ ಶಕ್ತಿಯೊಂದು ಇನ್ನೊಂದು ದೇಶದಲ್ಲಿ ತನ್ನ ಕಾಲೋನಿಯನ್ನು ಸ್ಥಾಪಿಸಿಕೊಳ್ಳುವುದು ಸುಲಭದ ಕಾರ್ಯವೆಂದೇನೂ ಭಾವಿಸುವಂತಿಲ್ಲ. ಹಾಗೆ ಮಾಡುವಾಗ ಅಲ್ಲಿ ಸಂಘರ್ಷಗಳು ಜಗಳಗಳು, ಪ್ರತಿಭಟನೆಗಳು ಏಳುತ್ತವೆ. ಉದಾ: ಬ್ರಿಟಿಷ್ ಆಳ್ವಿಕೆ ಕಾಲಮಿತಿಯ ಸನ್ನಿವೇಶವನ್ನು ಬಳಸಿಕೊಂಡು ಜನರ ಮೇಲೆ ಅಧಿಕಾರ ಚಲಾಯಿಸುವಾಗ ಜನ ಪ್ರತಿಭಟಿಸಿದರು. ಮುಖ್ಯವಾಗಿ ಪ್ಲೇಗನಿಂದ ಸತ್ತವರನ್ನು ಹೇಗೆ ಹೂಳಬೇಕು. ರೋಗಿಗಳನ್ನು ಕುಟುಂಬದಿಂದ ಬೇರ್ಪಡಿಸಿ ಆಸ್ಪತ್ರೆಗಳಿಗೆ ಸೇರಿಸಬೇಕು ಎಂಬ ಆಜ್ಞೆಗಳ ವಿರುದ್ಧ ಪ್ರತಿಭಟನೆಗಳು ವ್ಯಕ್ತವಾದವು.[೬] ಆದರೆ ರಾಜಕೀಯವಾಗಿ ಈ ಸನ್ನಿವೇಶವನ್ನು

ಹೇಗೆ ಎದುರಿಸ ಬೇಕೆಂಬ ಒಳತಂತ್ರಗಳನ್ನು ಕೂಡಾ ವಸಾಹತುಶಾಹಿ ಕಂಡುಕೊಂಡಿರುತ್ತದೆ. ಸ್ಥಳೀಯ ಸಮಾಜ ಆಂತರಿಕ ಬಿಕ್ಕಟ್ಟಿಗೆ ಒಳಗಾಗಿದೆ. ಅದು ಕೇವಲ ಮೌಢ್ಯಗಳಿಂದ ರೋಗಗ್ರಸ್ತ ಸ್ಥಿತಿಗೆ ತಲುಪಿದೆ ಎಂದೆನ್ನುತ್ತಾ ಅದರ ಪುನರುಜ್ಜೀವನ ಚಳವಳಿಗೆ ಕೈಯನ್ನು ಹಾಕುತ್ತದೆ. ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಕಾರ್ಲ್‌ಮಾರ್ಕ್ಸ್ "ಇಂಗ್ಲೆಂಡು ಭಾರತದಲ್ಲಿ ಇಬ್ಬಗೆಯ ಕಾರ್ಯ ನಿರ್ವಹಿಸಬೇಕಾಗಿದೆ. ಒಂದು ಒಂದು ನಾಶಗೊಳಿಸುವ ಕಾರ್ಯ ಇನ್ನೊಂದು ಪುನರುಜ್ಜೀವನಗೊಳಿಸುವ ಕಾರ್ಯ. ಅದು ಹಳೆಯ ಏಷ್ಯಾಟಿಕ್ ಸಮಾಜವನ್ನು ನಾಶಗೊಳಿಸಬೇಕು ಮತ್ತು ಏಷ್ಯಾದಲ್ಲಿ ಪಾಶ್ಚಿಮಾತ್ಯ ಸಮಾಜದ ಅಡಿಪಾಯಗಳನ್ನು ಹಾಕಬೇಕು" ಎಂದು ಅಭಿಪ್ರಾಯಪಡುತ್ತಾನೆ. ಮುಂದುವರೆದು "ಭಗ್ನಾವಶೇಷಗಳ ರಾಶಿಯ ಮಧ್ಯೆ ಪುನರುಜ್ಜೀವನದ ಕಾರ್ಯಗಳನ್ನು ಕಾಣಬಹುದು. ದುಸ್ಸಾಧ್ಯವಾದರೂ ಪುನರುಜ್ಜೀವನ ಕಾರ್ಯ ಪ್ರಾರಂಭವಾಗಿದೆ"[೭] ಎನ್ನುತ್ತಾರೆ. ವಸಾಹತುಶಾಹಿ ಭಾರತದಲ್ಲಿ ನಿರ್ಮಿತವಾದ ಪ್ರಜೆಯು ಪ್ರಬಲವಾದ ಜೀವನ ಕ್ರಮದೊಳಗೆ ತನ್ನನ್ನು ಸೆಳೆದುಕೊಂಡು ಪ್ರಕ್ರಿಯೆಗಳ ಜೊತೆಗೆ ತಾನು ಸ್ವಯಂ ಇಚ್ಛೆಯಿಂದಲೇ ಭಾಗವಹಿಸಬೇಕಾಯಿತು. ಹೀಗಾಗಿ ನಾಶವಾದದ್ದು ಯಾವುದು ಮತ್ತು ಪುನರುಜ್ಜೀವನಗೊಂಡಿದ್ದು ಯಾವುದು ಎನ್ನುವುದಕ್ಕೆ ೨೦ನೇ ಶತಮಾನದ ಸಮಾಜದ ಕಥನವೇ ಈಗ ನಮ್ಮ ಕಣ್ಣೆದುರಿಗಿದೆ.[೭] ಅದರಂತೆ ನಿರಂತರವಾಗಿ ವಸಾಹತುಶಾಹಿ ಕಲ್ಪನೆಯು ಮುಂದುವರೆದಿದೆ.

ಭಾರತದ ರಾಜಪ್ರಭುತ್ವದ ಒಳಗಡೆ ನಡೆಯುತ್ತಿದ್ದ ಆಂತರಿಕ ಕಲಹಗಳ ಲಾಭ ಪಡೆದು ವಸಾಹತುಶಾಹಿ ತನ್ನ ಅಸ್ತಿತ್ವವನ್ನು ಸ್ಥಿರಗೊಳಿಸಿಕೊಂಡಿತು. ಈ ಹೊತ್ತಿಗೆ ಮೊಘಲೋತ್ತರ ಭಾರತ ಹಲವಾರು ಆಂತರಿಕ ಕಲಹಗಳಲ್ಲಿ ತೊಡಗಿತ್ತು. ಮೊಘಲ್ ಸಾಮ್ರಾಜ್ಯದ ನಿರಂಕುಶ ದೊರೆ ಔರಂಗಜೇಬನ ನಂತರ ಸಮರ್ಥ ನಾಯಕನ ಕೊರತೆಯನ್ನು ಕಂಡ ಮೊಘಲ ಪ್ರತಿನಿಧಿಗಳೇ ಮೊಘಲರ ಪರಮಾಧಿಕಾರವನ್ನು ಭಂಗಗೊಳಿಸಿದ್ದರು. ಈ ರಾಜ ಪ್ರತಿನಿಧಿಗಳ ಅಧಿಕಾರವನ್ನು ಮರಾಠರು ನಾಶಮಾಡಿದ್ದರು. ಹಾಗೆಯೇ ಮರಾಠರ ಅಧಿಕಾರವನ್ನು ಅಫಘನ್ನರು ನಾಶಗೊಳಿಸಿದ್ದರು. ಹೀಗೆ ಎಲ್ಲರ ವಿರುದ್ಧ ಹೋರಾಡುತ್ತಿದ್ದಾಗಲೇ ಬ್ರಿಟಿಷ್ ಕಂಪನಿಗಳು ಇಲ್ಲಿಗೆ ಧಾವಿಸಿದವು. ಈ ಪ್ರವೇಶಕ್ಕೆ ೧೫-೧೬ನೇ ಶತಮಾನಗಳಲ್ಲಿ ಸಂಭವಿಸಿದ ಭೌಗೋಳಿಕ ಸಂಶೋಧನೆಗಳು ಅನುಕೂಲಕರವಾಗಿ ಪರಿಣಮಿಸಿದವು. ಭಾರತದಲ್ಲಿ ನಡೆದ ಪ್ಲಾಸಿ ಕದನ, ಮರಾಠ ಯುದ್ಧಗಳು, ಮೈಸೂರು ಯುದ್ಧಗಳು, ಸಿಖ್ ಯುದ್ಧಗಳಲ್ಲದೇ, ಅತ್ಯಂತ ಪ್ರಬಲ ಫ್ರಾನ್ಸ್ ಹಾಗೂ ಬ್ರಿಟನ್‌ಗಳ ನಡುವೆ ಅನೇಕ ವಾಣಿಜ್ಯ ಯುದ್ಧಗಳು ನಡೆದಿದ್ದವು. ಇಂಥಹ ಯುದ್ಧಗಳೇ ಕ್ರಮೇಣ ಭಾರತದ ರಾಜ್ಯ ಪ್ರಭುತ್ವದ ಮೇಲೆ ಅಧಿಪತ್ಯ ಸಾಧನೆಯ ಹೋರಾಟಗಳಾಗಿ ಪರಿಣಮಿಸಿದವು. ಇವೆಲ್ಲಾ ಇಂಡಿಯಾದಲ್ಲಿ ವಸಾಹತುಶಾಹಿ

ರೂಪಗೊಳ್ಳುವುದಕ್ಕೆ ಕಾರಣವಾದ ಚಾರಿತ್ರಿಕ ಘಟನೆಗಳು ಅದು ತನ್ನ ವ್ಯಾಪ್ತಿಯಲ್ಲಿ ಭಾರತೀಯ ಸಮಾಜದ ಎಲ್ಲ ಬೇರೆ ಬೇರೆ ವರ್ಗಗಳನ್ನು ಪಂಗಡಗಳನ್ನು ಒಳಗೊಂಡಿದ್ದರಿಂದಲೇ ಊಳಿಗಮಾನ್ಯ ಭಾರತದ ಬದಲಾಗಿ ವಸಾಹತುಶಾಹಿ ಹೊಸ ಆರ್ಥಿಕ ನೀತಿಗೆ ತನ್ನನ್ನು ಒಗ್ಗಿಸಿಕೊಳ್ಳಬೇಕಾಯಿತು ಮತ್ತು ಅದು ಬಂಡವಾಳಶಾಹಿಯ ಹೊರ ಆರ್ಥಿಕ ನೀತಿಗೆ ತನ್ನನ್ನು ಒಗ್ಗಿಸಿಕೊಳ್ಳಬೇಕಾಯಿತು. ಹಾಗೆಯೇ ಅದು ಬಂಡವಾಳಶಾಹಿ ವ್ಯವಸ್ಥೆಯ ಕರಾಳ ನೆರಳಿನಡಿಯಲ್ಲಿ ಬದುಕಬೇಕಾಯಿತು.[೮] ಈ ಘಟನೆಯಲ್ಲಿ ವಸಾಹತುಶಾಹಿಯ ಬೌದ್ಧಿಕವಾಗಿ ಪ್ರಭಾವವನ್ನು ಬೀರಿದೆ.

ಹೀಗೆ ಬಂಡವಾಳಶಾಹಿ ದರೋಡೆಕೋರರ ವಸಾಹತು ನೀತಿಗೆ ಈಡಾಗಿದ್ದ ಕೊನೆಯ ಎರಡು ದೇಶಗಳೆಂದರೆ ಭಾರತ ಮತ್ತು ಚೀನಾ, ಬ್ರಿಟಿಷರ ವಸಾಹತು ಆಡಳಿತದ ಹಾಗೂ ಶೋಷಣೆಯ ವಿವಿಧ ರೂಪಗಳು ಚೀನಾಕ್ಕಿಂತ ಭಿನ್ನವಾದ ಅನುಭವಗಳು ಭಾರತದಲ್ಲಿ ಕಂಡುಬರುತ್ತವೆ. ಯಾಕೆಂದರೆ ಚೀನಾ ಏಕರೂಪದ ದೇಶ, ಭಾರತ ನೂರಾರು ಧರ್ಮ, ಸಾವಿರಾರು ಜಾತಿ ಕುಲಗಳ ಸಂಕೀರ್ಣ ದೇಶ ಹೀಗಾಗಿ ಬಂಡವಾಳಶಾಹಿ ಶೋಷಣೆಯ ಸ್ವರೂಪ ಹಾಗೂ ಆರ್ಥಿಕ ಬಿಕ್ಕಟ್ಟುಗಳು ಎರಡೂ ದೇಶಗಳಿಗೆ ಒಂದೇಯಾಗಿದ್ದರೂ ಅದರ ಪರಿಣಾಮಗಳು ಮಾತ್ರ ವಿಭಿನ್ನವಾದವು. ಭಾರತದ ಮೇಲ್ವರ್ಗಗಳಿಗೆ ಮತ್ತು ಶೂದ್ರ ವರ್ಗಗಳಿಗೆ ಇಲ್ಲಿನ ವಸಾಹತು ಗ್ರಹಿಕೆ ಮತ್ತು ಪರಿಕಲ್ಪನೆ ಬೇರೆ ರೀತಿಯದೇ ಆಗಿದ್ದರಿಂದ ಸಹಜವಾಗಿ ಇಲ್ಲಿನ ಒಂದೊಂದು ಕುಲದ ಜಾತಿಯ ಅನುಭವ ಬೇರೆಯದೆ ಆಗಿರುತ್ತದೆ. ಭಾರತಕ್ಕೆ ಕಾಲಿಟ್ಟ ವಸಾಹತುಶಾಹಿ ಯುದ್ಧಗಳ ಮೂಲಕ ಇಲ್ಲಿನ ಒಳ ವೈರತ್ವಗಳನ್ನು ಇನ್ನಷ್ಟು ಭುಗಿಲೆಬ್ಬಿಸಿ ಇಲ್ಲಿನ ಭೂ ಭಾಗಗಳನ್ನು ವಶಪಡಿಸಿಕೊಂಡಿತು. ಈ ಬಗೆಯ ಆಡಳಿತ ಕೇವಲ ಭೂಭಾಗಗಳನ್ನು ಆಕ್ರಮಿಸಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅದು ಇಲ್ಲಿಯ ಒಟ್ಟು ವಿಶ್ವಾಸಾತ್ಮಕ ಅಥವಾ ನಂಬುಗೆಯ ಎಲ್ಲ ಮೌಲ್ಯಗಳನ್ನು ಬಲವಂತದಿಂದ ನಾಶಮಾಡಿತು.

ಮಾರ್ಕ್ಸ್ ಮತ್ತು ಎಂಗೆಲ್ಸ್ ನ್ಯೂಯಾರ್ಕ್ ಕೇಲಿ ಟ್ರಿಬ್ಯೂನ್ ಪತ್ರಿಕೆಗೆ ಬರೆದ ಲೇಖನದಲ್ಲಿ ಇದೇ ಅಂಶಗಳನ್ನು ಸೂಕ್ಷ್ಮವಾಗಿ ಉಲ್ಲೇಖಿಸುತ್ತಾರೆ. "ಬ್ರಿಟಿಷ್ ವಸಾಹತುಶಾಹಿಗಳು ಭಾರತವನ್ನು ಸೂರೆಗೈದುದು ಬ್ರಿಟನ್ನನಲ್ಲಿ ಆಡಳಿತದಲ್ಲಿದ್ದ ಸ್ವಲ್ಪ ಜನಾಧಿಪತ್ಯವು ತನ್ನ ಸಿರಿವಂತಿಕೆಯನ್ನು ಹೆಚ್ಚಿಸಿಕೊಳ್ಳಲು ಇದು ಪ್ರಧಾನವಾದ ಆಕರಗಳಲ್ಲೊಂದಾಗಿದ್ದಿತು. ಭಾರತೀಯ ಆರ್ಥಿಕತೆಯ ಅನೇಕ ಶಾಖೆಗಳನ್ನು ನಾಶಪಡಿಸಿತು. ಮತ್ತು ಒಮ್ಮೆ ಸಂಪದ್ಭರಿತವಾಗಿದ್ದ ಆ ವಿಶಾಲ ಪುರಾತನ ದೇಶದ ಜನರು ಕಡು ಬಡತನದ ಸ್ಥಿತಿಗಿಳಿಯುವಂತೆ ಮಾಡಿತು."(ಭಾರತೀಯ ಸ್ವಾತಂತ್ರ್ಯ ಸಂಗ್ರಾಮ) ಎಂದು ಮಾರ್ಕ್ಸ್ ತೋರಿಸಿಕೊಟ್ಟಿದ್ದಾರೆ.[೯] ಮುಂದುವರೆದು ಅವರು ವಸಾಹತುಶಾಹಿಯ ರಾಜಕೀಯ ಮತ್ತು ಆರ್ಥಿಕ ಬಯಕೆಯನ್ನು ವಿಶ್ಲೇಷಿಸುತ್ತಾರೆ.

ಬಲವಂತದಿಂದ ನುಗ್ಗಿ ಬಂದ ಈ ಬ್ರಿಟಿಷ ಆಡಳಿತಗಾರರು ಸಾರ್ವಜನಿಕೋಪಯೋಗಿ ವ್ಯವಸ್ಥೆಗಳನ್ನು ಕಡೆಗಣಿಸಿ ತನ್ಮೂಲಕ ನೀರಾವರಿಯ ಮೇಲೆ ಅವಲಂಬಿಸಿದ್ದ ಭಾರತದ ಕೃಷಿಯು ಪಥನಗೊಳ್ಳುವಂತೆ ಮಾಡಿದರು. ಸ್ಥಳೀಯ ಕೈಗಾರಿಕೆಗಳನ್ನು ಅದರಲ್ಲೂ ವಿಶೇಷವಾಗಿ ಕೈಯಿಂದ ನೇಯುವ ಹಾಗೂ ಕೈಯಿಂದ ನೂಲುವ ಕೈಗಾರಿಕೆಗಳನ್ನು ನಾಶಪಡಿಸಿ ಬ್ರಿಟಿಷ್ ವಸಾಹತುಕಾರರು ಲಕ್ಷೋಪಲಕ್ಷ ಭಾರತೀಯರನ್ನು ಹಸಿವಿನ ಕಂಗಾಲು ಸ್ಥಿತಿಗೆ ಈಡು ಮಾಡಿದರು. ಭಾರತೀಯ ಜನರು ಈ ಕೈಕಸುಬುಗಳು ಭಾರತದ ಮಾರುಕಟ್ಟೆಗೆ ಬಂದು ತುಂಬುತ್ತಿದ್ದ ಬ್ರಿಟಿಷ್ ಹತ್ತಿ ಬಟ್ಟೆಗಳ ವಿರುದ್ಧ ಸ್ಪರ್ಧಿಸದಾದವು. ಭೂಮಿಯ ಸಾಮುದಾಯಿಕ ಒಡೆತನವಿದ್ದ ಕುಲಪತಿ ಆಡಳಿತದ ಸಮಾಜದ ಚೌಕಟ್ಟನ್ನು ವಸಾಹತುಶಾಹಿಗಳು ಮುರಿದು ಹಾಕಿದರು(ಭಾರತೀಯ ಸ್ವಾತಂತ್ರ್ಯ ಸಂಗ್ರಾಮ). ಈ ವಸಾಹತುಶಾಹಿಯ ಶೋಷಣೆಯು ಹಿಂದಿನ ಮುಸ್ಲಿಂ ಆಡಳಿತಕ್ಕಿಂತ ಹೆಚ್ಚು ಕ್ರೂರವಾಗಿತ್ತು ಎಂಬುದನ್ನು ಗ್ರಹಿಸಿಕೊಂಡರೆ ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ಈ ಮಾತುಗಳು ಪ್ರಮುಖ ಆಶಯ ಅರ್ಥವಾಗುತ್ತದೆ. ಇವರಿಬ್ಬರೂ ಬಳಸುವ ಮುಖ್ಯ ಪದವೆಂದರೆ ಸಾರ್ವಜನಿಕೋಪಯೋಗಿ ಬೇರೆಲ್ಲಕ್ಕಿಂತ ಹೆಚ್ಚಾಗಿ ಏಶಿಯನ್ ದೇಶಗಳಲ್ಲಿ ಸಾರ್ವಜನಿಕೋಪಯೋಗಿ ವ್ಯವಸ್ಥೆಗಳು ಹೆಚ್ಚು ಅವಶ್ಯಕ ವಾದವುಗಳಾಗಿದ್ದುದರಿಂದ ಭಾರತದಲ್ಲಿ ಇದು ಸಹಜವಾಗಿ ಜರುಗಬೇಕಾದ ಪ್ರಕ್ರಿಯೆಯಾಗಿತ್ತು. ಆದರೆ ಬ್ರಿಟಿಷ್ ವಸಾಹತುಶಾಹಿ ಜನರಿಂದ ವಸೂಲಿ ಮಾಡಲಾದ ಅನೇಕ ಬಗೆಯ ತೆರಿಗೆಗಳ ಕಿಂಚಿತ್ತು ಭಾಗವನ್ನು ಸಾರ್ವಜನಿಕೋಪಯೋಗಿ ವ್ಯವಸ್ಥೆಗಳ ಮೂಲಕ ಜನತೆಗೆ ಹಿಂದಿರುಗಿಸುತ್ತಿರಲಿಲ್ಲ.[೧೦] ಹಾಗಾಗಿ ಜನರ ಏಳಿಗೆಗಾಗಿ, ಅನುಕೂಲಕ್ಕಾಗಿ ಹಲವಾರು ರೀತಿಯ ವಸಾಹತು ಶೈಲಿಯಲ್ಲಿ ಸ್ಮಾರಕಗಳು ನಿರ್ಮಾಣಗೊಂಡವು.

ಇವೆಲ್ಲಕ್ಕಿಂತ ಹೆಚ್ಚಾಗಿ ಭಾರತೀಯ ಅರ್ಥವ್ಯವಸ್ಥೆ ಮತ್ತು ಸಾಮಾಜಿಕ ಬೆಳವಣಿಗೆಗಳು ಬ್ರಿಟಿಷ್ ಅರ್ಥವ್ಯವಸ್ಥೆ ಮತ್ತು ಸಾಮಾಜಿಕ ಬೆಳವಣಿಗೆಗಳಿಗೆ ಅಧೀನವಾದವು. ಭಾರತದ ಅರ್ಥ ವ್ಯವಸ್ಥೆಯು ಜಗತ್ತಿನ ಬಂಡವಾಳಶಾಹಿ ಅರ್ಥವ್ಯವಸ್ಥೆಯೊಂದಿಗೆ ಒಂದು ಅಧೀನ ನಿಲುವಿನಲ್ಲಿ ಸೇರಿಕೊಂಡಿತು ಮತ್ತು ವಿಚಿತ್ರವಾದ ಒಂದು ಅಂತರಾಷ್ಟ್ರೀಯ ಕಾರ್ಯಯೋಜನೆ ಯನ್ನು ಹೊಂದಿತ್ತು. ೧೭೬೦ರ ನಂತರದಲ್ಲಿ ಬ್ರಿಟನ್ನನ್ನು ಜಗತ್ತಿನಲ್ಲಿಯೇ ಪ್ರಮುಖ ಅಭಿವೃದ್ಧಿ ಬಂಡವಾಳಶಾಹಿ ರಾಷ್ಟ್ರ ಎಂದು ವಿಕಾಸಗೊಳ್ಳುತ್ತಿರುವ ವರ್ಷಗಳಲ್ಲಿ ಭಾರತವು ಅಭಿವೃದ್ಧಿ ಹೊಂದಿದ ದೇಶವಾಗಿರುವುದರ ಜೊತೆಗೆ ಹಿಂದುಳಿದ ವಸಾಹತು ನಾಡಾಗಿ ಪರಿವರ್ತಿತ ವಾಗುತ್ತಿತ್ತು. ಕಾರ್ಯಕಾರಣ ಸಂಬಂಧದಿಂದ ಹೇಳುವುದಾದರೆ ಎರಡೂ ಪ್ರಕ್ರಿಯೆಗಳು ಒಂದನ್ನೊಂದು ಒಳಗೊಂಡ ಬ್ರಿಟನ್ನು ಭಾರತದ ನಡುವಣ ಆರ್ಥಿಕ ಸಂಬಂಧಗಳ ಇಡಿ ರಚನೆಯೇ ಭಾರತದ ವಸಾಹತುಶಾಹಿಯ ಸ್ವರೂಪವನ್ನು ಸ್ಪಷ್ಟಗೊಳಿಸಿತು.

ಇಪ್ಪತ್ತನೇ ಶತಮಾನದ ಸಂದರ್ಭದಲ್ಲಿ ಭಾರತದಲ್ಲಿ ವಸಾಹತುಶಾಹಿ ಕೇವಲ ಇಂಗ್ಲಿಷ್‌ತನದ ಮಾದರಿಯಾಗಿ ಮಾತ್ರ ಉಳಿದುಕೊಂಡಿಲ್ಲ. ಅದು ಜಾಗತೀಕರಣದ ಹೊಸ ರೂಪ ಪಡೆದು ಕೊಂಡಿದೆ. ಭಾರತ ಆತ್ಯಾಧುನಿಕತೆಗೆ ದಾಪುಗಾಲಿಡಲು ಇದೇ ಮೂಲ. ಈಗ ಭಾರತ ಮುಖ್ಯ ಕಾರಣ. ೧೮–೧೯ನೇ ಶತಮಾನದಲ್ಲಿ ಆರ್ಥಿಕ ಉದ್ದೇಶವನ್ನಿಟ್ಟುಕೊಂಡು ಹುಟ್ಟಿದ ವಸಾಹತುಶಾಹಿ ಇದಕ್ಕೆ ತಳಹದಿಯನ್ನು ಒದಗಿಸಿತು. ಆದರೆ ಕೇವಲ ಆರ್ಥಿಕತೆಯತೆ ಮೇಲೆ ಇದರ ಪರಿಣಾಮ ಗಳಾಗಿಲ್ಲ. ಸಹಜವಾಗಿಯೇ ಈ ದೇಶದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ನೇರವಾದ ಪರಿಣಾಮವನ್ನುಂಟು ಮಾಡಿತು(ಈ ಪರಿಣಾಮವು ಕ್ರೂರಿಯೂ ಹೌದು, ಉದಾರಿಯೂ ಹೌದು). ಯಾಕೆಂದರೆ ಮನುಷ್ಯನ ಬದುಕು ಆರ್ಥಿಕತೆಯ ಮೂಲಕವೇ ಇತರ ವಲಯಗಳಿಗೆ ವಿಸ್ತರಿಸಿಕೊಂಡಿರುತ್ತದೆ.[೧೧] ಆತನ ಎಲ್ಲಾ ಆಕಾಂಕ್ಷೆಗಳು, ಭಯಭಕ್ತಿಗಳು, ಸ್ಥಾನಮಾನಗಳು, ರೂಪುಗೊಳ್ಳುವುದೇ ಆತನ ಆರ್ಥಿಕ ಸದೃಢತೆಯ ಮೇಲಿಂದ ಎಂದು ಗುರುತಿಸಬಹುದು. ಅದು ಮನುಷ್ಯನ ಮೂಲಕ ಇಡಿ ರಾಷ್ಟ್ರವನ್ನು ವ್ಯಾಪಿಸಿರುತ್ತದೆ. ಹಾಗಾಗಿಯೇ ಭಾರತದಲ್ಲಿ ವಸಾಹತುಶಾಹಿಯ ಪರಿಣಾಮ ವ್ಯಕ್ತಿಯ ಮೂಲಕ ಸಮಾಜಕ್ಕೆ ವಿಸ್ತರಿಸಿತು. ಆದ್ದರಿಂದಲೇ ಆಧುನಿಕ ಸಂದರ್ಭದಲ್ಲಿ ಭಾರತೀಯ ಸಮಾಜ ಬೇರೆ ಬೇರೆ ವರ್ಗ ಶ್ರೇಣಿಗಳು, ಕುಲಗಳು ತಮ್ಮ ಅವನತಿ ಮತ್ತು ಪ್ರಗತಿಯ ಹಿನ್ನೆಲೆಯಲ್ಲಿಯೇ ವಸಾಹತುಶಾಹಿಯನ್ನು ಸ್ವೀಕರಿಸುತ್ತದೆ. ಇದರಲ್ಲಿ ವಸಾಹತುಶಾಹಿಯಿಂದ ತಮ್ಮ ಶಾಶ್ವತ ಯಜಮಾನ ರಚನೆಗಳು ಹಾಳಾದವೆಂದು ಹಳಹಳಿಸುತ್ತಿರುವ ಮೇಲ್ಜಾತಿ/ಮೇಲ್ವರ್ಗಗಳು ಇವೆ. ಅದು ನಮ್ಮ ಬದುಕಿನ ಚೈತನ್ಯವೆಂದು ಪರಿಭಾವಿಸುವ ಅಥವಾ ಅದರ ಪರವಾಗಿರುವ ಕೆಳಜಾತಿ ಕೆಳವರ್ಗಗಳೂ ಇವೆ. ಅಂತಿಮವಾಗಿ ಅದರ ನಡಾವಳಿ ಮತ್ತು ಪ್ರಯೋಜನವನ್ನು ಆಯಾ ವರ್ಗಗಳ ಗ್ರಹಿಕೆಗೆ ಬಿಡುವುದು ಸೂಕ್ತವಾದದ್ದು.[೧೨] ಇಲ್ಲಿ ಬ್ರಿಟಿಷರು ಸಾಮಾಜಿಕ ಸಮಾನತೆಯನ್ನು ತರಲು ಪ್ರಯತ್ನಿಸಿದರು ಎಂಬುದು ಮೇಲ್ನೋಟಕ್ಕೆ ಗೋಚರಿಸುತ್ತದೆ.

## ೩.೩. ವಸಾಹತು ವಾಸ್ತುಶೈಲಿಗಳು ಹಾಗೂ ಲಕ್ಷಣಗಳು

ಬ್ರಿಟಿಷರು ತಮ್ಮ ಪ್ರಭಾವವನ್ನು ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಅಚ್ಚಳಿಯದಂತೆ ಉಳಿಸಿ ಹೋಗಿದ್ದಾರೆ. ಕರ್ನಾಟಕದಲ್ಲಿ ವಸಾಹತುಶಾಹಿಯ ಆಳ್ವಿಕೆಯ ಅವಧಿಯಲ್ಲಿ ಯುರೋಪಿನಲ್ಲಿ ಪ್ರಚಲಿತವಾಗಿದ್ದ ಕಲಾಶೈಲಿಗಳಾದ ಪುನರುಜ್ಜೀವನ ಶೈಲಿ, ಡೋರಿಕ್ ಶೈಲಿ, ಗಾಥಿಕ್(ಗೋಥಿಕ್), ಅಯೋನಿಕ್, ಕಾರಿಂತಿಯನ್, ಗ್ರೀಕೋರೋಮನ್ ಶೈಲಿಗಳಲ್ಲಿ ಸರ್ಕಾರಿ ಕಛೇರಿಗಳು, ಸಾರ್ವಜನಿಕ ಕಟ್ಟಡಗಳು, ಖಾಸಗಿ ಕಟ್ಟಡಗಳು, ಚರ್ಚುಗಳು

ನಿರ್ಮಾಣ ಗೊಂಡವು. ಇದಕ್ಕೆ ಮುಖ್ಯ ಕಾರಣ ಕಟ್ಟಡಗಳ ವಿನ್ಯಾಸಕಾರರು ಐರೋಪ್ಯರಾಗಿದ್ದರು. ಯುರೋಪಿಯನ್ ಇಂಜಿನಿಯರರು ಕಟ್ಟಡದ ನೀಲನಕ್ಷೆ ಮತ್ತು ವಿನ್ಯಾಸವನ್ನು ಯುರೋಪಿಯನ್ ವಸಾಹತು ಶೈಲಿಯಲ್ಲಿಯೇ ತಯಾರಿಸುತ್ತಿದ್ದರು. ೧೯ನೇ ಶತಮಾನದಲ್ಲಿ ಲೋಕೋಪಯೋಗಿ ಇಲಾಖೆ ಆರಂಭವಾದಾಗ ಹೆಚ್ಚಿನ ಸಂಖ್ಯೆಯಲ್ಲಿ ಯುರೋಪಿಯನ್ ಇಂಜನಿಯರುಗಳು ನೇಮಕಗೊಂಡರು. ಇವರು ಸ್ಥಳೀಯ ಕಲಾಶೈಲಿಯಲ್ಲಿ ಯುರೋಪಿಯನ್ ಶೈಲಿಯ ಕಲೆ ಮತ್ತು ವಾಸ್ತುಶಿಲ್ಪವನ್ನು ಸೇರ್ಪಡೆಗೊಳಿಸಿ ಹೊಸ ಮಾದರಿಯ ಶೈಲಿಯ ಬೆಳವಣಿಗೆಗೆ ಕಾರಣೀಕರ್ತರಾದರು. ಬ್ರಿಟಿಷ ಅಧಿಕಾರಿಗಳು ಮತ್ತು ಯುರೋಪಿನ ಇಂಜಿನಿಯರುಗಳು ಸ್ಥಳೀಯ ಕಲಾ ಶೈಲಿಯಲ್ಲಿ ಹಾಗೂ ಇಂಡೋ ಮುಸ್ಲಿಂ ಶೈಲಿಗಳಲ್ಲಿ ಅಮೂಲಾಗ್ರ ಬದಲಾವಣೆಗಳನ್ನು ತಂದುದರ ಫಲವಾಗಿ ವಸಾಹತು ಶೈಲಿಯ ಸ್ಮಾರಕಗಳನ್ನು ಇಂದಿಗೂ ಸಹ ನೋಡಬಹುದು.

ವಸಾಹತು ಕಲೆ ಮತ್ತು ವಾಸ್ತುಶಿಲ್ಪವು ಸ್ಥಳೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆಯೂ ಸಹ ಪ್ರಭಾವ ಬೀರಿದೆ. ಅಂದರೆ ಆಯಾ ಸ್ಥಳಗಳಿಗನುಗುಣವಾಗಿ ಅಲ್ಲಿ ಸಿಗುವಂತಹ ಕಚ್ಚಾ ಸಾಮಗ್ರಿಗಳು, ಸರಕುಗಳನ್ನು ಆಧರಿಸಿ ಯುರೋಪಿನ ಇಂಜಿನಿಯರುಗಳು ನಕ್ಷೆ ಹಾಗೂ ವಿನ್ಯಾಸ ತಯಾರಿಸಿದರು. ಸ್ಥಳೀಯ ಜನಸಮುದಾಯ, ಶ್ರಮಿಕವರ್ಗದವರನ್ನು ಇಲ್ಲಿ ಕಟ್ಟಡ ಕೆಲಸಕಾರ್ಯಗಳಲ್ಲಿ ತೊಡಗಿಸಿಕೊಂಡರು.

ಯುರೋಪಿನ ಕಲೋನಿಯಲ್ ಜನರು ಭಾರತಕ್ಕೆ ಬಂದು ತಮ್ಮ ಜೊತೆ ಪೋರ್ಚುಗೀಸ್, ರೋಮನ್, ಗೋಥಿಕ್ ಮತ್ತು ಪುನರುತ್ಥಾನ ಕಾಲದ ವಾಸ್ತುಶೈಲಿಯನ್ನು ಪರಿಚಯಿಸಿದರು. ಇದನ್ನು ಒಟ್ಟಾಗಿ ಕಲೋನಿಯಲ್ ಅಥವಾ ವಸಾಹತು ವಾಸ್ತುಶಿಲ್ಪವೆಂದು ಕರೆಯಲಾಗಿದೆ. ಸರಕುಗಳನ್ನು ಒಂದೆಡೆಯಿಡಲು ಸಂಗ್ರಹಾಗಾರಗಳ ರಚನೆಯಿಂದ ಪ್ರಾರಂಭವಾಗಿ ಕೋಟೆಗಳನ್ನು ಕಟ್ಟುವವರೆಗೆ ಅನೇಕ ವಿನ್ಯಾಸಗಳು ಈ ಶೈಲಿಯಲ್ಲಿ ರೂಪುಗೊಂಡಿವೆ. ಗೋವಾದ ಬಾರೋಕ್ ಚರ್ಚ್ ಪೋರ್ಚುಗೀಸ್ ವಾಸ್ತು ಶೈಲಿಯಲ್ಲಿದೆ. ಅಂತೆಯೇ ಗೋವಾದ ಸೆ.ಕ್ಯಾಥೆಡ್ರೆಲ್ ಮತ್ತು ಆರ್ಚ್ ಆಫ್ ಕಾನ್ಸೆಪ್ಷನ್ ಗೋಥಿಕ್ ಶೈಲಿಯಲ್ಲಿ ಮೂಡಿಬಂದಿದೆ. ೧೫೧೦ರಲ್ಲಿ ಕೇರಳದ ಕೊಚ್ಚಿಯಲ್ಲಿ ಕಟ್ಟಿದ ಸ್ಟೆಂಟ್ ಫ್ರಾನ್ಸಿಸ್ ಚರ್ಚ್, ಯುರೋಪಿಯನ್ನರು ಭಾರತದಲ್ಲಿ ಕಟ್ಟಿದಂತಹ ಮೊದಲ ಚರ್ಚ್ ಎನ್ನಲಾಗಿದೆ. ಬ್ರಿಟಿಷರಿಗೆ ಪ್ರಾರ್ಥನೆಗಾಗಿ ಅವಶ್ಯಕವಾಗಿ ಬೇಕಾಗಿರುವುದು ಚರ್ಚ್. ಹಾಗಾಗಿ ತಾವು ನೆಲೆನಿಂತ ಪ್ರದೇಶಘಳಲ್ಲಿ ಚರ್ಚ್‌ಗಳನ್ನು ನಿರ್ಮಾಣ ಮಾಡಿದರು.

ಈಸ್ಟ್ ಇಂಡಿಯಾ ಕಂಪನಿಯಿಂದ ಅಧಿಕಾರ ಬ್ರಿಟಿಷರಿಗೆ ಹಸ್ತಾಂತರವಾದ ಮೇಲೆ ವಾಸ್ತುವಿನ್ಯಾಸದಲ್ಲೂ ಅನೇಕಾನೇಕ ಬದಲಾವಣೆಗಳಾದವು. ನಿರ್ಮಾಣ ಕಾರ್ಯದಲ್ಲಿ ಕಾಂಕ್ರೀಟ್,

ಗಾಜು, ಎರಕ ಹೋಯ್ದು ಕಬ್ಬಿಣದ ಉಪಯೋಗ ಶುರುವಾಯಿತು. ಬ್ರಿಟಿಷರು ದೇಶೀಯ ವಾಸ್ತುಶೈಲಿಯನ್ನು ಅಳವಡಿಸಿಕೊಳ್ಳುವತ್ತ ಗಮನವನ್ನು ಹರಿಸಿದರು. ಇವೆಲ್ಲಾ ಬದಲಾವಣೆಗಳು ಇಂಡೋ–ಸಾರ್ಸೆನಿಕ್ ಎಂಬ ಹೊಸ ವಾಸ್ತುಶೈಲಿಯ ಅಭಿವೃದ್ಧಿಗೆ ಕಾರಣವಾಯಿತು. ಆದ್ದರಿಂದ ಈ ಹೈಬ್ರಿಡ್ ಶೈಲಿಯು ಹಿಂದೂ ಮೊಘಲ್ ಮತ್ತು ಗೋಥಿಕ್ ಶೈಲಿಗಳ ಸಮ್ಮಿಲನವಾಯಿತು. ಕಮಾನು, ಗುಮ್ಮಟಗಳು, ಮಿನಾರಗಳು ಮತ್ತು ಬಣ್ಣದ ಗಾಜುಗಳ ಉಪಯೋಗ ರೂಢಿಯಾಯಿತು. ಈ ಶೈಲಿಯು ಹೊರಗಿನಿಂದ ಭಾರತೀಯವಾಗಿಯೂ, ಒಳಗಿನ ರಚನೆ–ಬ್ರಿಟೀಷ್ ಶೈಲಿಯಲ್ಲಿದೆ. ಎಫ್.ಎಸ್.ಗೌವ್ಸ್, ಸರ್ ಸ್ಟಿಂಟನ್ ಜಾಕೋಬ್, ಹೆಚ್ ಇರ್ವಿನ್ ಈ ಶೈಲಿಯ ಪ್ರವರ್ತಕರಾಗಿದ್ದಾರೆ. ವಸಾಹತು ಶೈಲಿಯ ಸ್ಮಾರಕಗಳು ಇಂದಿಗೂ ನೋಡಲು ಸಿಗುತ್ತವೆ. ಉದಾ: ಚನ್ನೈನ ಚೆಪೇಕ್ ಅರಮನೆ, ಪ್ರೆಸಿಡೆನ್ಸಿ ಕಾಲೇಜು, ವಿ.ವಿ.ಆಡಳಿತ ಕಛೇರಿ ಮುಂಬೈನ ಪ್ರಿನ್ಸ್ ಆಫ್ ವೇಲ್ಸ್ ಸಂಗ್ರಹಾಲಯ, ಬರೋಡಾದ ಲಕ್ಷ್ಮೀ ವಿಲಾಸ ಅರಮನೆ, ಬೆಂಗಳೂರಿನ ಹೈಕೋರ್ಟ್(ಅಠಾರಾ ಕಛೇರಿ) ಟೌನ್‌ಹಾಲ್ ಇತ್ಯಾದಿ ಸ್ಮಾರಕಗಳು ವಸಾಹತು ಕಲೆ ಮತ್ತು ವಾಸ್ತುಶೈಲಿಯನ್ನು ಪ್ರತಿನಿಧಿಸುವ ಮಾದರಿಗಳಾಗಿವೆ.

## ಐರೋಪ್ಯ ಅಥವಾ ವಸಾಹತು ವಾಸ್ತುಶೈಲಿಗಳು ಹಾಗೂ ಲಕ್ಷಣಗಳು

### ಡೋರಿಕ್ ಶೈಲಿಯ ಲಕ್ಷಣಗಳು

೧. ಡೋರಿಕ್ ಮಾದರಿಯ ಸ್ತಂಭವು ಗ್ರೀಕ್ ವಾಸ್ತುಶಿಲ್ಪದ ಮೂರು ವಿಧದ ಸ್ತಂಭಗಳಲ್ಲಿ ಒಂದಾಗಿದೆ, ತುಂಬಾ ಪುರಾತನವಾದ ಶೈಲಿ ಇದಾಗಿದೆ. ಇದು ಮೊದಲಿಗೆ ಪಶ್ಚಿಮ ಗ್ರೀಸ್‌ನಲ್ಲಿ ಹುಟ್ಟಿತು. ಡೋರಿಯನ್ನರು ಏಜಿಯನ್ ಭೂಮಿಯನ್ನು ಆಕ್ರಮಿಸಿದ ಕಾರಣ ಈ ಶೈಲಿಯು ಹಂತ ಹಂತವಾಗಿ ಬೆಳವಣಿಗೆಯನ್ನು ಹೊಂದಿ, ದಕ್ಷಿಣ ಇಟಲಿ ವಸಾಹತುಗಳಲ್ಲಿ ಮತ್ತು ಸಿಸಲಿಯಲ್ಲಿ ಇದರ ಪ್ರಭಾವ ಹೆಚ್ಚಾಯಿತು.

೨. ಡೋರಿಕ್ ಶೈಲಿಯು ಮೊದಲು ಗ್ರೀಸ್‌ನಲ್ಲಿ ಬಳಕೆಯಾಗಿ, ನಂತರ ಇಟಲಿಯ ಗ್ರೀಕ್ ವಸಾಹತುಗಳಿಗೆ ಹರಡಿಕೊಂಡಿತು.

೩. ಈ ಶೈಲಿಯ ಸ್ತಂಭಗಳನ್ನು ಯಾವುದೇ ಅಲಂಕಾರಿಕ ಕೆತ್ತನೆಯಿಲ್ಲದೆ ಬಹಳ ಸರಳವಾಗಿ ಕೊರೆಯಲಾಗಿರುತ್ತದೆ. ಪ್ರತಿಸ್ತಂಭಗಳಲ್ಲಿ(ವೃತ್ತವಾಗಿದ್ದ) ೧೬ ಭಾಗವಾಗಿ ಸಾಲು ಗೆರೆಗಳನ್ನು ಕೊರೆಯಲಾಗಿದೆ. ಕಾಲ ಬದಲಾದಂತೆ ಅವುಗಳ ಸಂಖ್ಯೆಯು ಹೆಚ್ಚುತ್ತಾ ಹೋದವು.

೪. ಈ ಶೈಲಿಯಲ್ಲಿರುವ ಕಂಬಗಳ ಮೇಲ್ಭಾಗದಲ್ಲಿರುವ ಬೋಧಿಗೆಯು ಯಾವುದೇ ಅಲಂಕಾರ ವಿಲ್ಲದೆ ಬಹಳ ಸರಳವಾಗಿರುತ್ತವೆ.

೫. ಸ್ತಂಭಗಳ ಮೇಲೆ ಫಲಕಗಳನ್ನು ಕಾಣಬಹುದು.

೬. ಡೋರಿಕ್ ಕಂಬಗಳು ಮೊದಲು ಮರದ ರಚನೆಯನ್ನು ಅನುಸರಿಸಿ, ನಂತರ ಕಲ್ಲು, ಇಟ್ಟಿಗೆ, ಸುಣ್ಣದ ಕಲ್ಲಿನಿಂದ ಕಟ್ಟಲಾಗಿದೆ. ಇವು ಕಣ್ಣಿಗೆ ಲಾಲಿತ್ಯ ಪೂರ್ಣವಾಗಿ ಕಾಣುವುದಿಲ್ಲ. ಆದರೆ, ಕಂಬಗಳು ದೃಢತೆ ಮತ್ತು ಸಾಮರ್ಥ್ಯದಲ್ಲಿ ಭಾವ ಶೂನ್ಯವಾಗಿ ಮಗ್ನವಾಗಿರುವಂತೆ ತೋರುತ್ತವೆ.

೭. ದೇವಾಲಯಗಳ ಒಳಗೆ ಮತ್ತು ಹೊರಗೆ ಸ್ತಂಭಗಳ ಬಳಕೆ, ವೃತ್ತಾಕಾರವಾದ ಊರು ಕಂಬ ಮತ್ತು ಸರಳವಾದ ಚಚ್ಚೌಕನೆಯ ಕಪೋತ(ಸ್ತಂಭಾಗ), ಕಂಬದ ತಲೆಕಟ್ಟಿನ ಕಾರ್ನೀಸಿನ ಕೆಳಭಾಗದ ಚೌಕಫಲಕ ಮತ್ತು ತೋಡುಗಳ ನಡುವಣ ಚೌಕನೆಯ ಭಾಗ (Trigiyphs and Metopes) ಮುಂತಾದ ಎಲ್ಲಾ ಡೋರಿಕ್ ಶೈಲಿಯ ಲಕ್ಷಣಗಳನ್ನು ಗ್ರೀಕ್ ಶ್ರೇಷ್ಠ ಸಾಧನೆಗಳಲ್ಲಿ ಸಂರಕ್ಷಿಸಲಾಗಿತ್ತು.

೮. ಬ್ಯಾಮೆಂಟ್ ಎಂಬ ಶಿಲ್ಪಿಯ ಪುರಾತನ ಗ್ರೀಕ್ ಸಂಪ್ರದಾಯಿಕ ಶೈಲಿಯಲ್ಲಿ ಕೊರೆದಿರುವ ಕಂಬಗಳ ಬದಲಾಗಿ, ಸರಳವಾದ ಕಂಬಗಳ ರಚನೆ ಹಾಗೂ ಇದಕ್ಕೆ ಅಧಿಷ್ಠಾನವನ್ನು ಸಹ ಕೂಡಿಸಿದನು. ಇದನ್ನು ಪುರಾತನ ಡೋರಿಕ್ ವಾಸ್ತುಶಿಲ್ಪಿಗಳು ಬಳಸಿರಲಿಲ್ಲ.

೯. ಗ್ರೀಸ್‌ನಲ್ಲಿರುವ ಪಾರ್ಥನಾನ್ ದೇವಾಲಯವನ್ನು ಕ್ರಿ.ಪೂ.೪೪೭ರಲ್ಲಿ ಡೋರಿಕ್ ಶೈಲಿಯಲ್ಲಿ ನಿರ್ಮಿಸಲಾಗಿದೆ. ಅಥೆನ್ಸಿನಲ್ಲಿರುವ ಈ ದೇವಾಲಯವನ್ನು ಗ್ರೀಸಿನ ಪ್ರಖ್ಯಾತ ವಾಸ್ತುಶಿಲ್ಪಗಳು ಮತ್ತು ಶಿಲ್ಪಕಲಾ ತಜ್ಞರಾದ ಫಿಡಿಯಾಸ್ ಮತ್ತು ಇಕ್ತಿನಸ್ ಅವರಿಂದ ನಿರ್ಮಾಣವಾದ ಪಾರ್ಥಿನಾನ್ ದೇವಾಲಯವು ಗ್ರೀಕರ ವಾಸ್ತುಶಿಲ್ಪ ಕೃತಿಗಳಲ್ಲಿ ಅತಿ ಶ್ರೇಷ್ಠ ಕಲಾಕೃತಿಯಾಗಿದೆ.[೧೩]

## ಐಯೋನಿಕ್ ಶೈಲಿಯ ಲಕ್ಷಣಗಳು

೧. ಐಯೋನಿಕ್ ಶೈಲಿಯು ಪೂರ್ವಗ್ರೀಸ್, ಪಶ್ಚಿಮ ತೀರದ ಟರ್ಕಿಯ ಐಯೋನಿಯಾದಲ್ಲಿ ಹಾಗೂ ಏಜಿಯನ್ ದ್ವೀಪಗಳಲ್ಲಿ ಮೊದಲು ಬಳಸಲಾಯಿತು.

೨. ಗ್ರೀಸನ ಎರಡನೆಯ ಶೈಲಿಯಾದ ಐಯೋನಿಕ್ ಶೈಲಿಯನ್ನು ಅತಿ ಸುಲಭವಾಗಿ ಗುರುತಿಸಬಹುದು. ಸ್ತಂಭಗಳ ಮೇಲಿರುವ ತೊಲೆ ಅಥವಾ ಬೋಧಿಗೆಯು ಮುಂಚಾಚಿದ ಫಲಕಗಳಿಂದ ಕೂಡಿದ್ದಲ್ಲದೆ, ಸರಳವಾದ ಅಲಂಕಾರಿಕ ಕೆತ್ತನೆಯನ್ನು ಒಳಗೊಂಡಿರುತ್ತದೆ.

೩. ಐಯೋನಿಕ್ ಸ್ತಂಭಗಳ ಬೋಧಿಗೆಯು ಸುರುಳಿ ಸುರುಳಿಯಾಕಾರದ ವೈಶಿಷ್ಟ್ಯ ಪಡೆದಿದ್ದರೂ, ಸಾಕಷ್ಟು ಬದಲಾವಣೆಯನ್ನು ಹೊಂದಿವೆ. ಕಾರಣ ಸ್ಥಳದಿಂದ ಸ್ಥಳಕ್ಕೆ ಕಟ್ಟಡಗಳ ವಾಸ್ತುಶಿಲ್ಪದ ವಿವರಗಳು ಬೇರೆಯೇ ಆಗಿವೆ.

೪. ಈ ಶೈಲಿಯ ಪ್ರಮುಖ ಗುಣಲಕ್ಷಣವೆಂದರೆ, ಬೋಧಿಗೆಯ ಮೇಲೆ ಸುರುಳಿಯಾಕಾರದ ಕೆತ್ತನೆಯನ್ನು ಒಳಗೊಂಡಿದ್ದು, ತೆಳುವಾದ ಸ್ತಂಭಗಳನ್ನು ಅಧಿಷ್ಠಾನದ ಮೇಲೆ ಕೂಡಿಸಲಾಗಿದೆ.

೫. ತ್ರಿಪಟ್ಟ ಹಾಘೂ ಮೆಟೋಪ್ಸ್ ಅನ್ನು ಸ್ತಂಭಗಳಲ್ಲಿರುವ ಫಲಕದಿಂದ ಬೇರ್ಪಡಿಸಲಾಗಿದೆ.

೬. ಆರನೆಯ ಶತಮಾನದಲ್ಲಿ ಗ್ರೀಕರ ಮೊದಲು "ಐಯೋನಿಕ್ ಶೈಲಿಯ ದೇವಾಲಯಗಳು 'ಡೋರಿಕ್ ಶೈಲಿಯ' ದೇವಾಲಯಗಳಿಗಿಂತ ಹೆಚ್ಚು ಉತ್ತಮವಾಗಿದೆ. ಉದಾಹರಣೆಯಾಗಿ, ಎಫಿಸಸ್‌ನಲ್ಲಿರುವ ಆರ್ಟಿಮಿಸ್ ದೇವಾಲಯ, ಪಾರ್ಮೊಸ್‌ನಲ್ಲಿರುವ ಹೀರಾ ದೇವಾಲಯ ಮತ್ತು ಮೈಲೀಟಸ್ ಬಳಿಯ ಬ್ರಾನ್‌ಚಿಡೆ ದೇವಸ್ಥಾನಗಳು.

೭. ಪ್ರಥಮ ಐಯೋನಿಕ್ ಸುರಳಿ ಕೂಡಾ ಒಂದು ಮರದ ತುಂಡಿನ ಮೇಲೆ ಚಿತ್ರಿಸಿದ ಪುಷ್ಪಾಲಂಕೃತ ಚಿತ್ರವಾಗಿತ್ತು ಎನ್ನುವುದು ಸುಸ್ಪಷ್ಟ. ನಂತರ ಕಾಲಘಟ್ಟದಲ್ಲಿ ಅದು ಕಲ್ಲು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟವು.[೧೪]

## ಕಾರಿಂಥಿಯನ್ ಶೈಲಿಯ ಲಕ್ಷಣಗಳು

೧. ಕಾರಿಂಥಿಯನ್ ಶೈಲಿಯು ಗ್ರೀಸ್‌ನಲ್ಲಿ ಐಯೋನಿಕ್ ಶೈಲಿಯ ನಂತರದ ಕಾಲಘಟ್ಟದಲ್ಲಿ ಬೆಳವಣಿಗೆಯಾಗಿದೆ.

೨. ಈ ಶೈಲಿಯನ್ನು ಅತ್ಯಂತ ವಿರಳವಾಗಿ ಗ್ರೀಸ್‌ನಲ್ಲಿ ಬಳಸಲಾಗಿದೆ. ಆದರೆ, ಇದನ್ನು ಹೆಚ್ಚಾಗಿ ಬಳಸಿದ್ದು ರೋಮನ್ ದೇವಸ್ಥಾನಗಳಲ್ಲಿ.

೩. ಕಾರಿಂಥಿಯನ್ ಶೈಲಿಯಲ್ಲಿ ರಚನೆಗೊಂಡಿರುವ ಸ್ತಂಭಗಳ ಮೇಲಿರುವ ಬೋಧಿಗೆಯು ತುಂಬಾ ವಿಶಾಲವಾಗಿ ಆರ್ಕ್ಯಾಂಥಸ್ ಎಲೆಗಳಿಂದ ಅಲಂಕರಿಸಲಾಗಿದೆ.

೪. ಕಾರಿಂಥಿಯನ್ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಕಂಬಗಳು ನೀಳವಾಗಿ ಉದ್ದವಾಗಿದ್ದು, ಸೂಕ್ಷ್ಮವಾಗಿದ್ದು, ಸೂಕ್ಷ್ಮವಾದ ಮತ್ತು ಅಲಂಕಾರಿಕ ಕೆತ್ತನೆಯಿಂದ ಕೂಡಿರುತ್ತವೆ.

೫. ಪುರಾತನ ಗ್ರೀಕ್ ವಾಸ್ತುಶಿಲ್ಪದಲ್ಲಿ ಇದು ಅತ್ಯಂತ ಅಲಂಕೃತವಾದ ಸುಂದರ ಶೈಲಿ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ, ಲೈಸಿ ಕ್ರೇಟ್ಸ್‌ನಲ್ಲಿರುವ ಕೊರ್‍ಪಾಜಿತ್ ಸ್ಮಾರಕವು(೩೩೫ ಬಿ.ಸಿ) ಕಾರಿಂಥಿಯನ್ ಶೈಲಿಯಲ್ಲಿದೆ. ಅಥೆನ್ಸ್‌ನ ರಾಜ ಹ್ಯಾಡ್ರಿಯನ್‌ನು ಕ್ರಿ.ಪೂ.೩ನೆಯ ಶತಮಾನದಲ್ಲಿ ಅಥೆನ್ಸ್‌ನಲ್ಲಿ 'ಜಿಯಸ್' ಮಂದಿರವನ್ನು ಕಾರಿಂಥಿಯನ್ ಶೈಲಿಯಲ್ಲಿ ಕಟ್ಟಿಸಿದ್ದನು. ಇದೊಂದು ಪ್ರಮುಖವಾದ ಕಾರಿಂಥಿಯನ್ ದೇವಾಲಯಗಳಲ್ಲೊಂದು ಎಂದು ಹೇಳಬಹುದು.[೧೫] ಹೀಗೆ ವಸಾಹತು ವಾಸ್ತುಶೈಲಿಗಳು ವೈಶಿಷ್ಟ್ಯತೆಗಳಿಂದ ಕೂಡಿವೆ.

## ಗಾಥಿಕ್ ಶೈಲಿ

ಯುರೋಪಿನ ಮಧ್ಯಕಾಲೀನ ಯುಗದಲ್ಲಿ ಉದಯಿಸಿದ ವಾಸ್ತುಶೈಲಿಗಳಲ್ಲಿ ಗಾಥಿಕ್ ಕಲಾಶೈಲಿಯು ಒಂದಾಗಿದೆ. ಈ ವಾಸ್ತುಶೈಲಿಯು ಮೊಟ್ಟಮೊದಲು ಫ್ರಾನ್ಸ್‌ನಲ್ಲಿ ಜನ್ಮತಾಳಿತು. ಕಾರಣ, ಕ್ರಿ.ಶ.೧೨ನೆಯ ಶತಮಾನದಲ್ಲಿ ಫ್ರಾನ್ಸ್ ಅತ್ಯಂತ ಶ್ರೀಮಂತ ಹಾಗೂ ಅತ್ಯಂತ ಮುಂದುವರಿದ ಪಾಶ್ಚಿಮಾತ್ಯ ರಾಷ್ಟ್ರವಾಗಿತ್ತು. ಎಲ್ಲರಿಗಿಂತ ಮಿಗಿಲಾಗಿ ಫ್ರಾನ್ಸ್ ಧರ್ಮ ಯುದ್ಧಗಳಿಗೆ ತನ್ನ ಜನ ಬಲವನ್ನು, ಧನ ಬಲವನ್ನು ತೊಡಗಿಸಿ, ಅವರುಗಳ ಸಾಂಸ್ಕೃತಿಕ ಉದ್ದೀಪನದಿಂದ ತಾನು ಲಾಭ ಪಡೆಯಿತು. ಅದು ಯುರೋಪ್‌ವನ್ನು ಶಿಕ್ಷಣದಲ್ಲಿ, ಸಾಹಿತ್ಯದಲ್ಲಿ ಮತ್ತು ತತ್ವಜ್ಞಾನದಲ್ಲಿ ಮುನ್ನಡೆಸಿತು. ಫ್ರಾನ್ಸ್ ಶಿಲ್ಪಿಗಳು ಬೈಜಾಂಟಿಯಮ್‌ನ ಈ ಭಾಗದಲ್ಲೇ ಅತ್ಯಂತ ಶ್ರೇಷ್ಠರೆನ್ನುವ ಮಾನ್ಯತೆ ಗಳಿಸಿದರು. 'ಗಾಥಿಕ್ ವಾಸ್ತುಶಿಲ್ಪ ಕಲೆಯ ಮೊದಲ ಶ್ರೇಷ್ಠ ಎಂದರೆ ಪ್ಯಾರಿಸ್‌ನ ಉಪನಗರದಲ್ಲಿರುವ ಸಂತ ಡೇನಿಸ್ ಹೆಸರಿನ ಭವ್ಯವಾದ ಆ್ಯಬಿ ಚರ್ಚ್,[೧೬] ಈ ದೇವಾಲಯವನ್ನು ಗಾಥಿಕ್ ಶೈಲಿಯಲ್ಲಿ ನಿರ್ಮಿಸಿದ ಕೀರ್ತಿ ಫ್ರಾನ್ಸ್‌ನ ರಾಜ(೬ನೇ ಲೂಯಿಸ್) ಸಲಹಾ ಮಂಡಳಿಯ ಪ್ರಮುಖ ಸದಸ್ಯನಾಗಿದ್ದ ಸುರ್ಘುರ್ ಅವರಿಗೆ ಸಲ್ಲುತ್ತದೆ. ಕಾರಣ 'ಕ್ರಿ.ಶ.೧೧೪೦–೪೪ರ ಕಾಲಾವಧಿಯಲ್ಲಿ ಸೇಂಟ್ ಡೇನಿಸ್ ಚರ್ಚ್‌ನ ಪುನರ್ ನಿರ್ಮಾಣ ಕಾರ್ಯಕ್ಕೆ ಕೈಹಾಕಿ, ವಾಸ್ತುವಿನ ಪ್ರದಕ್ಷಣ ಪಥ, ಪ್ರಾರ್ಥನಾ ಮಂದಿರದ ಜಗಲಿಯನ್ನು, ಬೆಳಕಿನ ಕಿಂಡಿಗಳು, ಮೇಲಂತಸ್ತಿನ ಛಾವಣಿ ಮತ್ತು ಕಮಾನುಗಳನ್ನು ನವೀಕರಿಸಿ, ಎಲ್ಲರೂ ನೋಡಲು ಅನುಮಾಡಿ ಕೊಟ್ಟಿರುವುದೇ ಸುರ್ಘುರ್‌ನ ಸಾಧನೆ. ಈತನು ಜರ್ಮನ್ ರಾಜ್ಯದೊಂದಿಗೆ ಹೋರಾಡುವ ಪರಿಯಲ್ಲಿ ಫ್ಯಾಪಸಿ(Papac) ತಂತ್ರವನ್ನು ಅನುಸರಿಸಿ, ಚರ್ಚ್‌ನ್ನು ಆಡಳಿತ ಯಂತ್ರವನ್ನಾಗಿ ಪರಿವರ್ತಿಸಿಕೊಂಡ.[೧೭] ಇದನ್ನೇ ಧಾರ್ಮಿಕ ರಾಜಕೀಯ ಎಂದದ್ದು. ಧಾರ್ಮಿಕ, ಮಾನಸಿಕ ಮತ್ತು ಬೌದ್ಧಿಕ ಸ್ತರಗಳನ್ನು ರಾಜಕೀಯದಲ್ಲಿ ಅಳವಡಿಸಿಕೊಂಡು, ಧಾರ್ಮಿಕ ಆಡಳಿತವೇ ಶ್ರೇಷ್ಠ ಆಡಳಿತವೆಂದು ವೈಭವೀಕರಿಸಿ, ಆಡಳಿತಕ್ಕೆ ದ್ವಿಪ್ರತಿಷ್ಠೆಯನ್ನು ನೀಡಿದ ಯತ್ನವಿದೆ. ಚರ್ಚ್ ಧಾರ್ಮಿಕತೆಯಿಂದ ರಾಷ್ಟ್ರೀಯತೆಯ ಭಾವನೆಯನ್ನು ಪಡೆಯುವಂತಾಯಿತು. ಚರ್ಚ್ ಯಾತ್ರಾರ್ಥಿ ಸ್ಥಳವು ಆಗಿ ಕ್ರೈಸ್ತರಿಗೆ ಪವಿತ್ರವಾದ ಸ್ಥಳವಾಯಿತು.

ಫ್ರಾನ್ಸ್ ಪ್ರಾಂತ್ಯದಿಂದ ಪ್ರಾರಂಭವಾದ ಗಾಥಿಕ್ ವಾಸ್ತುಶಿಲ್ಪವು ಜರ್ಮನಿ, ಇಟಲಿ, ಇಂಗ್ಲೆಂಡ್, ಉತ್ತರದ ಆಲ್ಪ್ಸ್ ಪ್ರದೇಶಗಳಿಗೂ ಹರಡಿಕೊಂಡಿರುವುದರಿಂದ ಇಲ್ಲಿಯೂ ಗಾಥಿಕ್ ವಾಸ್ತುಶೈಲಿಯ ಪುನರೋತ್ಥಾನದ ಕೇಂದ್ರವಾಗಿ ಕಾಣುತ್ತದೆ. ಏಕೆಂದರೆ 'ಕ್ರಿ.ಶ.೧೫ ಮತ್ತು ೧೬ನೆಯ ಶತಮಾನದಲ್ಲಿ ಇಟಲಿಯಲ್ಲಾದ ಪುನರುಜ್ಜೀವನದ ಪ್ರಭಾವದಿಂದ ಈ

ವಾಸ್ತುಶೈಲಿಯು ಬೆಳವಣಿಗೆಯನ್ನು ಹೊಂದಿತು. ಇಟಲಿಯ ಪ್ರಮುಖ ವ್ಯಾಪಾರೀ ನಗರಗಳಾದ ಈಪ್ರೆ, ಬ್ರೂಜಿಜ್ ಮತ್ತು ಘೆಂಟ್, ತಗ್ಗಿನ ಪ್ರದೇಶಗಳಿಗಿಂತಲೂ ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ಶ್ರೀಮಂತವಾಗಿದ್ದ ಉತ್ತರ ಮತ್ತು ಮಧ್ಯ ಇಟಲಿಯಲ್ಲಿ ಪೌರ ವಾಸ್ತುಶಿಲ್ಪವು ಗಾಥಿಕ್ ಅಭಿವೃದ್ಧಿಯ ಮೇಲೆ ಪ್ರಧಾನವಾದ ಪಾತ್ರವನ್ನು ವಹಿಸಿತು. ನಗರಸಭೆಗಳು, ನಗರದ ಕೋಟೆಗಳು ಮತ್ತು ಹೆಬ್ಬಾಗಿಲುಗಳು ಮತ್ತು ಗೋಪುರಗಳು, ಅರಮನೆಗಳು ಗಾಥಿಕ್ ಸ್ವರೂಪ ಅಥವಾ ಅಲಂಕರಣವನ್ನು ಅಳವಡಿಸಿಕೊಂಡಿದ್ದವು.[೧೮] 'ಮಧ್ಯಯುಗೀನ ಆತ್ಮಕ್ಕೆ ಗಾಥಿಕ್ ವಾಸ್ತುಶಿಲ್ಪವೇ ಶಿಖರ ಪ್ರಾಯದ ಮಹಾ ಸಾಧನೆ, ಕೆಚ್ಚೆದೆಯ ಆಭಯದೊಡನೆ ಯಾವ ವಾಸ್ತುಶಿಲ್ಪಿಗಳು ಕಂಬಗಳು ಮೇಲೆ ಕಮಾನಿನ ಛಾವಣಿಗಳನ್ನು ಏರಿಸುತ್ತಿದ್ದರೂ ಅವರು ಈ ಕಲೆಯ ವಿಜ್ಞಾನವನ್ನು ಆಳವಾದ ಪರಿಪೂರ್ಣತಾವಾದಿಗಳಂತೆ ಗ್ರಹಿಸಿ ಯಾವ ಸೂಮ ತತ್ವಜ್ಞಾನಿಯೂ ತೋರದ ವೈಶಿಷ್ಟ್ಯ ಹಾಗೂ ಸಮಗ್ರತೆಯನ್ನು ಮೆರೆಯು ತ್ತಿದ್ದರು.[೧೯] ಆದರೆ, ಫ್ರಾನ್ಸ್‌ನಲ್ಲಿ ಅತ್ಯಾಡಂಬರದಲ್ಲೂ ಉಳಿದು ಕೊನೆಗೆ ಗಾಥಿಕ್ ಸ್ವರೂಪಕ್ಕೆ ಉತ್ಪ್ರೇಕ್ಷೆ ಹಾಗೂ ಅವನತಿಯನ್ನು ಬಿಟ್ಟು ಯಾವ ದಾರಿಯೂ ಉಳಿಯಲಿಲ್ಲ. ಯುರೋಪಿನ ರಾಷ್ಟ್ರಗಳ ನಡುವೆ ನಡೆದ ಧರ್ಮ ಯುದ್ಧಗಳ ಅಂತ್ಯ, ಧರ್ಮ ಶ್ರದ್ಧೆಯ ಅವನತಿ ಮತ್ತು ರಾಜಪ್ರತಿನಿಧಿಗಳಲ್ಲಿ ಮೇರಿಗಿಂತ ಹಣದ ಮೇಲಿನ ಆಸೆ, ಚರ್ಚ್‌ಗಿಂತ ರಾಜ್ಯ ರಾಜಕಾರಣಕ್ಕೆ ಪ್ರಾಶಸ್ತ್ಯ ಇವೆಲ್ಲವೂ ಸೇರಿ, ಗಾಥಿಕ್ ಯುಗದ ಚೈತನ್ಯದ ಬೆನ್ನು ಮೂಳೆಯನ್ನು ಮುರಿಯಿತು. ೯ನೆಯ ಲೂಯಿಯ ಕಾಲದಲ್ಲಿ ಪಾದ್ರಿಗಳ ಮೇಲೆ ಹಾಕಿದ ತೆರಿಗೆಯೂ ಸಹ ಕ್ಯಾಥೆಡ್ರೆಲ್ ಭಂಡಾರವನ್ನು ಖಾಲಿ ಮಾಡಿತು. ಈ ಧಾರ್ಮಿಕ ಮಂದಿರಗಳಿಗೆ ಬೆನ್ನೆಲುಬಾಗಿ ನಿಂತಿದ್ದ ವ್ಯಾಪಾರಿ ವರ್ಗಗಳೂ ಸಹ ಅವರ ಸ್ವಾತಂತ್ರ್ಯ ಧನಶಕ್ತಿ ಹಾಗೂ ಸಾಮಾಜಿಕ ಘನತೆಯನ್ನು ಕಳೆದುಕೊಂಡರು. ಉಗ್ರ ಪ್ಲೇಗು ಹಾಗೂ ೧೦೦ ವರ್ಷಗಳ ಯುದ್ಧ ಫ್ರಾನ್ಸ್ ಮತ್ತು ಇಂಗ್ಲೆಂಡ್ಗಳ ಶಕ್ತಿಯನ್ನೆಲ್ಲ ಹೀರಿ ಹಾಕಿತು.[೨೦] ಅಂತಹ ಕಾಲದಲ್ಲಿ ಹೊಸ ಕಟ್ಟಡಗಳ ನಿರ್ಮಾಣದ ಕಾರ್ಯವು ಗಣನೀಯವಾಗಿ ಕುಂಠಿತವಾಯಿತು. ಮಧ್ಯಯುಗದ ಕೊನೆಯ ಹಾಗೂ ಆಧುನಿಕ ಯುಗದ ಪ್ರಾರಂಭದ ಅವಧಿಯಲ್ಲಿ ಕಂಡುಬಂದ ಎಲ್ಲಾ ಬೌದ್ಧಿಕ ಬದಲಾವಣೆಗಳಿಂದ ಮಾನವತಾವಾದಿಗಳು ಅಭಿಜಾತ ನಾಗರಿಕತೆಯನ್ನು ಪುನಃ ಕಂಡು ಹಿಡಿಯುವಿಕೆ ಮತ್ತು ಮೈಕಲ್ ಏಂಜಲೊ, ರಾಫೇಲ್ ಹಾಗೂ ಲಿಯೋನಾರ್ಕೋ-ಡ-ವಿಂಚಿ ಅವರ ಚಿತ್ರಕಲೆಯ ಪ್ರಭಾವದಿಂದ ಅಭಿಜಾತ ವಾಸ್ತುಶಿಲ್ಪದ ನವನಿರ್ಮಾಣ ಗಾಥಿಕ್ ಶೈಲಿಗೆ ಹೊಸ ಹುರುಪಿನೊಂದಿಗೆ ಒಂದು ಹೊಸ ಜನ್ಮವನ್ನು ನೀಡಿತು. ಬರೋಕ್ ಮತ್ತು ರಕೋಕೂ ಶೈಲಿಗಳ ಮೂಲಕ ಪುನರುಜ್ಜೀವನ ಕಾಲದ ವಾಸ್ತುಶಿಲ್ಪವು ೧೬ ರಿಂದ ೧೯ನೆಯ ಶತಮಾನಗಳವರೆಗೆ ಪಶ್ಚಿಮ ಯುರೋಪಿನಲ್ಲಿ ಪ್ರಾಮುಖ್ಯತೆಯನ್ನು ಪಡೆಯಿತು.

ಗಾಥಿಕ್ ವಾಸ್ತುಕಲೆಯು ಭಾರತಕ್ಕೆ ಯುರೋಪಿಯನ್ನರ ಆಗಮನದೊಂದಿಗೆ ಪ್ರವೇಶಿಸಿತು. ಪೋರ್ಚುಗೀಸರು ೧೫೧೦ರಲ್ಲಿ ಕೇರಳದ ಕೊಚ್ಚಿಯಲ್ಲಿ ಕಟ್ಟಿದ ಸ್ಟೆಂಟ್ ಫ್ರಾನ್ಸಿಸ್ ಚರ್ಚ್ ಯುರೋಪಿಯನ್ನರು ಭಾರತದಲ್ಲಿ ಕಟ್ಟಿದ ಮೊದಲ ಚರ್ಚ್ ಎನ್ನಲಾಗಿದೆ.[೨೧] ನಂತರ ಕಾಲಘಟ್ಟದಲ್ಲಿ ಗೋವಾ, ತಮಿಳುನಾಡು, ಕಲ್ಕತ್, ಆಂಧ್ರಪ್ರದೇಶ, ಮುಂಬಯಿ, ಕರ್ನಾಟಕ ಇತ್ಯಾದಿ ಪ್ರದೇಶಗಳಲ್ಲಿ ಕ್ರೈಸ್ತ ದೇವಾಲಯಗಳ ನಿರ್ಮಾಣ ಕಾರ್ಯವು ಪಸರಿಸಿಕೊಂಡು, ಕರ್ನಾಟಕದ ಪೂರ್ವ ರೋಮ್ ಎಂದೇ ಕರೆಯಲ್ಪಡುವ ಮಂಗಳೂರಿನಲ್ಲಿ ಕ್ರಿ.ಶ.೧೬೮೦ರಲ್ಲಿ ಮಿಲಾರ್ ಮಾಯಚಿ ಇಗರ್ಜಿಯನ್ನು ನಿರ್ಮಿಸಲಾಗಿದೆ. ಆ ನಂತರದ ದಿನಗಳಲ್ಲಿ ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಾದ ಕೊಡಗು, ದಕ್ಷಿಣ ಕನ್ನಡ, ಧಾರವಾಡ, ಬೆಳಗಾವಿ, ಕಡಪ, ಕರ್ನೂಲು ಜಿಲ್ಲೆಗಳಲ್ಲಿ ನಿರ್ಮಾಣಗೊಂಡವು. ಕ್ರಿ.ಶ.೧೮೧೧ರಲ್ಲಿ ಟ್ರೆನಿಟಿ ಆಫ್ ಚರ್ಚ್‌ನ್ನು ಬಳ್ಳಾರಿಯಲ್ಲಿ ಮೊದಲು ಬಾರಿಗೆ ನಿರ್ಮಿಸಲಾಯಿತು. ಈ ಶೈಲಿಯು ಕೇವಲ ಕ್ರೈಸ್ತ ದೇವಾಲಯಗಳಲ್ಲದೆ ಶಾಲಾ ಕಟ್ಟಡಗಳಲ್ಲಿ, ರಾಜ್ಯದ ರಾಜಧಾನಿಯಲ್ಲಿ ಪ್ರಮುಖ ಆಡಳಿತ ಕಟ್ಟಡಗಳಲ್ಲಿ ಉಳಿದು ಅಂತರರಾಷ್ಟ್ರೀಯ ಮನ್ನಣೆಯನ್ನು ಗಳಿಸಿದೆ.

**ಗಾಥಿಕ್ ಪದ ನಿಷ್ಪತ್ತಿ**

ಗಾಥಿಕ್ ಪದಕ್ಕೆ ಅರ್ಥಕೋಶದಲ್ಲಿ ಅಶಿಕ್ಷಿತ, ಅನಾಗರಿಕ, ಬರ್‌ಬರಿ, ಒರಟಾತ ಇತ್ಯಾದಿ ವಿವರಗಳು ಇವೆ. ಇದು 'ಸಂಸ್ಕೃತ ವರ್ವರದ ಜ್ಞಾತಿ ಪದ' ಎಂದು ಕಂಡುಬರುತ್ತದೆ. ವರ್ವರ ಎಂದರೆ ಒರಟ, ಅನಕ್ಷರಸ್ಥ ಹಾಗೂ ಕೀಳು ಹುಟ್ಟಿನವನು ಎಂಬ ಅರ್ಥವನ್ನು ಹೊಂದಿದೆ.[೨೨]

ಪ್ರಾಚೀನ ಯುರೋಪಿನಲ್ಲಿ(ಕ್ರಿ.ಶ.೩ನೆಯ ಶತಮಾನದಿಂದ ೫ನೆಯ ಶತಮಾನದ ಕಾಲಾವಧಿಯಲ್ಲಿ) ಜರ್ಮನಿಯ ಗುಡ್ಡಗಾಡು ಜನರನ್ನು ಬಾರ್ಬೇರಿಯನ್ನರು ಅಥವಾ ಗಾಥ್ ಜನಾಂಗ ಎಂದು ಕರೆಯುವ ವಾಡಿಕೆ ಇತ್ತು. ದಕ್ಷಿಣ ಸ್ವೀಡನ್ ಹಾಗೂ ಅದರ ಸುತ್ತಮುತ್ತ ಇದ್ದಂತಹ ದ್ವೀಪಗಳನ್ನು ತಮ್ಮ ಪೂರ್ವಜರು ಇದ್ದ ಸ್ಥಳ ಎಂದು ಗಾಥ ದೇಶದ ಜನ ಪ್ರತಿಪಾದಿಸ ತೊಡಗಿದರು. ಬಹುಶಃ ಈ ಜನರು ಮೊದಲು ವಿಶ್ಚೂಲ ಎಂಬ ಸ್ಥಳದ ಮೂಲ ನಿವಾಸಿಗಳಾಗಿದ್ದರು. ಈ ಕಾರಣಕ್ಕಾಗಿಯೇ ದಕ್ಷಿಣ ವಿಶ್ಚೂಲದ ಜನರನ್ನು ವಿನಿಗಾಥರು ಎಂದು ಕರೆಯಲಾಯಿತು. ಇವರು ಡ್ಯಾನ್ಯೂಬ್ ನದಿಯ ದಕ್ಷಿಣಕ್ಕೆ ಪಸರಿಸಿದರು. ನೀಸ್ಟರ್ ಆಗೂ ಡಾನ್ ನದಿಗಳ ಮಧ್ಯೆ ಇವರು ಆಸ್ಟ್ರೋಗಾಥರು ಎಂದು ನೆಲೆಸಿದರು. ವಿಶ್ಚೂಲ ಡ್ಯಾನ್ಯೂಬ್ ಹಾಗೂ ರೈನ್ ನದಿಗಳಿಂದ ಆವೃತ್ತವಾಗಿದ್ದ ಯುರೋಪಿನ ಹೃದಯ ಭಾಗವನ್ನು ಈ ಅಲೆಮಾರಿ ಜನರು ಅಕ್ರಮಿಸಿಕೊಂಡಿದ್ದರು. ಇವರಿಗೆ ನಾಗರಿಕತೆಯ

ಸೋಂಕೆ ಇರಲಿಲ್ಲ.[೨೩] ಆದರೆ ನಾಗರಿಕತೆ ಯಿಂದ ಆಗುತ್ತಿದ್ದ ಒಳಿತುಗಳನ್ನು ಕಂಡು ಈ ಗುಡ್ಡಗಾಡು ಜನರಿಗೆ ಬಹಳ ಅಸೂಯೆ ಇತ್ತು. ಏಕೆಂದರೆ ಕಷ್ಟಪಟ್ಟು ವ್ಯವಸಾಯ ಮಾಡುವುದಕ್ಕಿಂತ ಯುದ್ಧ ಮಾಡುವುದೇ ಸುಲಭ ಎಂದು ಜನರಿಗೆ ಅನಿಸುತ್ತಿತ್ತು. ಹಾಗಾಗಿ ಪರದೇಶಗಳ ಕರಾವಳಿಯನ್ನು ಆಕ್ರಮಣ ಮಾಡುವುದೇ ಉದಾತ್ತ ಉದ್ಯೋಗ ಎಂದು ಇವರು ಎಣಿಸಿದ್ದರು. ರೋಮ್, ಗ್ರೀಕ್, ಸ್ಪೇನ್ ನಾಗರಿಕತೆಗಳೊಂದಿಗೆ ಐದು ಶತಮಾನ ಗಳಿಂದಲೂ ಜರ್ಮನ್ನರು ವ್ಯಾಪಾರ ಹಾಗೂ ಯುದ್ಧದಲ್ಲಿ ತೊಡಗಿಕೊಂಡಿದ್ದರು. ರೋಮಿನ ದೇಶವನ್ನು ಆಕ್ರಮಿಸಿಕೊಂಡಿದ್ದ ಈ ಜನ ಅದರಲ್ಲಿಯೂ ಗಾಥ ದೇಶದವರು ರೋಮನ್ ಸಂಸ್ಕೃತಿಯನ್ನು ಗೌರಿಸುವಷ್ಟು ಸುಸಂಸ್ಕೃತರಾಗಿದ್ದರು. ತಮ್ಮ ದೇಶದ ಸಂಸ್ಕೃತಿಗಿಂತ ರೋಮಿನ್ ಸಂಸ್ಕೃತಿ ಬಹಳ ಉತ್ತುಂಗದಲ್ಲಿದೆ ಎಂದು ಅಂತ ಇವರು ಕಪ್ಪು ಸಮುದ್ರದಿಂದ ಇಟಲಿಯ ಗಡಿಗಳವರೆಗೆ ಬಾಲ್ಕನ್ ಪ್ರದೇಶವನ್ನು ಸೂರೆ ಮಾಡಿದರು. ಇತಿಹಾಸದಲ್ಲಿ ಇವರನ್ನೆ ಗಾಥ್ ಎಂದು ಕರೆದಿದ್ದು, ಗಾಥ್ ಎಂಬ ಪದವು ಗಾಥ್, ಬರ್‌ಬರಿ, ವರ್ವರ ಎಂಬ ಪದಗಳಿಂದ ಗಾಥಿಕ್ ವಾಸ್ತುಕಲೆ ಎಂದು ಮಧ್ಯಯುಗದ ಕಾಲಾವಧಿಯಲ್ಲಿ ಬೆಳವಣಿಗೆಯಾಗಿದೆ. ಇದು ಕ್ರಿ.ಶ.೧೨ನೆಯ ಶತಮಾನದಲ್ಲಿ ಮೊದಲು ಫ್ರಾನ್ಸ್‌ನಲ್ಲಿ ಆರಂಭಗೊಂಡು ಗ್ರೀಕ್, ರೋಮನ್, ರೋಮನಸ್ಕ ಮತ್ತು ಬೈಜಂಟೈನ್ ಸಾಂಸ್ಕೃತಿಕ ವಾಸ್ತು ರಚನೆಯಿಂದ ಸಂಪೂರ್ಣ ಭಿನ್ನವಾದ ರೂಪವೇನು ಅಲ್ಲ. ಆದಾಗ್ಯೂ ಚರ್ಚ್‌ನ ವಾಸ್ತುವಿನ ರೂಪದಲ್ಲಿ ಮಾಡಿಕೊಂಡ ಗಾಥಿಕ್ ವಾಸ್ತುಶಿಲ್ಪವು ಲಕ್ಷ್ಯವನ್ನು ಕೇಂದ್ರೀಕರಿಸುವ ಮತ್ತು ವಿನ್ಯಾಸದ ಕರ್ಷಣವನ್ನು ಸಮತೋಲನ ಮಾಡುವ, ನೇರ ಗೆರೆಗಳನ್ನು ಒತ್ತಿ ಹೇಳುವ, ಅಡ್ಡಪಟ್ಟಿಯನ್ನು ಕೊಡಲಾಗಿರುವ ಕಮಾನು, ಛಾವಣಿ ಹಾಗೂ ಚೂಪಾದ ಮನೆಯ ರಚನೆಗಳ ವಾಸ್ತುಶಿಲ್ಪದ ಕೆಲವು ಬದಲಾವಣೆಗಳು ಸ್ಪಷ್ಟವಾಗಿ ತೋರುತ್ತವೆ.[೨೪] ಕ್ರಿ.ಶ.೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ಯುರೋಪಿನಲ್ಲಿ ಚಾಲ್ತಿ ಇದ್ದ ವಾಸ್ತುಶೈಲಿಯನ್ನು ಗಾಥಿಕ್ ವಾಸ್ತುಶೈಲಿಯೆಂದು ಕರೆದಿದೆ. ಮುಂದೆ ಶಿಲ್ಪಕಲೆ, ಚಿತ್ರಕಲೆ, ಹಸ್ತಪ್ರತಿ ಕಲೆ, ಬಣ್ಣದ ಗಾಜಿನ ಕಿಟಕಿ ಚಿತ್ರಕಲೆಗೂ ಸಮನ್ವಯಿಸಿಕೊಳ್ಳಲಾಗಿದೆ. ಈ ಗಾಥಿಕ್ ಕಲೆಯು ಭಾರತದಲ್ಲಿ ಬ್ರಿಟಿಷರ ಆಗಮನದೊಂದಿಗೆ ಚರ್ಚ್‌ಗಳಲ್ಲಿ ಅಲ್ಲಲ್ಲಿ ಗುರುತಿಸಿಕೊಂಡಿತು.

ಮಧ್ಯಯುಗದ ಕೊನೆಯ ಭಾಗದಲ್ಲಿ ಹಾಗೂ ಪುನರುಜ್ಜೀವನ ಅವಧಿಯ ಪ್ರಾರಂಭದಲ್ಲಿ ಕಂಡುಬರುವ ವಿಶಿಷ್ಟ ವಾಸ್ತುಶೈಲಿಗೆ ಗಾಥಿಕ್‌ಶೈಲಿ ಎಂದು ಕರೆಯುವರು. ಕ್ರಿ.ಶ.೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ಯುರೋಪಿನಲ್ಲಿ ಈ ಶೈಲಿಯು ಪ್ರಧಾನವಾಗಿದ್ದಿತು. ಈ ಶೈಲಿಗೆ ಈ ಹೆಸರು ಬಂದಿರುವುದು ಹೇಗೆಂದರೆ, ಜರ್ಮನಿಯ ಗಾಥ್‌ಜನ ಪಶ್ಚಿಮಕ್ಕೂ ದಕ್ಷಿಣಕ್ಕೂ ನುಗ್ಗಿ ದಾಳಿ ಮಾಡಿ ರೋಮನ್ ಚಕ್ರಾಧಿಪತ್ಯವನ್ನು ಹಾಳು ಮಾಡಿದರು. ಈ

ಜನ ಒರಟರು. ಕ್ರೂರಿಗಳು, ವಿಧ್ವಾಂಸಕಾರಿ ಮನೋಧರ್ಮ ಉಳ್ಳವರಾಗಿದ್ದರು. ತಾವು ಹೋದ ಕಡೆಗೆಲ್ಲಾ ಕೊಲೆ ಸುಲಿಗೆಗಳನ್ನು ಮಾರುವುದರ ಜೊತೆಗೆ ಕಣ್ಣಿಗೆ ಕಂಡ ಊರು ಕೇರಿಗಳಿಗೆ ಬೆಂಕಿಯಿಟ್ಟು ಸುಟ್ಟರು. ಗಾಥ್ ಜನರ ಆಳ್ವಿಕೆಯ ಕಾಲದಲ್ಲಿ ಬೆಳೆದು ಬಂದ ವಾಸ್ತುಶಿಲ್ಪ ಶೈಲಿಯನ್ನು ಆ ಜನರ ಹೆಸರಿಗೇ ಕಟ್ಟಿ ಗಾಥಿಕ್ ಎಂದು ಕರೆದರು.

ಗಾಥಿಕ್ ಶೈಲಿ ನಿಜಕ್ಕೂ ಬಹು ಸುಂದರವಾದ ಶೈಲಿಯಾದರೂ ಅದು ಪ್ರಾಚೀನ ಗ್ರೀಕ್ ಮತ್ತು ರೋಮನ್ ಶೈಲಿಯಷ್ಟು ಸುಸಂಸ್ಕೃತವೆಂದು ಅಂದಿನ ಜನರು ತಿಳಿದಿರಲಿಲ್ಲ. ಅದರ ಬಗೆಗೆ ಅವರಿಗೆ ಬಹು ತಾತ್ಸಾರವಿತ್ತು. ಒರಟು, ಅಸಂಸ್ಕೃತ, ಅನಾಗರಿಕ ಎಂಬ ಅರ್ಥದಲ್ಲಿ ಗಾಥಿಕ್ ಎಂಬ ಪದವನ್ನಿಲ್ಲಿ ಬಳಸಲಾಗಿದೆ. ಆದರೆ ಗಾಥಿಕ್ ಶೈಲಿ ನಿಜಕ್ಕೂ ವಿಚಿತ್ರವಾಗಿದ್ದು ಬಹು ಸುಂದರವಾಗಿದೆ. ಅಲ್ಲದೇ ಅದನ್ನು ಬಳಕೆಗೆ ಬಂದವರು ಗಾಥರಲ್ಲ. ಗಾಥರ ಆಳ್ವಿಕೆಯ ಕಾಲದಲ್ಲಿ ಆಯಾ ಪ್ರಾಂತ್ಯದ ಸ್ಥಳೀಯ ಶಿಲ್ಪಿಗಳು ಸ್ವಸಂತೋಷದಿಂದ, ಧಾರ್ಮಿಕ ತೃಪ್ತಿಗಾಗಿ, ರೋಮನ್ ಮತ್ತು ರೋಮನೆಸ್ಕ್ ಶೈಲಿಗಳನ್ನು ಅನುಕರಿಸಿದರೂ ಅದಕ್ಕಿಂತ ಭಿನ್ನವೆನಿಸಿದ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು ನಿರ್ಮಿಸಿದ ವಾಸ್ತುಶೈಲಿಯೇ ಗಾಥಿಕ್ ಶೈಲಿ. ಇದರ ಪ್ರಧಾನ ಲಕ್ಷಣಗಳೆಂದರೆ ಅದುವರೆಗೂ ಅಡ್ಡಲ್ಲಾಗಿ ನೆಲದಲ್ಲಿ ವಿಸ್ತಾರವಾಗಿ ಹರಡಿ ನಿಂತಿರುತ್ತಿದ್ದ ಮನೆಗಳು ನೆಟ್ಟಗೆ ಆಕಾಶದ ಕಡೆಗೆ ಎತ್ತರೆತ್ತರವಾಗಿ ಬೆಳೆಯತೊಡಗಿದವು.[೨೬] ಅಂದರೆ ಹಲವು ಉಪ್ಪರಿಗೆಯ ಮನೆಗಳು ಬಳಕೆಗೆ ಬಂದವು. ಚಾವಣಿಗಳಿಗೆ ಮರವನ್ನು ಉಪಯೋಗಿಸುವುದನ್ನು ನಿಲ್ಲಿಸಿ ಕಲ್ಲನ್ನೇ ಬಳಸಲು ಪ್ರಾರಂಭಿಸಿದರು. ಕಿಟಕಿ, ಬಾಗಿಲು ಹಾಗೂ ಕಂಬ ಸಾಲುಗಳ ಮೇಲಿದ್ದ ಕಮಾನುಗಳನ್ನು ಅರ್ಧವೃತ್ತಾಕಾರದಲ್ಲಿ ಮಾಡದೆ ಚೂಪಾಗಿ ನಿರ್ಮಿಸಲಾಯಿತು. ಇದು ಅಂಥಹ ಹೊಸ ತಂತ್ರವೇನಲ್ಲ. ಪೂರ್ವ ರಾಷ್ಟ್ರಗಳಲ್ಲಿ ಚೂಪು ಕಮಾನಿನ ಬಳಕೆ ಬಹಳ ಹಿಂದಿನಿಂದಲೂ ಇತ್ತು. ಧರ್ಮ ಯುದ್ಧಗಳಿಗಾಗಿ ವಿದೇಶಗಳಿಗೆ ಹೋದ ಯೋಧರು ಅದನ್ನು ಯುರೋಪಿಗೆ ತಂದರು. ಶಿಲ್ಪ ತಂತ್ರದ ದೃಷ್ಟಿಯಿಂದಲೂ ಗುಂಡು ಕಮಾನಿಗಿಂತ ಚೂಪು ಕಮಾನುಗಳ ನಿರ್ವಹಣೆ ಸುಲಭವೆನ್ನಲಾಗಿದೆ.[೨೭] ಇವು ಗಾಥಿಕ್ ಶೈಲಿಯ ವೈಶಿಷ್ಟ್ಯತೆಗಳಾಗಿವೆ.

ಚೂಪು ಕಮಾನುಗಳು, ಎತ್ತರೆತ್ತರದ ಮಹಡಿಗಳು ತುದಿಯ ಗೋಪುರಗಳು, ಹೆಚ್ಚಿನ ಚಿತ್ರಕಲೆ ಹಾಗೂ ಕೆಲಸಗಳು, ಬಣ್ಣದ ಗಾಜು ಇವು ಗಾಥಿಕ್ ಶೈಲಿಯ ಮುಖ್ಯಾಂಶಗಳು. ಫ್ರಾನ್ಸಿನಲ್ಲಿ ಈ ಶೈಲಿಯ ಅನೇಕ ಚರ್ಚ್‌ಗಳಿವೆ. ಅವುಗಳಲ್ಲೆಲ್ಲ ಬಹುಪ್ರಸಿದ್ಧವಾದುದು ಆಮಿಯೆನ್ಸ್ ಕಥೀಡ್ರಲ್ ಜೊತೆಗೆ ನೋಟರ್‌ಡೇಮ್. ಸೇಂಟ್ ಚಾಪೆಲ್, ರ್ಹೀಮ್ಸ್‌ಗಳನ್ನು ಹೆಸರಿಸಬಹುದು. ಇಂಗ್ಲೆಂಡಿನಲ್ಲಿ ಗಾಥಿಕ್ ಶೈಲಿಗೆ ಒಳ್ಳೆಯ ಉದಾಹರಣೆಗಳೆಂದರೆ ಸ್ಯಾಲಿಸ್‌ಬರಿ,

ಲಿಂಕನ್ ಮತ್ತು ಕ್ಯಾಂಟರ್‌ಬರಿಗಳಲ್ಲಿರುವ ಕೆಥೆಡ್ರೀಲ್‌ಗಳು ಸ್ಪೇನಿನ ವಾಸ್ತುಶಿಲ್ಪದಲ್ಲಿ ಅಲಂಕರಣ ಹೆಚ್ಚು ಮತ್ತು ಕಿಟಕಿಗಳು ಬಲು ಚಿಕ್ಕವು. ಜರ್ಮನಿಯ ಕೊಲೋನ್ ಕಥೀಡ್ರಲ್, ಬೆಲ್ಜಿಯಂಮಿನ ಆಂಟ್‌ವರ್ಪ್‌ನಲ್ಲಿರುವ ನಗರ ಸಭಾಭವನ, ಸ್ಪೇನಿನ ಬರ್ಗೋಸ್ ಕೆಥೆಡ್ರಲ್ ಹೀಗೆ ಕೆಲವು ಗಾಥಿಕ್ ಶೈಲಿಯ ಇತರ ಪ್ರಸಿದ್ಧ ನಿದರ್ಶನಗಳು.[೨೮] ಇನ್ನೂ ಹಲವಾರು ಚರ್ಚ್‌ಗಳಲ್ಲಿ ಗಾಥಿಕ್ ಶೈಲಿಯಿಂದ ನಿರ್ಮಾಣಗೊಂಡಿವೆ.

ಯುರೋಪಿಯನವರ ವ್ಯಾಪಾರ ಮಾತ್ರ ವಾಣಿಜ್ಯದ ವಿಸ್ತಾರಕ್ಕಾಗಿ ಭಾರತಕ್ಕೆ ಬಂದ ಮೇಲೆ ಗಾಥಿಕ್ ಶೈಲಿಯಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಿದರು. ಭಾರತಕ್ಕೆ ಬಂದ ಮೇಲೆ ಇಂಜನಿಯರುಗಳ ನೇಮಕಾತಿಯಲ್ಲಿ ಹೆಚ್ಚಾಗಿ ಯುರೋಪಿಯನ್ನರ್ ನೇಮಕರಾದರು. ಹಾಗಾಗಿ ಯುರೋಪಿನ ಶೈಲಿಯ ಕಟ್ಟಡಗಳು ತಲೆ ಎತ್ತಿದ್ದವು. ಅಂತಹ ಗಾಥಿಕ್‌ಶೈಲಿಯ ಸ್ಮಾರಕಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ. ಲಂಡನ ಪಾರ್ಲಿಮೆಂಟ್ ಮಾದರಿಯ ಸ್ಮಾರಕ ಭಾರತದಲ್ಲಿ ಅನೇಕ ಕಟ್ಟಡಗಳನ್ನು ಗಮನಿಸಿದಾಗ ಸಮ್ಮಿಲನಗೊಂಡಿರುವುದು ಸ್ಪಷ್ಟವಾಗುತ್ತದೆ. ಕಲೋನಿಯಲ್ ಥಾಮಸ್ ಕೂಪರ ೧೮೨೦ರಲ್ಲಿ ಮುಂಬೈ ಪುರಸಭೆ ಕಟ್ಟಡವನ್ನು ನಿರ್ಮಿಸಿದನು. ಗವರ್ನರ್ ಸರ್ ಬಾರ್‍ವಲೆ ಕಾಲದಲ್ಲಿ ಗೋಥಿಕ ಶೈಲಿಯಲ್ಲಿ ಗೇಟ್‌ವೇ ಆಪ್ ಇಂಡಿಯಾ ನಿರ್ಮಾಣ ವಾಯಿತು. ಮುಂಬೈ ಸಚಿವಾಲಯ, ಗ್ರಂಥಾಲಯ, ವಿಕ್ಟೋರಿಯಾ ಟರ್ಮಿನಲ್(ಈಗಿನ ಛತ್ರಪತಿ ಶಿವಾಜಿ ಟರ್ಮಿನಲ್)ನ್ನು ವಾಸ್ತು ವಿನ್ಯಾಸಕಾರ ಪೆಡ್ರಿಕ್ ವಿಲಿಯಮ್ ಸ್ಟೇಪಿನ್ಸ್ ರಚಿಸಿದನು.

## ಗಾಥಿಕ್ ಶೈಲಿಯ ಲಕ್ಷಣಗಳು

೧. ಪ್ಯಾರಿಸ್‌ನ ಸೆಂಟ್ ಡೆನಿಸ್ ಚರ್ಚ್‌ನ ಮಠಾಧಿಪತಿಯಾಗಿ, ಚರ್ಚ್‌ನ ಜೀರ್ಣೋದ್ಧಾರ ಕಾರ್ಯಕ್ರಮ ಹಮ್ಮಿಕೊಂಡು ಚರ್ಚ್‌ಗೆ ಹೊಸ ಚಾಲನೆಯನ್ನು ನೀಡಿದ್ದ ಕಾರಣಕ್ಕಾಗಿ ಸುರ್ಘುರನನ್ನು ಗಾಥಿಕ್ ವಾಸ್ತುಕಲೆಯ ಪ್ರಥಮ ಪುರುಷನನ್ನಾಗಿ ಪರಿಗಣಿಸಿದೆ.[೨೯]

೨. ಗಾಥಿಕ್ ಎಂದರೆ, 'ಮೊನಚಾದ ಕಮಾನು' ಎಂಬ ಅರ್ಥ ಕಲ್ಪಿಸುತ್ತದೆ. ಹಾಗಾಗಿ, ಚರ್ಚ್ ಉದ್ದಗಲಕ್ಕಿಂತ ಎತ್ತರಕ್ಕೆ ಹೆಚ್ಚು ಮಹತ್ವ ನೀಡಿದೆ.

೩. ರೋಮನೆಸ್ಕ್ ಶೈಲಿಯಲ್ಲಿ ಸಾಮಾನ್ಯವಾಗಿದ್ದ ಅರ್ಧವೃತ್ತದ ಕಮಾನಿನ ಬದಲು ಚೂಪು ಕಮಾನುಗಳು ಬಳಕೆಗೆ ಬಂದು ಗಾಥಿಕ್ ಎಂಬ ಹೊಸ ವಾಸ್ತುಶೈಲಿಗೆ ಎಡೆ ಮಾಡಿಕೊಟ್ಟಿದೆ.

೪. ಗಾಥಿಕ್ ಶೈಲಿಯ ಕಟ್ಟಡಗಳ ಅಡಿಪಾಯ ಅಥವಾ ತಳವಿನ್ಯಾಸ ಮುಖ್ಯವಾಗಿ ಶಿಲುಬೆಯಾ ಕೃತಿಯಲ್ಲಿರುತ್ತದೆ.

೫. ಕ್ರೈಸ್ತ ದೇವಾಲಯಗಳನ್ನು ಆರಂಭದಲ್ಲಿ ಪೂರ್ವಾಭಿಮುಖವಾಗಿ ಜೆರುಸೆಲಮ್ ಕಡೆಗೆ ಇರುವಂತೆ ಕಟ್ಟಲಾಗುತ್ತಿತ್ತು. ನಂತರ ಅದು ಎಲ್ಲಾ ದಿಕ್ಕುಗಳಲ್ಲಿಯೂ ಕಟ್ಟಲ್ಪಟ್ಟಿದೆ.

೬. ಕ್ರೈಸ್ತ ದೇವಾಲಯವು ಅರ್ಧವೃತ್ತಾಕಾರದ ಹಿಂಚಾಚು ಅಥವಾ ಚಚ್ಚಾಕಾಕಾರದ ಬಲಿಪೀಠ ಅಥವಾ ಪುಲ್‌ಪೀಠ, ಮಧ್ಯಾಂಗಣ ಮತ್ತು ಮುಖಮಂಟಪವನ್ನು ಒಳಗೊಂಡಿರುತ್ತದೆ.

೭. ಕ್ರೈಸ್ತ ದೇವಾಲಯಗಳ ಮುಂಬಾಗಿಲು ಮತ್ತು ಕಿಟಕಿಗಳ ಕಮಾನು ವೃತ್ತಾಕಾರದಲ್ಲಿ ಇರದೆ, ತ್ರಿಕೋನಾಕಾರದಲ್ಲಿದ್ದು, ಮೊನೆಯುಳ್ಳ ಕಮಾನಿನ ಅನ್ವಯವು ಹೊಸ ಆಕರ್ಷಣೆಗಳನ್ನು ಸೃಷ್ಟಿಸಿತು.

೮. ದೇವಾಲಯದ ಮಧ್ಯಾಂಗಣಕ್ಕೆ ಸಾಕಷ್ಟು ಗಾಳಿ, ಬೆಳಕು, ಒಳಸೂಚಿಸುವ ಸಲುವಾಗಿ ಮೊನಚು ಬಾಗಿಲುಗಳು ಮತ್ತು ಕಿಟಕಿಗಳನ್ನು ಅಳವಡಿಸಲಾಗಿರುತ್ತದೆ.

೯. ದೇವಾಲಯದ ಬಲಿಪೀಠ ಹಿಂಭಾಗದ ಗೋಡೆಯ ಮೇಲೆ ಯೇಸುವಿನ ಶಿಲುಬೆ ಇರುತ್ತದೆ. ಕ್ಯಾಥೋಲಿಕ್ ದೇವಾಲಯಗಳಲ್ಲಿ ಶಿಲುಬೆಯ ಜೊತೆಗೆ ಯೇಸುವಿನ ಮೂರ್ತಿ ಇರುತ್ತದೆ. ಆದರೆ, ಪ್ರಾಟೆಸ್ಟೆಂಟ್ ಚರ್ಚ್‌ಗಳಲ್ಲಿ ಕೇವಲ ಶಿಲುಬೆ ಮಾತ್ರ ಇರುತ್ತದೆ.

೧೦. ಕ್ಯಾಥೋಲಿಕ್ ಚರ್ಚ್‌ಗಳಲ್ಲಿ ಗೋಡೆಯ ಮೇಲೆ ಯೇಸುವಿನ ಜೀವನ ಚರಿತ್ರೆಗೆ ಸಂಬಂಧಪಟ್ಟ ಭಿತ್ತಿಚಿತ್ರಗಳು ಕಂಡುಬರುತ್ತವೆ. ಆದರೆ ಪ್ರಾಟೆಸ್ಟೆಂಟ್ ಚರ್ಚ್‌ಗಳಲ್ಲಿ ಯೇಸುವಿನ ಮೂರ್ತಿಯಾಗಲಿ ಅಥವಾ ಭಿತ್ತಿ ಚಿತ್ರಗಳಾಗಲಿ ಕಂಡುಬರುವುದಿಲ್ಲ.

೧೧. ಪ್ರಚಲಿತವಾಗಿದ್ದ ಬಣ್ಣದ ಗಾಜಿನ ಕಲೆಗೆ ಕಿಟಕಿಗಳು ಆಹ್ವಾನಿಸುವ ವಿಶಾಲ ಅವಕಾಶವನ್ನು ನೀಡಿದವು. ಹೊರಗೋಡೆ ಕಿಟಕಿಗಳ ಮೇಲಿನ ಕಲ್ಲಿನ ಚೌಕಟ್ಟುಗಳು ರಂಧ್ರಗಳ ವಿನ್ಯಾಸದ ಅಥವಾ 'ಟ್ರೇಸರಿ'(ಕಲ್ಲಿನ ಕುಸುರಿ ಕೆಲಸ) ಹೊಸಕಲೆ ಹುಟ್ಟುವಂತೆ ಮಾಡಿದವು.

೧೨. ದೇವಾಲಯದ ಮೇಲ್ಚಾವಣಿಯೂ ಬಹಳ ತೆಳುವಾಗಿ ಅದರ ಭಾರವೆಲ್ಲ ಶಿಲೆಯ ದಪ್ಪ ತೊಲೆಗಳ ಮೇಲಿದ್ದು, ಅವುಗಳನ್ನು ದಪ್ಪ ಒದೆಗಂಬಗಳು ಹೊತ್ತಿರುತ್ತವೆ. ಒದೆಗಂಬಗಳ ಮೇಲೆ ಶಿಖರಗಳನ್ನು ಎತ್ತಿರುವುದು ಈ ಶೈಲಿಯ ವೈಶಿಷ್ಟ್ಯ.

೧೩. ಎತ್ತರವೇ ವಾಸ್ತುವಿನ ಮೂಲ ಮಂತ್ರ-ತಂತ್ರವಾಗಿರುವುದರಿಂದ ಚರ್ಚ್ ನೈಸರ್ಗಿಕ ವಿಕೋಪಗಳಿಗೆ ತುತ್ತಾಗದಂತೆ ನೋಡಿಕೊಳ್ಳಲು ಮತ್ತು ಸುಂದರವಾಗಿ ಕಾಣಲು ಗ್ರೀಕ್, ರೋಮನ್ ಶೈಲಿಯ ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಯ ಕಂಬಗಳನ್ನು ಒಳಗೊಂಡಿರುತ್ತದೆ.

೧೪. ಒಟ್ಟಾರೆಯಾಗಿ, ಕ್ರೈಸ್ತ ದೇವಾಲಯದ ಮುಂದೆ ನಿಂತರೆ ಅಗಾಧ ಮತ್ತು ಅದ್ಭುತವಾದ ಅನುಭವ ನೀಡುತ್ತದೆ. ಒಳಹೊಕ್ಕರೆ ಕ್ರೈಸ್ತನ ಶುಭಾಶೀರ್ವಾದದ ಬೆಳಕಿನಲ್ಲಿ ತೇಲಿ ದಂತಾಗುತ್ತದೆ.

## ಪುನರುತ್ಥಾನ(ಪುನರುಜ್ಜೀವನ) ಶೈಲಿ

೧೫ ಮತ್ತು ೧೬ನೇ ಶತಮಾನದ ಕಾಲಾವಧಿಯಲ್ಲಿ ಬೆಳಕಿಗೆ ಬಂಧುತ್ವದ ಕಲೆ ಪುನರುಜ್ಜೀವನ ಶೈಲಿಯಾಗಿದೆ. ಯುರೋಪ ಖಂಡದ ದೇಶಗಳಾದ ಫ್ರಾನ್ಸ್, ಜರ್ಮನ್, ಇಂಗ್ಲೆಂಡ್, ರಷ್ಯಾ ಮತ್ತು ಯುರೋಪನ ಇತರ ದೇಶಗಳಲ್ಲಿ ಈ ಶೈಲಿಯು ತುಂಬಾ ಪ್ರಭಾವವನ್ನು ಬೀರಿತು. ಈ ಶೈಲಿಯ ಕಟ್ಟಡಗಳು ಚೌಕಾಕಾರದಲ್ಲಿರುತ್ತವೆ. ಸುಂದರ ಕೆತ್ತನೆಯುಳ್ಳ ಕಂಬಗಳು, ಅರ್ಧಚಂದ್ರಾ ಕೃತಿಯ ಕಮಾನುಗಳು, ಛಾವಣಿಯಾಗಿ ಗುಮ್ಮಟಗಳು, ಚೌಕಾಕಾರದ ಬಾಗಿಲುಗಳು, ಅಲಂಕಾರಿಕ ಗೋಡೆಗಳು ಮತ್ತು ಹೂ ಬಳ್ಳಿಯ ಅಲಂಕಾರ ಇತ್ಯಾದಿ ಗುಣವೈಶಿಷ್ಟತೆಗಳಿಂದ ಕೂಡಿದರೆ ಅದು ಪುನರುಜ್ಜೀವನ ಶೈಲಿಯ ಲಕ್ಷಣಗಳನ್ನು ಹೊಂದಿದ ಸ್ಮಾರಕವೆಂದು ಸ್ಪಷ್ಟವಾಗಿ ಗುರುತಿಸಬಹುದು.[೩೧] ರೋಮ್ ಸ್ಟೆಂಟ್ ಪೀಟರ್ಸ್ ಬೆಸಿಲಿಕಾ, ಇಂಗ್ಲೆಂಡನ ಹಾರ್ಡ್‌ವಿಡ್ ಸಭಾಂಗಣ ಅತ್ಯಂತ ಮುಖ್ಯವಾದ ಕಟ್ಟಡಗಳು ಪುನರುಜ್ಜೀವನ ಶೈಲಿಯ ಸ್ಮಾರಕಕ್ಕೆ ಉದಾಹರಣೆಗಳಾಗಿವೆ.

## ರೋಮನೆಸ್ಕ್ ಶೈಲಿ

ಅಂಧಕಾರ ಯುಗ ಕಳೆದ ಮೇಲಿನ ಮೂರುನೂರು ವರ್ಷಗಳ ಐರೋಪ್ಯ ಶಿಲ್ಪ, ಕಲೆಗಳನ್ನು ರೋಮನೆಸ್ಕ್ ಶೈಲಿಯೆನ್ನುತ್ತಾರೆ(ಕ್ರಿ.ಶ.೧೦೦೦-೧೩೦೦). ಒಂದು ಕಾಲದಲ್ಲಿ ರೋಮನ್ ಸಾಮ್ರಾಜ್ಯ ಭಾಗಗಳಾಗಿದ್ದು ಅನಂತರ ಪ್ರತ್ಯೇಕಾಧಿಕಾರಕ್ಕೊಳಪಟ್ಟ ಇಟಲಿ, ಫ್ರಾನ್ಸ್, ಸ್ಪೇನ್ ಮೊದಲಾದ ಪ್ರಾಂತ್ಯಗಳಲ್ಲಿ ಕಂಡು ಬಂದುದರಿಂದ ಈ ಶಿಲ್ಪಕ್ಕೆ ರೋಮನೆಸ್ಕ್ ಎಂಬ ಹೆಸರು ಬಂದಿತು. ಇವುಗಳಿಗೆಲ್ಲ ಮೂಲ ರೋಮನ್ ಶಿಲ್ಪವಾದರೂ ಈ ಒಂದೊಂದು ಪ್ರಾಂತ್ಯ ತನ್ನದೇ ಆದ ರೀತಿಯಲ್ಲಿ ಶಿಲ್ಪ ಕಲೆಗಳನ್ನು ಬೆಳೆಸಿಕೊಂಡಿರುವುದನ್ನು ನಾವು ನೋಡಬಹುದು. ಇಟಲಿಯ ಪಿಸ ನಗರದ ಓಲು ಗೋಪುರದ ಪಕ್ಕದಲ್ಲಿರುವ ಕಥೀಡ್ರಲ್ ರೋಮನೆಸ್ಕ್ ಮಾದರಿಗೆ ಒಳ್ಳೆಯ ನಿದರ್ಶನ. ಅದು ರೋಮನ್ ಶಿಲುಬೆಯಂತಿರದೆ ಲ್ಯಾಟಿನ್ ಶಿಲುಬೆಯ ಆಕಾರದಲ್ಲಿದೆ. ಅಂದರೆ ಅದರ ಒಂದು ದಿಂಡು ಇನ್ನೊಂದಕ್ಕಿಂತ ಉದ್ದವಾಗಿದೆ. ಅಲ್ಲದೆ ಅದರ ಮುಖ ಪೂರ್ವಕ್ಕೆ ತಿರುಗಿದಂತಿದೆ. ಕೆಥೆಡ್ರಲಿನ ಕಂಬ ಸಾಲುಗಳ ಮೇಲಿನ ಮತ್ತು ಕಿಟಕಿಗಳ ಮೇಲಿನ ಗುಂಡು ಕಮಾನುಗಳು ರೋಮನೆಸ್ಕ್ ಮಾದರಿಯ ಮುಖ್ಯ ಗುಣಗಳನ್ನು ತೋರಿಸುತ್ತದೆ.[೩೩] ಕಂಬ ಸಾಲುಗಳಲ್ಲಿ ನೆಲದ ಮೇಲಿನ

ಮೊದಲ ಸಾಲು ಇದ್ದಷ್ಟು ಎತ್ತರವಾಗಿ ಮಹಡಿಯ ಕಂಬ ಸಾಲುಗಳಿಲ್ಲ. ಹಾಗೆಯೇ ಅದರ ಮೇಲಿನ ಸಾಲಿನ ಎತ್ತರವೂ ಕಡಿಮೆಯಾಗಿದೆ. ಇಟಲಿಯ ಒಂದೊಂದು ಊರಿನಲ್ಲೂ ಒಂದೊಂದು ವಾಸ್ತುಶೈಲಿ ಕೃತಿಯನ್ನು ಅದರದರ ವೈಶಿಷ್ಟ್ಯಕ್ಕಾಗಿ ನಾವು ಹೆಸರಿಸಬಹುದು. ಜರ್ಮನಿಯಲ್ಲೂ ಈ ಶೈಲಿಯ ಭವ್ಯ ಕಟ್ಟಡಗಳು ಹಲವಾರಿವೆ. ಇಂಗ್ಲೆಂಡಿನಲ್ಲಿ ನಾರ್ಮನರ ಕಾಲದಲ್ಲಾದ ಕಟ್ಟಡಗಳು ಗುಣರೂಪಗಳ ದೃಷ್ಟಿಯಿಂದ ರೋಮನೆಸ್ಕ್ ಶೈಲಿಯವಾದರೂ ಅದನ್ನು ನಾರ್ಮನ್ ಶೈಲಿಯೆನ್ನುವುದು ವಾಡಿಕೆ[೩೪] ಎಂಬ ಅಂಶ ದಾಖಲಾಗಿದೆ.

## ೩.೪. ಐರೋಪ್ಯ ವಾಸ್ತುಶಿಲ್ಪದ ಪ್ರಭಾವ

ಐರೋಪ್ಯರ ಗಾಢವಾದ ಪ್ರಭಾವದಿಂದ ಭಾರತದಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕವಾದ ವಿಚಾರಗಳಲ್ಲಿ ಹಲವಾರು ರೀತಿಯ ಪರಿಣಾಮಗಳನ್ನು ಈಗಾಗಲೇ ವಿಭಿನ್ನ ನೆಲೆಯಲ್ಲಿ ಅಧ್ಯಯನಿಸಲಾಗಿದೆ ಮತ್ತು ವಿಮರ್ಶಿಸಲಾಗಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಜನರು ಸಾಧಿಸಿದ ಪ್ರಗತಿಯನ್ನು ವಿಶ್ಲೇಷಿಸಿದರೆ, ಜೀವನ ಮತ್ತು ಸಮಾಜದಲ್ಲಿ ಪಾಶ್ಚಿಮಾತ್ಯರ ಪ್ರಭಾವಕ್ಕೊಳಗಾಗದೇ ಉಳಿದಿರುವ ಯಾವ ಅಂಶವೂ ಇಲ್ಲವೆಂಬುದು ತಿಳಿಯುತ್ತದೆ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಶಿಕ್ಷಣ, ಮುದ್ರಣ ಕ್ಷೇತ್ರ, ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ಜರುಗಿದ ಬದಲಾವಣೆಯು ಅಷ್ಟೇ ಕ್ರಾಂತಿಕಾರಕವಾಗಿತ್ತು. ಈ ಅಂಶಗಳು ಭಾರತವನ್ನು ಮಧ್ಯಯುಗದಿಂದ ಆಧುನಿಕ ಯುಗಕ್ಕೆ ಪರಿವರ್ತನೆಗೊಳ್ಳುವಂತೆ ಮಾಡಿದವು. ಹತ್ತೊಂಬತ್ತನೆಯ ಶತಮಾನವು ಒಂದು ವಿಭಜನೆ ರೇಖೆಯಾಗಿದೆ. ಏಕೆಂದರೆ, ಭಾರತದ ರೂಪವನ್ನೇ ಬದಲಾಯಿಸಿದ್ದಿತು. ಹಿಂದಿನ ಸಾವಿರ ವರ್ಷಗಳಲ್ಲಿ ಕಂಡುಬರದಿದ್ದಷ್ಟು ದೊಡ್ಡ ಬದಲಾವಣೆ ಈ ಒಂದು ಶತಮಾನದಲ್ಲಾಗಿದೆ. ಇದು ಭಾರತದ ಮೇಲೆ ಪಾಶ್ಚಾತ್ಯ ಸಂಸ್ಕೃತಿ ಬೀರಿದ ಪ್ರಭಾವವನ್ನು ಸೂಚಿಸುತ್ತದೆ.[೩೫] ಐರೋಪ್ಯ ವಾಸ್ತುಶಿಲ್ಪದ ಪ್ರಭಾವಕ್ಕೆ ಭಾರತದಲ್ಲಿ ಸಂಪತ್ಭರಿತ ನಾಡು, ಮೂಲ ಸೌಕರ್ಯಗಳು ಮೂಲ ಕಾರಣಗಳಾಗಿವೆ.

ಭಾರತದಲ್ಲಿ ಯುರೋಪಿಯನ್ ವಾಸ್ತುಶಿಲ್ಪವು ಪ್ರಾರಂಭವಾದುದು ೧೮೫೭ರ ಪ್ರಥಮ ಸ್ವಾತಂತ್ರ್ಯ ಸಮರದ ನಂತರ ಅವರ ಆಳ್ವಿಕೆಯು ಭದ್ರವಾಗಿ ನೆಲೆಯೂರಿದ ಮೇಲೆಯೇ ಎಂದು ಗುರುತಿಸಬಹುದು. ಇದಕ್ಕೂ ಪೂರ್ವದಲ್ಲಿ ಅವರ ವಾಸ್ತುಶಿಲ್ಪದ ಪ್ರಭಾವ ಇರಲಿಲ್ಲವೆ? ಇತ್ತು. ಅದು ಮೊದಲು ಧಾರ್ಮಿಕ ವಾಸ್ತುಶಿಲ್ಪ ಪ್ರಭಾವ ಬೀರಿತು. ಏಕೆಂದರೆ, ಯೂರೋಪಿಯನ್ನರಾದ ಪೋರ್ಚುಗೀಸರು, ಡಚ್ಚರು, ಇಂಗ್ಲಿಷರು ಮತ್ತು ಫ್ರೆಂಚರು ಇವರು ಭಾರತಕ್ಕೆ ಬಂದದ್ದು ವ್ಯಾಪಾರಿಗಳಾಗಿ. ಹಾಗಾಗಿ ಅವರು ಮೊದಲು ಕೈಗಾರಿಕಾ ಕಾರ್ಖಾನೆಗಳನ್ನು

ಸ್ಥಾಪಿಸಿ. ಅವುಗಳಿಗೆ ವ್ಯಾಪಾರಿ ನೆಲೆಗಳನ್ನು ಅಥವಾ ಕೋಠಾರಿಗಳಿಗಾಗಿ ಪೈಪೋಟಿಯಲ್ಲಿ ನಿರತರಾಗಿದ್ದ ಕಾರಣಕ್ಕಾಗಿ ಕ್ರೈಸ್ತ ಮಿಷನರಿಗಳು ಗೋವಾವನ್ನು ಪ್ರಮುಖ ಧಾರ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡು ಆ ಮೂಲಕ ಭಾರತದಾದ್ಯಂತ ಕ್ರೈಸ್ತಧರ್ಮ ಪ್ರಸಾರ ಮಾಡಿದರು. ಮಿಷನರಿಗಳು ಆರಾಧನಾ ಸೇವೆಗಾಗಿ, ಪ್ರಾರ್ಥನಾ ಮಂದಿರಗಳನ್ನು ಸ್ಥಾಪಿಸಿಕೊಂಡರು. ಕ್ರಿ.ಶ.೧೫೧೦ರಲ್ಲಿ ಕೇರಳದ ಕೊಚ್ಚಿಯಲ್ಲಿ ಕಟ್ಟಿದ ಸ್ಟೆಂಟ್ ಫ್ರಾನ್ಸಿಸ್ ಚರ್ಚ್, ಕ್ರೈಸ್ತ ಮಿಷನರಿಗಳು ಭಾರತದಲ್ಲಿ ಕಟ್ಟಿದ ಮೊದಲ ಚರ್ಚ್ ಅದಾಗಿದೆ. ಇವರ ಪ್ರಭಾವ ಕರ್ನಾಟಕದಲ್ಲಿಯೂ ಆರಂಭಗೊಂಡಿದ್ದಲ್ಲದೆ, ಕ್ರೈಸ್ತ ದೇವಾಲಯಗಳನ್ನು ನಿರ್ಮಾಣ ಮಾಡಿಕೊಂಡರು. ಕರ್ನಾಟಕದಲ್ಲಿ ಮೊಟ್ಟಮೊದಲು ಮಂಗಳೂರಿನಲ್ಲಿ ಚರ್ಚ್‌ಗಳನ್ನು ನಿರ್ಮಿಸಿದರು.[೩೬] ಬಂದರು ಪ್ರದೇಶಗಳು ಹೆಚ್ಚಾಗಿ ಬ್ರಿಟಿಷರಿಗೆ ಆಕರ್ಷಿತವಾದವು.

ಭಾರತದಲ್ಲಿ ವ್ಯಾಪಾರಿ ನೆಲೆಗಳಿಗಾಗಿ ಅಥವಾ ವಸಾಹತು ನೆಲೆಗಳಿಗಾಗಿ ಯುರೋಪಿಯನ್ನರ ನಡುವೆ ನಡೆದ ಪೈಪೋಟಿಯಲ್ಲಿ ಬ್ರಿಟಿಷರು ಮೇಲುಗೈ ಸಾಧಿಸಿದರು. ಇವರು ಭಾರತದಲ್ಲಿ ದತ್ತು ಮಕ್ಕಳಿಗೆ ಹಕ್ಕಿಲ್ಲ. ಸಹಾಯಕ ಸೈನ್ಯ ಪದ್ಧತಿಯಂತಹ ರಾಜಕೀಯ ನೀತಿಗಳನ್ನು ಜಾರಿಗೆ ತಂದು, ಆ ಮೂಲಕ ಸ್ಥಳೀಯ ರಾಜರೊಡನೆ ಹಂತ ಹಂತವಾಗಿ ಯುದ್ಧಗಳನ್ನು ಮಾಡಿ, ಜಯ ಸಾಧಿಸಿ, ಇಡೀ ಭಾರತವನ್ನು ೧೮೫೮ರಲ್ಲಿ ತಮ್ಮ ಕಪಿಮುಷ್ಠಿಯಲಿಟ್ಟುಕೊಂಡರು. "ಬ್ರಿಟಿಷರು ಮೊದಲು ಮದರಾಸಿನಲ್ಲಿ ೧೬೪೧ರಲ್ಲಿ ಕಾರ್ಖಾನೆಗಳನ್ನು, ಕೋಠಿಗಳನ್ನು ಸ್ಥಾಪಿಸಿದರು."[೩೭] ಇವರು ಬಂಗಾಳ ಪ್ರಾಂತದೊಂದಿಗೆ ವ್ಯಾಪಾರ ಪ್ರಾರಂಭಿಸಿದ್ದ ಕಾರಣಕ್ಕಾಗಿ ೧೬೯೧ರಲ್ಲಿ ಕಲ್ಕತ್ತ ಪಟ್ಟಣ ನಿರ್ಮಾಣವಾಯಿತು. ಪೋರ್ಚುಗೀಸರ ಸ್ವಾಧೀನದಲ್ಲಿದ್ದ ಮುಂಬಯಿ ಇಂಗ್ಲೆಂಡಿನ ದೊರೆ ಎರಡನೆಯ ಚಾರ್ಲ್ಸ್‌ನ ರಾಣಿಗೆ ಬಳುವಳಿಯಾಗಿ ದೊರೆಯಿತು. ಕಾಲ ಕ್ರಮೇಣ ಈಸ್ಟ್ ಇಂಡಿಯಾ ಕಂಪನಿಯ ಸರಕುಗಳನ್ನು, ವ್ಯಾಪಾರವನ್ನು ಸುಭದ್ರವಾಗಿಡಲು ವಸಾಹತುಗಳ ಸುತ್ತಲೂ ಕೋಟೆ ಕೊತ್ತಲಗಳನ್ನು ಕಟ್ಟಬೇಕಾಯಿತು. ಈ ಕಾರಣದಿಂದ ಪಶ್ಚಿಮ ತೀರದಲ್ಲಿದ್ದ ಕೋಠಿಯನ್ನು ಸೂರತ್ತಿನಿಂದ ಮುಂಬಯಿಗೆ ವರ್ಗಾಯಿಸಲಾಯಿತು. ಕಲ್ಕತ್ತದ ಕಾರ್ಖಾನೆ ಮತ್ತು ಕೋಠಿಗಳನ್ನು ಪೋರ್ಟ್ ವಿಲಿಯಂ ಕೋಟೆಯಲ್ಲಿ ಸ್ಥಾಪಿಸಲಾಯಿತು. ಚೆನ್ನೈನ ಕೋಟೆಗೆ ಪೋರ್ಟ್ ಸೆಂಟ್ ಡೇವಿಡ್ ಎಂದೂ ಹೆಸರಾಯಿತು. ವ್ಯಾಪಾರ ಬೆಳೆದ ಹಾಗೆ ಭಾರತದ ಪಟ್ಟಣಗಳು ವೃದ್ಧಿಯಾದವು. ಬ್ರಿಟಿಷರು ಭಾರತಕ್ಕೆ ಬಂದಾಗ ಮದರಾಸ್ ಮತ್ತು ಕಲ್ಕತ್ತ ನಗರಗಳು ಮಾತ್ರ ಮುಖ್ಯ ವ್ಯಾಪಾರ ನಗರಗಳಾಗಿದ್ದವು. ಆ ನಂತರ ಅವರ ಮುಂದುವರಿದ ಆರ್ಥಿಕ ಚಟುವಟಿಕೆಯಿಂದ ಕಾನ್ಪುರ ಮತ್ತು ಸೊಲ್ಲಾಪುರ ನಗರಗಳು ಶೀಘ್ರವಾಗಿ ಬೆಳವಣಿಗೆಯಾದವು. ರೈಲ್ವೆ ಮತ್ತು ಸಮುದ್ರ ಮಾರ್ಗಗಳನ್ನು ಬ್ರಿಟಿಷರು ತಮ್ಮ ವಾಣಿಜ್ಯ ವ್ಯಾಪಾರದ ಪ್ರಗತಿಗೆ ಅಭಿವೃದ್ಧಿಪಡಿಸಿದರು.

ಇದರಿಂದ ಬಾಂಬೆ, ಮದರಾಸ್, ಕಲ್ಕತ್ತ, ದೆಹಲಿ, ಕಂಚಿ, ಲಾಹೋರ್, ಹುಬ್ಬಳ್ಳಿ ಹೈದರಾಬಾದ್, ಬಳ್ಳಾರಿ, ಆದೋನಿ, ಕೊಟ್ಟೂರು ಹಾಗೂ ಬಾಗಲಕೋಟೆ, ಬಾದಾಮಿ, ಗುಳೇದಗುಡ್ಡ, ಕಲಾದಗಿ, ಬೀಳಗಿ, ಪ್ರಮುಖ ಕೇಂದ್ರಗಳಾಗಿ ಮಾರ್ಪಟ್ಟು ದೊಡ್ಡ ವ್ಯಾಪಾರ ಕೇಂದ್ರದ ನಗರಗಳಾಗಿ ಬೆಳೆಯಲು ಕಾರಣವಾದವು.

ಬ್ರಿಟಿಷರು ತಮ್ಮ ಪ್ರಭಾವವನ್ನು ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಅಚ್ಚಳಿಯದಂತೆ ಉಳಿಸಿ ಹೋಗಿದ್ದಾರೆ. ಹತ್ತೊಂಬತ್ತನೆಯ ಶತಮಾನದಲ್ಲಿ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲೂ ಮಹತ್ವದ ಬದಲಾವಣೆ ಇವರ ಪ್ರಭಾವದಿಂದ ಕಂಡುಬಂದಿತು. ಇದಕ್ಕೆ ಕಾರಣ ಬ್ರಿಟಿಷರು ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಕರ್ನಾಟಕವನ್ನು ಆಡಳಿತ ಹಿತದೃಷ್ಟಿಯಿಂದ ಮದರಾಸ್, ಮುಂಬಯಿ, ಹೈದರಾಬಾದ್, ಮೈಸೂರು ಮತ್ತು ಕೊಡಗು ಪ್ರಾಂತ್ಯವೆಂದು ಐದು ಆಡಳಿತ ವಿಭಾಗಗಳಾಗಿಸಿಕೊಂಡು ಆಡಳಿತವನ್ನು ನಡೆಸುತ್ತಿದ್ದರು. ಪ್ರತಿಯೊಂದು ಪ್ರಾಂತ್ಯವನ್ನು ಜಿಲ್ಲೆಗಳನ್ನಾಗಿ ವಿಂಗಡಿಸಿಕೊಂಡು ಅದರಲ್ಲಿ ಮತ್ತೆ ತಾಲ್ಲೂಕುಗಳನ್ನಾಗಿ ವಿಭಾಗಿಸಿಕೊಂಡು ಅಲ್ಲಿ ಪ್ರಮುಖವಾಗಿ, ಆಡಳಿತ ಕಛೇರಿ, ನ್ಯಾಯಾಲಯ, ಸೈನಿಕ ಬಂಗಲೆ, ಸೆರೆಮನೆ(ಜೈಲು), ಪರಿವೀಕ್ಷಣ ಮಂದಿರ(ಐಬಿ) ಕ್ರೈಸ್ತ ದೇವಾಲಯ(ಚರ್ಚ್), ಪೊಲೀಸ್ ಠಾಣೆ ಶಾಲಾ ಕಟ್ಟಡ, ವಿದ್ಯಾರ್ಥಿಗಳಿಗೆ ವಸತಿ ನಿಲಯ, ರೈಲ್ವೆ ಸೇತುವೆ, ರಸ್ತೆ ಸೇತುವೆ, ಬಂಗಲೆ ಹಾಗೂ ಬ್ರಿಟಿಷ್ ಅಧಿಕಾರಿಗಳ ಸಮಾಧಿಗಳನ್ನು ತಮ್ಮ ತಾಯ್ನಡಾದ ಯುರೋಪ್‌ದಲ್ಲಿ ಪ್ರಚಲಿತವಾಗಿದ್ದ ಕಲಾ ಶೈಲಿ ಅಥವಾ ವಸಾಹತು ಶೈಲಿಗಳಾದ ಗಾಥಿಕ್, ಐಯೋನಿಕ್, ಕಾರಿಂಥಿಯನ್ ಮತ್ತು ಡೋರಿಕ್ ಶೈಲಿಯಲ್ಲಿ ನಿರ್ಮಾಣ ಮಾಡಿದರು.[೩೮] ಇವೆಲ್ಲಾ ವಾಸ್ತುಶೈಲಿಗಳು ನಿರ್ಮಾಣವಾಗಲು ಸ್ಥಳೀಯ ಕಚ್ಚಾ ಸಾಮಗ್ರಿಗಳನ್ನು ಉಪಯೋಗಿಸಲಾಯಿತು.

ಬ್ರಿಟಿಷರಿಂದ ನಿರ್ಮಾಣವಾದಂತಹ ವಸಾಹತು ಕಾಲದ ಸ್ಮಾರಕಗಳು ನೋಡಲು ಸುಂದರವಾಗಿವೆ. ಆದರೆ ಅವುಗಳಲ್ಲಿ ಯಾವ ದೈವೀ ತತ್ವವು ವ್ಯಕ್ತವಾಗುವಂತಿಲ್ಲ. ಭಾರತ ದೇಶದ ಗತಕಾಲದ ಕಲಾ ಸಂಪ್ರದಾಯಗಳಿಗೆ ಸಂಗತವಾದ ವಾಸ್ತು ಲಕ್ಷಣಗಳು ಅವುಗಳಲ್ಲಿ ಗೋಚರಿಸುವಂತಿಲ್ಲ. ಪುರಾತನ ಸಂಸ್ಕೃತಿಯ ಜೀವನ ತತ್ವಗಳನ್ನಾಗಲಿ, ಕಲಾ ತತ್ವಗಳನ್ನಾಗಲಿ ಅವು ಹೊಮ್ಮಿಸುವಂತಿಲ್ಲ. ಡಾ.ರಂಗಾಚಾರ್ಯರು ಹೇಳಿರುವಂತೆ, 'ಬ್ರಿಟಿಷ್ ಕಾಲದ ಕಟ್ಟಡಗಳು ಮೂಖ ಜಡ ವಸ್ತುಗಳು, ಅವು ಧ್ವನಿಪೂರ್ಣವಾಗಿಲ್ಲ. ರೋಮಾಂಚನಕಾರಿ ಘಟನೆಯ ಸ್ಮಾರಕಗಳಂತೆ, ನಮ್ಮ ಜನಮನದ ಹೃದಯವನ್ನು ಅವು ಮೂದಲಿಸುವುದಿಲ್ಲ. ನಮ್ಮ ಜನಾಂಗಕ್ಕೆ ವಿಶಿಷ್ಠವಾದ 'ಕಾಣ್ಕೆ' ಅವುಗಳಲ್ಲಿಲ್ಲ. "ಈ ಕಟ್ಟಡದಲ್ಲಿ ಮಿತವ್ಯಯ, ಶೈಲಿಯಲ್ಲಿ ಸರಳತೆ, ಇವೆರಡೂ ಶ್ಲಾಘ್ಯ ಗುಣಗಳೇ ಸರಿ. ಆದರೆ, ಮಿತವ್ಯಯದ ಹೆಸರಿನಲ್ಲಿ ರೂಪ

ಸೌಂದರ್ಯವೂ ಸೂಕ್ತ ಅಲಂಕರಣ ರೀತಿಯೂ ಎಷ್ಟೋ ಕಡೆ ಲುಪ್ತವಾಗಿವೆ. ಆಧುನಿಕ ಕಟ್ಟಡಗಳ ನಿರ್ಮಾಣಕ್ಕೆ ತಗುಲುವ ವೆಚ್ಚ ಕಡಿಮೆ, ಹಿಡಿಯುವ ಕಾಲವೂ ಕಡಿಮೆ. ಆದರೆ ಅವು ಹೆಚ್ಚಾಗಿ ಅನುಕರಣ ಕೃತಿಗಳೇ ಹೊರತು, ಘನವಾದ ಜೀವನ ತತ್ವ ದ್ಯೋತಕವಾದ ಕಲಾಕೃತಿಗಳಲ್ಲ. ಬ್ರಿಟಿಷ್ ಪರಂಪರೆಯಲ್ಲಿ ನಿರ್ಮಿತವಾದ ಕಟ್ಟಡಗಳ ವಿನ್ಯಾಸಗಳು ನಿರ್ಮಾಪಕನ 'ಹುಚ್ಚು ಮನಸ್ಸಿನ ಹತ್ತು ಮುಖಗಳೇ ಹೊರತು, ಯಾವ ನಿರ್ದಿಷ್ಟ ಶಾಸ್ತ್ರ ನಿಯಮಕ್ಕೂ ಅವು ಹೊಂದಿಕೆಯಾಗುವುದಿಲ್ಲ.[೩೬] ರಂಗಾಚಾರ್ಯರು ಹೇಳುವಂತೆ, ಅವು ಕೇವಲ ವಿದೇಶಿಯ ಸಂಸ್ಕೃತಿಯ, ವಿದೇಶಿಯ ಸಂಪ್ರದಾಯ, ವಿದೇಶಿಯ ವ್ಯಂಜನಾ ರೀತಿಯ ಅಂಧಾನುಕರಣವಲ್ಲದೆ ಬೇರೇನು ಅಲ್ಲ. 'ನಿಜವಾದ ವಾಸ್ತುಶಿಲ್ಪ ತತ್ವಗಳು ಕಾರ್ಯರೂಪಕ್ಕೆ ಬಂದಿರುವುದು ಭಾರತದಲ್ಲಿಲ್ಲದೆ ಬೇರೆಲ್ಲೂ ಅಲ್ಲ' ಎಂದು ಫರ್ಗ್ಯುಸನ್ ಹೇಳಿರುವುದರಲ್ಲಿ ಅತ್ಯುಕ್ತಿಯೇನು ಇಲ್ಲ.

ಬ್ರಿಟಿಷರು ನಮ್ಮ ನಾಡಿನಲ್ಲಿ ಹವಾಮಾನಕ್ಕೆ ಅನುಗುಣವಾಗಿ ಆಯಾ ಪ್ರದೇಶಗಳಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಅವುಗಳಲ್ಲಿ ರೋಮನ್ ಕಮಾನುಗಳೂ, ಕಮಾನು ಸರಣಿಗಳೂ, ಗುಮ್ಮಟ ಮಾದರಿಗಳೂ ಪದೇ ಪದೇ ಕಂಡುಬರುತ್ತವೆ. ಬ್ರಿಟಿಷರು ಕಟ್ಟಡಗಳನ್ನು ನಿರ್ಮಿಸುವಾಗ ಸ್ಥಳೀಯವಾಗಿ ದೊರೆಯುವ ಇಟ್ಟಿಗೆ, ಗಾರೆ–ಗಚ್ಚು, ಜಲ್ಲಿ ಕಲ್ಲಿನ ಗಾರೆ, ಕಪ್ಪು, ಕೆಂಪು ಶಿಲೆ ಇವುಗಳನ್ನು ಬಳಸಿ ಕಾಲಾಂತರದಲ್ಲಿ ಬದಲಾವಣೆಯನ್ನು ಹೊಂದುತ್ತಾ ಸಿಮೆಂಟ್, ಕಾಂಕ್ರೀಟು, ಕಬ್ಬಿಣದ ಸರಳು, ಸ್ಥಳೀಯವಾಗಿ ದೊರೆಯುವ ಕಟ್ಟಿಗೆ, ಕಲ್ಲು, ಸೀಮೆ ಸುಣ್ಣವನ್ನು ಉಪಯೋಗಿಸಿದ್ದು, ಸ್ಮಾರಕಗಳನ್ನು ನೋಡಿದಾಗ ಸ್ಪಷ್ಟವಾಗಿ ಗೋಚರಿಸುತ್ತದೆ. ಬ್ರಿಟಿಷರು ಕಟ್ಟಡಗಳಿಗೆ ನುಣುಪು ಮಾಡಿದ ಸಾಮಾನ್ಯ ಗಾತ್ರದ ಕಲ್ಲನ್ನು ಬಳಸಿಕೊಂಡಿದ್ದರಿಂದ ಕಟ್ಟಡದ ಗೋಡೆ ಮತ್ತು ಕಂಬಗಳ ಹೊರ ನೋಟಕ್ಕೆ ವೈಭವೋ ಪ್ರೇರಿತವಾಗಿ ಕಂಡುಬರುತ್ತವೆ. ಕಟ್ಟಡಗಳ ಮುಂಭಾಗದ ಮುಖ್ಯದ್ವಾರ ಮತ್ತು ಕಿಟಕಿಗಳನ್ನು ಸುಂದರವಾದ ಮತ್ತು ಆಕರ್ಷಣೀಯವಾದ ಎಲೆ ಮೊನಚಿನಾಕಾರದ ಇಲ್ಲವೆ ದುಂಡನೆಯ ಕಮಾನುಗಳಿಂದ ವಿನ್ಯಾಸಗೊಳಿಸಿದ್ದಾರೆ. ಈ ಕಮಾನುಗಳನ್ನು ಕಲ್ಲು, ಇಟ್ಟಿಗೆ, ಗಾರೆಗಚ್ಚು, ಸೀಮೆಸುಣ್ಣವನ್ನು ಬಳಸಿಕೊಂಡು ವಿಶೇಷ ತಂತ್ರಜ್ಞಾನದೊಂದಿಗೆ ವಿನ್ಯಾಸಗೊಳಿಸಲಾಗಿದೆ. ಇಂತಹ ಕಮಾನು ಶೈಲಿಯ ಕಟ್ಟಡಗಳನ್ನು ನಾವು ಮುಸ್ಲಿಂ ಮಸೀದಿ, ದರ್ಗಾಗಳಲ್ಲಿ ಕಾಣುತ್ತೇವೆ. ಈ ಶೈಲಿಯನ್ನು ಮುಸ್ಲಿಂರು ಹೆಚ್ಚು ಬಳಸಿಕೊಂಡಿದ್ದರೂ ಕೂಡಾ ಅದು ಮೂಲತಃ ರೋಮನ್ನರ ಶೈಲಿಯಾಗಿದೆ. ಇದು ೧೨ನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಮುಸ್ಲಿಂರ ಪ್ರಭಾವದಿಂದ ಭಾರತಕ್ಕೆ ಪ್ರವೇಶಿಸಿತು. ಈ ಕಮಾನು ಶೈಲಿಯನ್ನು ದೆಹಲಿ ಸುಲ್ತಾನರು ಮತ್ತು ಮೊಗಲರ ಕಾಲಾವಧಿಯಲ್ಲಿ ಹೆಚ್ಚು ಬಳಸಿಕೊಂಡಿರುವುದು ಕಂಡುಬಂದಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರು ಅದನ್ನು ಅನುಸರಿಸುವುದು, ಅವರು ಇಲ್ಲಿ

ನಿರ್ಮಿಸಿರುವ ಕಟ್ಟಡಗಳಿಂದ ದೃಢಪಡುತ್ತದೆ. ಉದಾ: ಮೈಸೂರು, ಬೆಂಗಳೂರು, ಧಾರವಾಡ, ಬೆಳಗಾವಿ, ಬಳ್ಳಾರಿ, ಬಾಗಲಕೋಟೆ, ವಿಜಯಪುರ ಮುಂತಾದ ನಗರಗಳಲ್ಲಿರುವ ಬ್ರಿಟಿಷರ ಸ್ಮಾರಕಗಳಲ್ಲಿ ಕಂಬ ಸಾಲುಗಳ ಮೇಲೆ ಹಾಗೂ ಕಿಟಕಿ–ಬಾಗಿಲುವಾಡಗಳ ಮೇಲೆ ಅರ್ಧ ಚಂದ್ರಾಕೃತಿಯ ದುಂಡು ಕಮಾನುಗಳಿಂದ ಕೂಡಿದ ಕಟ್ಟಡಗಳನ್ನು ಇಂದಿಗೂ ಸಹ ನೋಡ ಬಹುದಾಗಿದೆ.[೪೦] ಇಲ್ಲಿ ವಸಾಹತು ವಾಸ್ತುಶೈಲಿಯು ಸ್ಥಳೀಯ ವಾಸ್ತುಶೈಲಿಯ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿರುವುದು ಗುರುತಿಸಲಾಗಿದೆ.

ಬ್ರಿಟಿಷರು ಕಟ್ಟಡಗಳಿಗೆ ಅತಿ ಹೆಚ್ಚು ಕಬ್ಬಿಣ ಕಟ್ಟಿಗೆ, ಗಾರೆಗಚ್ಚು, ಇಟ್ಟಿಗೆ ಮತ್ತು ಮಂಗಳೂರು ಕೆಂಪು ಹೆಂಚು ಬಳಸಿರುವುದು ಕಂಡುಬರುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಬಂದ 'ಬಾಸೆಲ್ ಮಿಷನ್ ಮಿಷನರಿಗಳು ೧೮೬೫ರಲ್ಲಿ ಮಂಗಳೂರಿನ ಜೆಪ್ಪುವಿನಲ್ಲಿ ಹೆಂಚಿನ ಕಾರ್ಖಾನೆಯನ್ನು ಮೊಟ್ಟ ಮೊದಲ ಬಾರಿಗೆ ಸ್ಥಾಪಿಸಿದರು.[೪೧] ಇಲ್ಲಿಂದ ಕರ್ನಾಟಕದಾದ್ಯಂತಹ ಸರಬರಾಜು ಆಗಿರುವುದು ಆ ಒಂದು ಕಾಲಘಟ್ಟದಲ್ಲಿ ನಿರ್ಮಾಣಗೊಂಡ ಕಟ್ಟಡಗಳಿಂದ ದೃಢಪಟ್ಟಿದೆ. ಇದಕ್ಕೂ ಪೂರ್ವದಲ್ಲಿ ಹೆಂಚಿನ ಬಳಕೆ ಇರಲಿಲ್ಲವೆ? ಇತ್ತು. ಅದು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಕುಂಬಾರರು ತಮ್ಮ ಚಕ್ರಗಳ ಮೂಲಕ ತಯಾರಿಸಿದ ಅರ್ಧಚಂದ್ರಾಕೃತಿಯ ಸಣ್ಣ ಹೆಂಚುಗಳನ್ನು ತಯಾರಿಸಿ, ಬಳಸುತ್ತಿದ್ದರು. ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಮಂಗಳೂರು ಜಿಲ್ಲೆಯಲ್ಲಿ ಇಂಜಿನಿಯರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದ ಆಂಡ್ರೂಪ್ಲೆಬ್ಸ್ಟ್ ಎಂಬುವರು ಮಣ್ಣಿನ ವಸ್ತುಗಳ ತಯಾರಿಕೆಯಲ್ಲಿ ಅಧ್ಯಯನ ನಡೆಸುತ್ತಿದ್ದ ಸಮಯದಲ್ಲಿ ಇವರು ಜರ್ಮನಿಗೆ ತೆರಳಿ ಮಣ್ಣು ಹದ ಮಾಡುವುದು, ಹೆಂಚು ತಯಾರಿ, ಹೆಂಚು ಸುಡುವ, ಗೂಡು ನಿರ್ಮಿಸುವುದು, ಬೇಯಿಸುವುದು ಮುಂತಾದ ಕ್ರಮಗಳ ಬಗ್ಗೆ ತರಬೇತಿಯನ್ನು ಪಡೆದರು. ಇವರ ಶ್ರಮದ ಫಲವಾಗಿ ಮಂಗಳೂರಿನಲ್ಲಿ ಹೆಂಚಿನ ಕಾರ್ಖಾನೆಗಳು ಆರಂಭಗೊಂಡವು.[೪೨] ಇಲ್ಲಿಯ ಹೆಂಚುಗಳು ಉತ್ಕೃಷ್ಟ ಗುಣಮಟ್ಟದಿಂದ ತಯಾರಿಸಲಾಗುತ್ತಿತ್ತು. ಹಾಗಾಗಿ ವಿಶ್ವದಾದ್ಯಂತ ಮಂಗಳೂರು ಹೆಂಚು ಎಂಬ ಖ್ಯಾತಿಗೆ ಪಾತ್ರವಾಯಿತು. ಕರ್ನಾಟಕದಲ್ಲಿ ಬ್ರಿಟಿಷರು ನಿರ್ಮಿಸಿದ ಕಟ್ಟಡಗಳಲ್ಲಿ ಶಾಲೆ, ನಿರೀಕ್ಷಣಾ ಮಂದಿರ, ಆಡಳಿತ ಕಛೇರಿ, ಬಂಗಲೆಗಳಿಗೆ ಬಹುತೇಕವಾಗಿ ಮಂಗಳೂರು ಹೆಂಚು ಉಪಯೋಗಿಸಿರುವುದು ನೋಡಬಹುದು. ಇವರು ನಿರ್ಮಿಸಿದ ಕಟ್ಟಡಗಳಲ್ಲಿ ಬಹಳ ಮುಖ್ಯವಾದ ವಿಶೇಷತೆಯೆಂದರೆ, ಕಟ್ಟಡಗಳ ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಹೇರಳವಾಗಿ ಒಳ ನುಸುಳಿ ಬರುವಂತೆ ದೊಡ್ಡ, ದೊಡ್ಡ ಕಿಟಕಿ–ಬಾಗಿಲುಗಳು ಮತ್ತು ವಿವಿಧ ಬಣ್ಣದ ಗಾಜನ್ನು ಅಳವಡಿಸಿ, ವಿನ್ಯಾಸಗೊಳಿಸಿರುವುದು ಗೋಚರಿಸುತ್ತದೆ. ಏಕೆಂದರೆ, ವಸಾಹತುಶಾಹಿ ಆಳ್ವಿಕೆಯ ಆರಂಭದಲ್ಲಿ ವಿದ್ಯುತ್ ವ್ಯವಸ್ಥೆ ಇರಲಿಲ್ಲ. ಹಾಗಾಗಿ ಅವರು ಕಿಟಕಿ ಮತ್ತು ಬಾಗಿಲುಗಳ

ಮೂಲಕ ಗಾಳಿ, ಬೆಳಕು ಪ್ರವೇಶಿಸಲು ಅನುಕೂಲಕರ ರೀತಿಯಲ್ಲಿ ವ್ಯವಸ್ಥಿತವಾಗಿ ಬ್ರಿಟಿಷರು ನಿರ್ಮಿಸಿರುವುದು ವಿಶೇಷ ತಾಂತ್ರಿಕತೆಯಿಂದ ಕೂಡಿದೆ.

ಬಾಗಲಕೋಟೆ ಇಡಿ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಗಮನಿಸಿದಾಗ ಬ್ರಿಟಿಷರು ಕಟ್ಟಡಗಳನ್ನು ನಿರ್ಮಿಸಲು ಎರಡು ಬಗೆಯ ಸ್ಥಳಗಳನ್ನು ಆಯ್ಕೆ ಮಾಡಿಕೊಂಡಿರುವುದು ಇಲ್ಲಿ ಗುರುತಿಸಲಾಗಿದೆ.

**೧. ಒಂದು ಗಿರಿ-ಬೆಟ್ಟಗುಡ್ಡ ಎತ್ತರದ ಸ್ಥಳ:** ಬಾಗಲಕೋಟೆ ಪರಿಸರವು ಬೇಸಿಗೆ ಕಾಲಾವಧಿಯಲ್ಲಿ ಅತೀ ಹೆಚ್ಚು ಬಿಸಿಲಿನ ವಾತಾವರಣವನ್ನು ಹೊಂದಿದ್ದ ಕಾರಣಕ್ಕಾಗಿ ಬ್ರಿಟಿಷರು ಗುಳೇದಗುಡ್ಡದ ಹತ್ತಿರ ಸುಮಡ್ಡಿಯಲ್ಲಿ ಬಂಗಲೆ, ಚರ್ಚ್, ಶಾಲೆ, ಅನಾಥಾಶ್ರಮ, ವಸತಿಗೃಹಗಳನ್ನು ನಿರ್ಮಿಸಿದರು. ಅದರಂತೆ ಜಮಖಂಡಿಯ ಪಟವರ್ಧನ ಸಂಸ್ಥಾನಿಕರೊಂದಿಗೆ ಒಪ್ಪಂದ ಮಾಡಿಕೊಂಡು, ಜಮಖಂಡಿಯ ರಾಮತೀರ್ಥ ಬೆಟ್ಟದಲ್ಲಿ ಅರಮನೆ(ಪ್ಯಾಲೇಸ್), ಅಧಿಕಾರಿಗಳ ವಸತಿಗೃಹಗಳು, ಪಾಗಾಶಾಲೆ, ಸೈನಿಕ ಪರೆಡ್ ಮೈದಾನ, ರಂಗ ಮಂದಿರ, ಸಭಾ ಭವನ, ನಿರೀಕ್ಷಣಾ ಮಂದಿರ ಇತ್ಯಾದಿ ಎಲ್ಲ ಸ್ಮಾರಕಗಳು ವಸಾಹತು ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದೆ. ಇಂದು ಈ ಎಲ್ಲಾ ಸ್ಮಾರಕಗಳು ಗಟ್ಟಿಮುಟ್ಟಾಗಿವೆ. ಅದರಲ್ಲಿ ಕೆಲವೊಂದಿಷ್ಟು ಸ್ಮಾರಕಗಳನ್ನು ಜೀರ್ಣೋದ್ಧಾರ ಗೊಳಿಸಲಾಗಿದೆ.

**೨. ಎರಡನೆಯದು ಸಮತಟ್ಟಾದ ಪ್ರದೇಶ:** ಬ್ರಿಟಿಷರು ಕೆಲವೊಂದು ಗುಪ್ತ ಮಾಹಿತಿಯ ಕುರಿತು ಚರ್ಚಿಸಲು ಹಾಗೂ ತಮ್ಮ ತಾಯ್ನಾಡಿಗೆ ರವಾನಿಸಲು ಎತ್ತರದ ಪ್ರದೇಶದಲ್ಲಿ ಬಂಗಲೆಗಳನ್ನು ನಿರ್ಮಿಸಿದ್ದಾರೆ. ಅದರಂತೆ ಭಾರತದಲ್ಲಿ ಸಂಪತ್ತು ತಮ್ಮ ದೇಶಕ್ಕೆ ರವಾನಿಸಲು ರಸ್ತೆ, ರೈಲು, ಸೈನಿಕ ನೆಲೆ, ಆಡಳಿತ ಕಛೇರಿ ಇತ್ಯಾದಿ ಸ್ಮಾರಕಗಳನ್ನು ಸಮತಟ್ಟಾದ ಪ್ರದೇಶದಲ್ಲಿ ನಿರ್ಮಿಸಿದರು. ಬಾಗಲಕೋಟೆ ನಗರದಲ್ಲಿ ಆಸ್ಪತ್ರೆ, ಟೇನಿಸ್ ಕೋರ್ಟ್, ರೇಡಿಯೋ ಹೌಸ್, ನಿರೀಕ್ಷಣಾ ಮಂದಿರ, ಚರ್ಚ್, ಸೆರೆಮನೆ, ಆಡಳಿತ ಕಛೇರಿ ಇತ್ಯಾದಿ ಸ್ಮಾರಕಗಳನ್ನು ನಿರ್ಮಿಸಿದರು. ಅದರಂತೆ ಬಾದಾಮಿ, ಬೀಳಗಿ, ಮುಧೋಳ, ಜಮಖಂಡಿ, ಸುಮಡ್ಡಿ, ಗುಳೇದಗುಡ್ಡ, ಕರಡಿ, ಕಟಗಿನಹಳ್ಳಿ, ಚಿಕನಾಳ, ಮುಷ್ಠೀಗೇರಿ, ಹುನಗುಂದ, ಕಲಾದಗಿ, ಹವೇಲಿ ಇತ್ಯಾದಿ ಆಯಾಕಟ್ಟಿನ ಸ್ಥಳಗಳಲ್ಲಿ ಬ್ರಿಟಿಷರು ನಿರ್ಮಿಸಿದ ಕಟ್ಟಡಗಳು ಇಂದಿಗೂ ಜೀವಂತವಾಗಿದ್ದು, ಅತ್ಯಂತ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿವೆ. ಬ್ರಿಟಿಷರು ಕಟ್ಟಿಸಿದ ಕಟ್ಟಡಗಳು ವಿಶಾಲವಾದ ಪ್ರಾಂಗಣ, ಸಾಲು-ಸಾಲಾಗಿ ಕೊಠಡಿ, ಹೊರಾಂಡ, ರಕ್ಷಣಾಗೋಡೆ, ಪರಿಸರಕ್ಕೆ ತಕ್ಕಂತೆ ಗಾಳಿ, ಬೆಳಕು ಪ್ರವೇಶಿಸಲು ಎತ್ತರದಲ್ಲಿ ಕಿಟಕಿ, ಬಾಗಿಲು, ಕಟ್ಟಿದ ಮುಂಭಾಗ ವಿಶಾಲ ಮೈದಾನ ಸರಾಗವಾಗಿ ಹರಿಯುವ ನೀರಿನ ವ್ಯವಸ್ಥೆ,

ಒಳಚರಂಡಿ ವ್ಯವಸ್ಥೆ, ಗಿಡಮರಗಳಿಂದ ಆವೃತವಾದ ಕಟ್ಟಡಗಳು ಇತ್ಯಾದಿ ಲಕ್ಷಣಗಳಿಂದ ಬ್ರಿಟಿಷರು ನಿರ್ಮಿಸಿದ ಕಟ್ಟಡಗಳು ವಸಾಹತು ಕಾಲದ ಸ್ಮಾರಕಗಳಾಗಿ ಇಂದಿಗೂ ಸಹ ಜನ ಮೆಚ್ಚುಗೆ ಪಾತ್ರವಾಗಿ, ಸಕಲರಿಗೆ ಆಶ್ರಯ ತಾಣಗಳಾಗಿ ಕೆಲಸ ಕಾರ್ಯನಿರ್ವಹಿಸುತ್ತಿವೆ. ಪ್ರಸ್ತುತದಲ್ಲಿ ಇಂದಿನ ಜನಸಮುದಾಯ ಮನೆ, ಆಡಳಿತ ಕಟ್ಟಡ ಇತ್ಯಾದಿ ಕಟ್ಟಡಗಳನ್ನು ನಿರ್ಮಿಸುವಾಗ ಈ ವಸಾಹತು ಕಾಲದ ಸ್ಮಾರಕಗಳು ಅಥವಾ ಕಟ್ಟಡಗಳು ಮಾದರಿಗಳಾಗಿವೆ.

ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವು ಮೊದಲು ಅತ್ಯಂತ ಗಾಢವಾಗಿ ಇದ್ದಾಗ, ಬಡ ಜನರು ವಾಸಿಸುವ ಮನೆಗಳು ಸಾಧಾರಣ ಮೊದಲಿದ್ದಂತೆಯೇ ಉಳಿದವು. ಆದರೆ, ವಸಾಹತುಶಾಹಿ ಅಧೀನದ ಆಡಳಿತದಲ್ಲಿ ಸೇರಿಕೊಂಡ ಆಡಳಿತ ವರ್ಗದವರ ಮನೆಗಳು ಮತ್ತು ಶ್ರೀಮಂತ ವರ್ಗದವರ ಹೊಸ ಮನೆಗಳು ಯುರೋಪಿಯನ್ ಮಾದರಿಯ ವಿನ್ಯಾಸವನ್ನು ಹೆಚ್ಚಾಗಿ ಅನುಕರಿಸಿದವು. ಯುರೋಪಿಯನ್ ಮಾದರಿಯ ಬಾಗಿಲು, ಅಲಂಕೃತ ವಸ್ತುಗಳು, ಮೇಲ್ಛಾವಣಿ ಹಾಗೂ ಗಾಥಿಕ್, ಡೋರಿಕ್, ಐಯೋನಿಕ್ ಹಾಗೂ ಕಾರಿಂಥಿಯನ್ ಶೈಲಿಯಿಂದ ಬಂದ ಸಮ್ಮಿಶ್ರ ಕಂಬಗಳು ಇವುಗಳನ್ನು ಉಪಯೋಗಕ್ಕಾಗಿ, ಅಲಂಕಾರಕ್ಕಾಗಿ ಕಾಲಕಾಲಕ್ಕೆ ಜೋಡಿಸಲಾಯಿತು. ಕೆಲವೊಮ್ಮೆ ಮನೆಯ ಹೊರ ಭಾಗವಲ್ಲದೇ ಗೃಹಕೃತ್ಯದ ಎಲ್ಲ ಉಪಕರಣ ಗಳನ್ನೊಳಗೊಂಡ ಒಳಭಾಗವೂ ಯುರೋಪ್ ಮಾದರಿಯಲ್ಲಿ ಇರುತ್ತಿದ್ದಿತು. ಸ್ಥಳೀಯ ಜನರ ಮನಸ್ಸಿನಲ್ಲಿದ್ದ ವಿಭಜಿತ ಬಾಂಧವ್ಯವು ಬೇರೆ ಎಷ್ಟೋ ವಿಷಯಗಳ ಮೇಲೆ ಪ್ರಭಾವ ಬೀರಿದ್ದಂತೆ ವಾಸ್ತುಶಿಲ್ಪದ ಮೇಲು ಪ್ರಭಾವ ಬೀರಿತು. ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ನಿರ್ಮಾಣಗೊಂಡ ಮನೆಗಳು ಎಷ್ಟೋ ಹಳ್ಳಿ, ಪಟ್ಟಣ, ನಗರ ಪ್ರದೇಶಗಳಲ್ಲಿ ಉಳಿದುಕೊಂಡಿರು ವುದು ಗಮನಾರ್ಹವಾಗಿದೆ.[೪೩] ಉದಾಹರಣೆಯಾಗಿ, ಲೋಕಾಪುರದ ರಾಜಾ ಭೈರವಸಿಂಗ್ ಘೋರ್ಪಡೆ ಮಹಾರಾಜರು ನಿರ್ಮಿಸಿದ ಬಂಗಲೆ, ಇಂದು ಆರ್.ಬಿ.ಜಿ. ಶಾಲೆಯಾಗಿ ಕಾರ್ಯನಿರ್ವಹಿಸುತ್ತಿದೆ. ಮುಧೋಳ ಘೋರ್ಪಡೆ ಸಂಸ್ಥಾನಿಕರ ಅರಮನೆ, ಜಮಖಂಡಿ ಪಟುವರ್ಧನ ಸಂಸ್ಥಾನಿಕರ ಬಂಗಲೆ, ಬಾಗಲಕೋಟೆಯಲ್ಲಿ ಹಳಕಾಟೆಯವರ ಬಂಗಲೆ ಇತ್ಯಾದಿಗಳಾಗಿವೆ.

ಗ್ರೀಸ್ ಜಗತ್ತಿಗೆ ನೀಡಿದ ಅತ್ಯಂತ ವಿಶಿಷ್ಟವೆನಿಸಿದ ತನ್ನ ಮೂರು ಕೊಡುಗೆಗಳನ್ನು ನೀಡಿತು. “ಒಂದು: ಮೊದಲು ಅಭಿವೃದ್ಧಿಗೊಳಿಸಿದುದು, ವಿಜ್ಞಾನ ಮತ್ತು ತಂತ್ರಜ್ಞಾನ. ಎರಡು: ವ್ಯಾಪಾರಕ್ಕಾಗಿ ಭೇಟಿ ನೀಡುವ ಸ್ಥಳಗಳೇ ಹೊಸ ವಿಚಾರಗಳ ಜನ್ಮಸ್ಥಳಗಳಾದವು.[೪೪] ಮೂರು ಗ್ರೀಸ್‌ನಲ್ಲಿ ಅಭಿವೃದ್ಧಿ ಹೊಂದಿದ ವಾಸ್ತುಶಿಲ್ಪದ ಮೂರು ಶೈಲಿಗಳು ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್, ಪ್ರಾಚೀನ ಗ್ರೀಸ್‌ನಲ್ಲಿ ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಎಂಬ ಹೆಸರಿನ ಪ್ರಮುಖ ನಗರ ಹಾಗೂ ಬಂದರು ಕೇಂದ್ರಗಳಿದ್ದವು. ಈ

ಪ್ರದೇಶದಲ್ಲಿ ನೆಲೆಸಿರುವ ಮತ್ತು ಗ್ರೀಕ್ ಭಾಷೆಯನ್ನಾಡುವ ಜನಾಂಗವನ್ನು ಇವೇ ಹೆಸರುಗಳಿಂದ ಕರೆಯಲಾಗುತ್ತಿತ್ತು. ಈ ಮೂರು ನಗರಗಳಿಂದ ಇತರ ರಾಷ್ಟ್ರಗಳಿಗೆ ವ್ಯಾಪಾರ ಭೂಮಾರ್ಗಗಳು ಹಾದು ಹೋಗಿದ್ದ ಕಾರಣಕ್ಕಾಗಿ ಇಲ್ಲಿನ ಜನರು ಭೂಮಾಲೀಕರಾಗಿ, ವರ್ತಕರಾಗಿ, ಕಲಾ ಆಸಕ್ತರಾಗಿ ರಾಜಕೀಯ ಪ್ರಭುತ್ವದಲ್ಲಿ ಅಭಿವೃದ್ಧಿಯನ್ನು ಹೊಂದಿದ್ದರು. ಕ್ರಿ.ಪೂ.೯೦೦ರಲ್ಲಿ ಡೋರಿಯನ್ನರರಿಂದ ಸ್ಪಾರ್ಟಾ ರಾಜ್ಯ ಸ್ಥಾಪನೆಯಾಯಿತು. ಇಲ್ಲಿ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿದ ಡೋರಿಯನ್ನರು ಸೈಕ್ಲಡೀಸ್ ದ್ವೀಪಗಳಲ್ಲಿ ವಸಾಹತು ಕೋಠಿಗಳನ್ನು ಸ್ಥಾಪಿಸಿದರು. ಮೊದಲು ಗ್ರೀಸ್‌ನ ಪೂರ್ವಕ್ಕೆ ಅನಂತರ ದಕ್ಷಿಣಕ್ಕೆ ಸಾಗಿದ ಡೋರಿಯನ್ನರು ಥೇರಾ ಮತ್ತು ಕ್ರೇಟ್‌ಗಳನ್ನು ಗೆದ್ದು, ಇತರ ಗ್ರೀಸ್ ರಾಜ್ಯಗಳ ಮೇಲೆ ಆಕ್ರಮಣ ಮಾಡಿ ಸರ್ವಾಧಿಕಾರಿಗಳಾಗಿ ಆಳ್ವಿಕೆ ನಡೆಸಿದರು. ಕಾರಿಯಾ(ದ್ವೀಪ)ದ ವಾಯುವ್ಯಕ್ಕೆ ತೊಂಭತ್ತು ಮೈಲಿಗಳುದ್ದಕ್ಕೂ ಇಪ್ಪತ್ತರಿಂದ ಮೂವತ್ತು ಮೈಲಿಗಳಷ್ಟು ವಿಸ್ತಾರವಾದ ಪರ್ವತಗಳಿಂದ ಕೂಡಿದ ಕರಾವಳಿಯಿತ್ತು. ಅದನ್ನು ಹಿಂದೆ ಅಯೋನಿಯ ಎಂದು ಕರೆಯುತ್ತಿದ್ದರು. 'ಇಡೀ ಜಗತ್ತಿನಲ್ಲಿಯೇ ಇಲ್ಲಿನದು ಅತ್ಯಂತ ಸೊಗಸಾದ ಗಾಳಿ ಮತ್ತು ಹವಾಮಾನ ಎಂದು ಹೆರೋಡೊಟಸ್ ಹೇಳಿದ್ದ.[೪೫] ಇಲ್ಲಿನ ಬಹುಪಾಲು ನಗರಗಳು ನದಿಗಳ ಮುಖಜ ಭೂಮಿಯಲ್ಲಿದ್ದವು ಅಥವಾ ಭೂಪ್ರದೇಶದಿಂದ ಎಲ್ಲಿಗೆ ಬೇಕಾದರೂ ಸಮುದ್ರದ ಮೇಲೆ ರಫ್ತು ಮಾಡಲು ಅನುಕೂಲಕರವಾದ ಮೆಡಿಟರೇನಿಯನ್‌ನ ಬಂದರುಗಳಿಗೆ ಹೋಗುವ ರಸ್ತೆಗಳಿದ್ದವು. ಈ ಮಾರ್ಗದ ಮೂಲಕ ಐಯೋನಿಯನ್ನರು ಸುಮಾರು ಕ್ರಿ.ಪೂ.೧೦೦೦ದಲ್ಲಿ ಆ್ಯಟಿಕದಿಂದ ಬಂದು ಈ ಕರಾವಳಿ ಪ್ರದೇಶದಲ್ಲಿ ನೆಲೆಸಿರುವ ಜನರನ್ನು ಐಯೋನಿಯನ್ನರು ಎಂದು ಕರೆದರು. ಐಯೋನಿಯನ್ ವರ್ತಕರು ಈಜಿಪ್ಟ್, ಇಟಲಿ, ಪ್ರೊಪೊಟಿಸ್ ಮತ್ತು ಯೂಕ್ಸಿನ್‌ಗಳಲ್ಲಿ ತಮ್ಮ ವ್ಯಾಪಾರೀ ವಸಾಹತುಗಳನ್ನು ಸ್ಥಾಪಿಸಿಕೊಂಡರು. ಐಯೋನಿಯನ್ನರು ಸ್ಥಾಪಿಸಿಕೊಂಡಿದ್ದ ವಸಾಹತು ನೆಲೆಗಳಲ್ಲಿ ತಮ್ಮದೇ ಆದಂತಹ ಸಾಂಸ್ಕೃತಿಕ ಚಹರೆಗಳನ್ನು ಹರಡಿದರು.

ಭೌಗೋಳಿಕ ಮತ್ತು ಆರ್ಥಿಕ ಮುನ್ಸೂಚನೆಗಳಿಂದ ಗ್ರೀಸ್‌ನಲ್ಲಿ ಅತ್ಯಂತ ಶ್ರೀಮಂತವೂ ಮತ್ತು ಸುಸಂಸ್ಕೃತವೂ ಆಗಬೇಕಿದ್ದ ನಗರವೊಂದಿದೆ. ಏಕೆಂದರೆ, ಭೂ ಸಂಧಿಯ ಮೇಲಿರುವ "ಕಾರಿಂಥ್" ಅಸೂಯೆ ಪಡುವಂತಹ ಸ್ಥಾನ ಹೊಂದಿತ್ತು. ಅದು ಫೆಲೊಪೊನೀಸಸ್ ಮೇಲೆ ಭೂಮಾರ್ಗಕ್ಕೆ ಬಾಗಿಲಿನಂತಿತ್ತು. ಉತ್ತರದ ಮತ್ತು ದಕ್ಷಿಣದ ಗ್ರೀಸ್‌ಗಳ ನಡುವೆ ಭೂಮಾರ್ಗದ ವ್ಯಾಪಾರಕ್ಕೆ ಅದು ನೆರವಾಗಲು ಬಹುದಿತ್ತು. ಮತ್ತು ಅದನ್ನು ಕಿತ್ತುಕೊಳ್ಳಲೂಬಹುದಿತ್ತು. ಅದು "ಸೆರೋನಿಕ್" ಮತ್ತು "ಕಾರಿಂಥಿಯನ್" ಕೊಲ್ಲಿ ಈ ಎರಡರ ಮೇಲು ಬಂದರುಗಳು ಮತ್ತು ನೌಕಾಯಾನವನ್ನು ಹೊಂದಿತ್ತು. ಈ ಎರಡು ಸಮುದ್ರಗಳ ನಡುವೆ ಅದು ಲಾಭದಾಯಕವಾದ ಹಾದು ಹೋಗುವ(ಡಯೋಲ್ಕೋಸ್ ಟಾಂಕಾರ್) ಚಲಿಸುವ ಮರದ ಕಂಬಿಗಳನ್ನು ನಿರ್ಮಿಸಿತು. ಸೆರೋನಿಕ್ ಮತ್ತು ಕಾರಿಂಥಿಯನ್

ಸಮುದ್ರ ತೀರದಲ್ಲಿದ್ದ ಜನಾಂಗವನ್ನು ಕಾರಿಂಥಿಯನ್ನರು ಎಂದು ಕರೆದರು. ಗ್ರೀಸ್‌ನ ಪ್ರಸಿದ್ಧ ಅರಸ ಸಿಪ್ಸೆಲಸ್‌ನ ಮಗ ಪೆರಿಯಾಂಡರ್. ಈತ ಗ್ರೀಕ್ ಇತಿಹಾಸದಲ್ಲಿ ಅತ್ಯಂತ ಸುದೀರ್ಘವಾದ(ಕ್ರಿ.ಪೂ.೬೨೫-೫೮೫) ನಿರಂಕುಶಾಧಿಕಾರದಲ್ಲಿ ವ್ಯವಸ್ಥೆ ಮತ್ತು ಶಿಸ್ತನ್ನು ನೆಲೆಗೊಳಿಸಿದ. ಶೋಷಣೆಯನ್ನು ತಡೆಗಟ್ಟಿದ, ವ್ಯವಹಾರಕ್ಕೆ ಪ್ರೋತ್ಸಾಹ ನೀಡಿದ. ಸಾಹಿತ್ಯ ಮತ್ತು ಕಲೆಗೆ ಪೋಷಣೆ ನೀಡಿದ ಮತ್ತು ಸ್ವಲ್ಪ ಸಮಯದವರೆಗೆ ಕಾರಿಂಥಿಯನ್ನು ಗ್ರೀಸ್‌ನ ಅಗ್ರಗಣ್ಯ ನಗರವನ್ನಾಗಿ ಮಾಡಿದನು. ಹೀಗೆ ನಗರಗಳು ಅಭಿವೃದ್ಧಿ ಹೊಂದಿ, ಇತರ ರಾಷ್ಟ್ರಗಳೊಡನೆ ಸಂಪರ್ಕ ಬೆಳೆಸಿದವು.[೪೬] ಯುರೋಪಿಯನ್ನರು ಬೇರೆ ಬೇರೆ ನಗರಗಳ ಸಂಪರ್ಕಕ್ಕೆ ಇದು ಕೊಂಡಿಯಾಯಿತು.

ಗ್ರೀಕ್‌ರು ತಮ್ಮ ಭವ್ಯ ಕಟ್ಟಡಗಳು ಮತ್ತು ದೇಗುಲಗಳ ನಿರ್ಮಾಣಕ್ಕೆ ಮೂರು ರೀತಿಯ ಆಧಾರ ಸ್ತಂಭಗಳನ್ನು ವಿನ್ಯಾಸಗೊಳಿಸಿದರು. ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳು ದೇವಸ್ಥಾನದ(ಚರ್ಚ್) ಒಳಾವರಣವು ದೇವತೆಗೆ ಮತ್ತು ಅವನ ಕೈಂಕರ್ಯ ಮಾಡುವವರಿಗೆ ಮೀಸಲಾಗಿದ್ದರಿಂದ ಮತ್ತು ಆರಾಧನೆಯನ್ನು ಹೊರಗಡೆ ಮಾಡುತ್ತಿದ್ದುದರಿಂದ, ಈ ಮೂರು ಶೈಲಿಗಳು ಹೊರಾವರಣವನ್ನು ಪರಿಣಾಮಕಾರಿಯಾಗಿ ಸುಂದರವಾಗಿರುವಂತೆ ಮಾಡಲು ತಮ್ಮನ್ನು ಮುಡಿಪಾಗಿಟ್ಟವು. ಗ್ರೀಕ್ ವಾಸ್ತುಶಿಲ್ಪವು ಸ್ತಂಭವನ್ನು ಸೌಂದರ್ಯದ ಒಂದು ಅಂಶವಾಗಿ ಅಷ್ಟೇ ಅಲ್ಲದೆ ರಚನೆಯ ಆಧಾರವಾಗಿಯೂ ಅಭಿವೃದ್ಧಿಪಡಿಸುವ ಮೂಲಕ ತನ್ನ ಪ್ರತ್ಯೇಕತೆಯನ್ನು ಗುರುತಿಸಿಕೊಂಡಿತು. ಬಾಹ್ಯ ಸ್ತಂಭರಾಜಿಯ ಮುಖ್ಯ ಕಾರ್ಯಭಾರವೆಂದರೆ ಮಂಜೂರನ್ನು ಎತ್ತಿ ಹಿಡಿಯುವುದು ಮತ್ತು ಗರ್ಭಗುಡಿಯ ಗೋಡೆಗಳಿಗೆ ಇಪ್ಪಾರು ಚಾವಣಿಯ ಹೊರ ಬಿತ್ತರವನ್ನು ಕಡಿಮೆ ಮಾಡುವುದು, ಸ್ತಂಭಗಳ ಮೇಲೆ ಸ್ತಂಭದ ತಲೆಕಟ್ಟು ಏರುತ್ತದೆ. ಅಂದರೆ ಸೌಧದ ಮೇಲ್ಕಟ್ಟಡ, ಇಲ್ಲೂ ಕೂಡಾ, ಆಧಾರ ಅಂಶಗಳಲ್ಲಿರುವಂತೆ ಗ್ರೀಕ್ ವಾಸ್ತುಶಿಲ್ಪವು ಸ್ಪಷ್ಟವಾದ ಪ್ರತ್ಯೇಕತೆಯನ್ನು ಗುರುತಿಸಿ ಕೊಂಡಿದ್ದರೂ ಅಂಗಗಳ ಕೀಲು ಜೋಡಣೆಯನ್ನು ಉಳಿಸಿಕೊಂಡಿದೆ. ಡೋರಿಕ್ ಮತ್ತು ಐಯೋನಿಕ್ ಶೈಲಿಗಳು ಕ್ರಿ.ಪೂ.ಆರನೆಯ ಶತಮಾನದಲ್ಲಿ ಮಹೋನ್ನತಿಯನ್ನು, ಕಾರಿಂಥಿಯನ್ ಐದನೆಯ ಶತಮಾನದಲ್ಲಿ ಪರಿಪೂರ್ಣತೆಯನ್ನು ಸಾಧಿಸಿದವು.[೪೭] ಕಾಲಾನುಕ್ರಮದಲ್ಲಿ ವಸಾಹತು ವಾಸ್ತುಶೈಲಿಗಳು ಬದಲಾವಣೆಯನ್ನು ಹೊಂದಿರುವುದನ್ನು ಇಲ್ಲಿ ಗುರುತಿಸಬಹುದು.

### ೩.೫. ಪಾಶ್ಚಾತ್ಯ ಕಲಾ ಪ್ರಕಾರಗಳು

ಪಾಶ್ಚಾತ್ಯ ಕಲಾ ಪ್ರಕಾರಗಳು ಭಾರತದಲ್ಲಿ ನಿರ್ಮಾಣಗೊಂಡಂತಹ ಕಟ್ಟಡಗಳ ಮೇಲೆ ಆಗಾಧವಾದ ಪ್ರಭಾವವನ್ನು ಬೀರಿವೆ. ಗ್ರೀಕ್ ನಾಗರಿಕತೆಯ ಕಲಾ ಸಾಧನೆ ಹಾಗೂ

ಪ್ರಯೋಜನಗಳು ಜನಸಾಮಾನ್ಯರಿಗೆ ಹತ್ತಿರವಾಗಿದ್ದವು. ಅವು ಕೆಲವೇ ಕೆಲವು ಪಂಡಿತರ ಸೊತ್ತಾಗಿರಲಿಲ್ಲ. ಇವರು ತರ್ಕಬದ್ಧವಾದ ಚಿಂತನೆಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟವರು. ಇದರಿಂದ ಯುರೋಪಿನಲ್ಲಿ ಪ್ರಸಿದ್ಧ ಗ್ರೀಕ್ ದೃಶ್ಯಕಲಾ ಶೈಲಿಯು ಸಂಪೂರ್ಣ ಅನುಕರಣೀಯವಾಗಿಲ್ಲದಿದ್ದರೂ ಅದು ದೀರ್ಘಕಾಲದವರೆಗೆ ಮುಂದುವರಿದು ಬಂದಿದೆ. ಇದು ಗ್ರೀಕ್ ವಾಸ್ತುಶಿಲ್ಪಕ್ಕೆ ಅನ್ವಯಿಸುತ್ತದೆ. ಇವರ ಮೂರ್ತಿಶಿಲ್ಪವು ಜಗತ್ತಿನಾದ್ಯಂತ ಮನ್ನಣೆಯನ್ನು ಪಡೆದಿದೆ. ಗ್ರೀಕ್ ವಾಸ್ತುಶಿಲ್ಪ, ಮೂರ್ತಿಶಿಲ್ಪ ಹಾಗೂ ಚಿತ್ರಕಲೆ ರೋಮನ್ನರಿಗೆ ಆಗಾಧವಾದ ಸ್ಫೂರ್ತಿಯನ್ನು ಕೊಟ್ಟವು. ರೋಮನ್ನ ಸಾಮ್ರಾಟರಲ್ಲಿ ಒಬ್ಬನಾದ ಕಾನ್‌ಸ್ಟೆಂಟೈನ್ ಎಂಬುವನು ಬೈಜೆಂಟೈನ್‌ನಲ್ಲಿ(ಈಗಿನ ಇಸ್ತಾಂಬುಲ್) ಕ್ರಿ.ಶ.೩೩೦ಕ್ಕೆ ರಾಜಧಾನಿಯನ್ನು ಸ್ಥಾಪಿಸಿದ. ಬೈಜೆಂಟೈನ್ ರಾಜ್ಯದ ಪ್ರಭಾವವು ಬಹುತೇಕ ಭೂ ಮಧ್ಯದ ಹಾಗೂ ಸಮುದ್ರ ತೀರದ ಪ್ರಾಂತ್ಯಗಳಲ್ಲಿ ಹರಡಿತು. ಈ ಸಾಮ್ರಾಜ್ಯ ಸ್ಥಾಪಕನಾದ ಕಾನ್‌ಸ್ಟೆಂಟೈನ್ ಕ್ರೈಸ್ತಧರ್ಮವನ್ನು ಸ್ವೀಕರಿಸಿ, ಅದನ್ನು ರಾಷ್ಟ್ರಧರ್ಮವೆಂದು ಸಾರಿದನು.[೪೮] ಇವರಿಂದ ಈ ಕ್ರೈಸ್ತಧರ್ಮವು ಚಿತ್ರ, ಶಿಲ್ಪ, ವಾಸ್ತುಶಿಲ್ಪ ಹಾಗೂ ಸಾಹಿತ್ಯಗಳ ಮೇಲೆ ಅಪಾರ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿತು. ಅಂತಹ ಪಾಶ್ಚಾತ್ಯ ಕಲಾ ಪ್ರಕಾರಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

## ವಸಾಹಾತು ಕಲೆ ಮತ್ತು ವಾಸ್ತುಶಿಲ್ಪ ಪ್ರಕಾರಗಳು

### ಪುನರುಜ್ಜೀವನ ಕಲೆ(ರೆನೆಸಾನ್ಸ್ ಕಲೆ)

ಕ್ರಿ.ಶ.೧೫ರಿಂದ ೧೬ನೆಯ ಶತಮಾನದ ಅವಧಿಯಲ್ಲಿ ಪುನರುಜ್ಜೀವನ ಕಲೆ ಇದ್ದದ್ದು ಗುರುತಿಸಲಾಗಿದೆ. ೧೪ ಮತ್ತು ೧೬ನೆಯ ಶತಮಾನದಲ್ಲಿ ಇಟಲಿಯಲ್ಲಿ ಪ್ರಾರಂಭವಾದ ಈ ಹೊಸ ಧೋರಣೆ ವಿಕಾಸಗೊಳ್ಳುತ್ತಾ ಫ್ರಾನ್ಸ್, ಸ್ಪೇನ್, ಜರ್ಮನಿ, ಇಂಗ್ಲೆಂಡ್ ಮತ್ತು ಇತರ ಯುರೋಪ್ ದೇಶಗಳಿಗೆ ವಿಸ್ತಾರಗೊಂಡಿತು. ಇದರಿಂದಾಗಿ ಗಾಥಿಕ್ ಶೈಲಿ ಹಿಂದೆ ಸರಿಯಿತು. ಕಟ್ಟಡದ ಒಟ್ಟು ರಚನೆಗಿಂತ ಅದರ ಮುಖಭಾಗ ಮತ್ತು ಒಳಭಾಗಗಳ ಕುಸುರಿ ಚಿತ್ರಣಕ್ಕೆ ಪ್ರಾಶಸ್ತ್ಯ ಬಂದಿತು. ಈ ಶೈಲಿಯ ಪ್ರಾರಂಭಿಕ ಕಾಲದ(೧೪೨೦-೧೫೦೦)ಮುಖ್ಯ ಶಿಲ್ಪಿಗಳೆಂದರೆ ಬ್ರೂನೆಲೆಶ್ಚಿ, ಆಲ್ಬರ್ಟಿ, ಬ್ರಮಾಂಟೆ, ಫ್ಲಾರೆನ್ಸ್ ಮಿಲಾನ್, ವೆನಿಸ್‌ಗಳಲ್ಲಿ ಇವರ ಕೃತಿಗಳನ್ನು ಕಾಣಬಹುದು. ಮಧ್ಯಕಾಲದಲ್ಲಿ (೧೫೦೦-೧೭೮೦) ರೋಮ್ ನಗರದಲ್ಲಿ ಮತ್ತು ಅದರ ಸುತ್ತಮುತ್ತ ಬ್ರಮಾಂಟೆ ಮತ್ತು ಇತರರು ಕೆಲಸ ಮಾಡಿದರು. ಅವರ ಶಿಷ್ಟ ಶೈಲಿಗೆ ಸೆಂಟ್ ಪೀಟರನ ಚರ್ಚು ಉತ್ತಮ ನಿದರ್ಶನವಾಗಿದೆ.[೪೯] ಪುನರುಜ್ಜೀವನ ಕಾಲದ ಕೊನೆಯ ಭಾಗದಲ್ಲಿ(೧೫೦೦-೧೭೮೦)ಬರೋಕ್ ಮತ್ತು ರೊಕೊಕೊ ಶೈಲಿ ಪ್ರಧಾನವಾಯಿತು. ಈ ಕಾಲದ ಚಿತ್ರಕಲಾ ಪ್ರೌಢಿಮೆಗೆ ಇಟಲಿಯ ಫ್ಲಾರೆನ್ಸ್ ಕೇಂದ್ರವೆನಿಸಿತು. ಅಲ್ಲಿನ ಪ್ರಸಿದ್ಧ

ಚಿತ್ರಕಾರರಲ್ಲಿ ಜಾಟ್‌ಟೊ, ಫ್ರಾ ಅಂಜೆಲಿಕೊ, ಲಿಯೋವಾರ್ಡೊ ಡ ವಿಂಜಿ, ಬಾಲಿಸಿಲಿ, ಮೈಕೆಂಜಮೊ ಇವರನ್ನು ಹೆಸರಿಸಬಹುದು.[೫೦] ಈ ಚರಿತ್ರೆಕಾರರ ಹೆಸರುಗಳು ಚರಿತ್ರೆಯ ಪುಟಗಳಲ್ಲಿ ಇಂದಿಗೂ ಅಚ್ಚಳಿಯದೇ ದಾಖಲಾಗಿವೆ.

ಗೋಥಿಕ್ ಕಲೆಯ ಕಾಲದಲ್ಲಿ ಅತಿಮಾನುಷತನ ಮತ್ತು ಆಧ್ಯಾತ್ಮಿಕತೆಯನ್ನು ಪರಿಗಣಿಸದೆ, ಪ್ರಕೃತಿಯ ಯಥಾರ್ಥ ನಿರೂಪಣಾ ಪದ್ಧತಿಯು ಬೆಳೆದು ಬಂದಿದ್ದರೆ, ರೆನೆಸಾನ್ಸ್ ಕಲಾಭಿವೃದ್ಧಿಯ ಕಾಲದಲ್ಲಿ ಕಲಾ ನಿರೂಪಣೆಯು ಕೇವಲ ತತ್ವಗಳ ಆಧಾರದ ಮೇಲೆ ನಿಲ್ಲದ, ಕೃತಿಕಾರರ ಸಮೀಕ್ಷೆ ಮತ್ತು ಪ್ರಯೋಗಗಳನ್ನು ಆಧರಿಸಿ, ಅನುಭಾವತ್ಮಕ ನಿರೂಪಣಾ ಶೈಲಿಯು ವೈಯಕ್ತಿಕ ಹಾಗೂ ಅನುಭವಾತ್ಮಕ ನಿರೂಪಣಾ ಶೈಲಿಗೆ ಬದಲಾಯಿತು.[೫೧] ಪುನರುಜ್ಜೀವನ ಕಲಾಶೈಲಿಯಲ್ಲಿ ಸಮಾನವಾದ ರೂಪ ಸ್ವಭಾವಗಳುಳ್ಳ ಹಲವು ಖಂಡಗಳ ಸರಣಿ ಚಿತ್ರವೂ ಮತ್ತು ಅಭಿವ್ಯಂಜಕ ಕಲೆ, ಮೂರ್ತಿ ಶಿಲ್ಪಕಲೆ, ಅಮೂರ್ತ ಕಲೆಗಳಲ್ಲೂ ಸಹ ಅಖಂಡವಾದ, ಅವಿಚ್ಛಿನ್ನವಾದ ರೂಪು–ಭಾವಗಳ ನಿರೂಪಣೆಯು ಮುಖ್ಯ ಅಂಶವಾಗಿದೆ.[೫೨] ಫ್ಲಾರೆನ್ಸ್ ನಗರವನ್ನು ರಿನೈಸನ್ಸ್ ಕಲೆಯ ನಗರವೆಂದು ಕರೆಯುವರು. ಇದು ಲಿಯಾನೊರ್ಡ್‌ದ ವಿಂಚಿಯ ಮತ್ತು ಮೈಕಲ್ ಎಂಜಲೋರ ಜನ್ಮಸ್ಥಳ. ಇಲ್ಲಿ ಬೆಳೆದು ಬಾಳಿದವರು ಬೊಟ್ಟಿಸಿಲ್ಲಿ, ಶೀಬ್ರಾಂಟ್ ಮತ್ತು ರ್ಯಾಪೆಲ್.[೫೩] ಕ್ರಿ.ಶ.೧೫ ಮತ್ತು ೧೬ನೇ ಶತಮಾನದಲ್ಲಿ ಯುರೋಪಿಯನ್ನರಲ್ಲಿ ಕಂಡುಬಂದ ಬೌದ್ಧಿಕ ಬದಲಾವಣೆಯಿಂದಾಗಿ, ಕಲಾ ರಂಗದಲ್ಲಿ ಮಹತ್ತರವಾದ ಬೆಳವಣಿಗೆಯಾಯಿತು. ಇದು ಶೀಘ್ರವಾಗಿ ಹರಡಲು ಅನೇಕ ರಾಜರು, ಪೋಪರು, ಸರದಾರರು, ಬ್ಯಾಂಕರ್‌ಗಳು ಗ್ರೀಕ್ ಮತ್ತು ಲ್ಯಾಟಿನ್‌ಗಳ ಹೊಸ ಕಲಿಕೆಗೆ ಪ್ರೋತ್ಸಾಹ ನೀಡಿ, ಉದಾರ ದಾನ ಕೊಟ್ಟರು. ಪಂಡಿತರಿಗೆ, ಕವಿಗಳಿಗೆ, ಲ್ಯಾಟಿನ್ ಕ್ಲಾಸಿಕ್ಸ್ ಕಲಿಕೆಗೆ ಕಲೆ, ಸಾಹಿತ್ಯ ಮತ್ತು ವಿಜ್ಞಾನಗಳಿಗೆ ಆಶ್ರಯ ನೀಡಿದ್ದರಿಂದ ಇಟಲಿಯು ಪ್ರಸಿದ್ಧ ಮಾನವತಾವಾದಿಗಳಿಗೆ(ಪೆಟ್ರಾರ್ಕ್, ದಾಂಟೆ, ಬೊಕಾಶಿಯೋ) ಚಿತ್ರಕಾರರಿಗೆ(ಲಿಯೋನಾರ್ಡೋ, ಡ ವಿಂಜಿ, ಏಂಜಲೋ, ರಾಫೆಲ್) ಕಲಾಕಾರರಿಗೆ, ವಿಜ್ಞಾನಿಗಳಿಗೆ ಜನ್ಮಕೊಟ್ಟಿತು. ಕೆಲವು ಪ್ರತಿಭಾವಂತ ಪ್ರಬುದ್ಧ ವ್ಯಕ್ತಿಗಳು ಹಿಂದೆಂದೂ ಕಾಣಲಾರದ ಸ್ವತಂತ್ರ ದೃಷ್ಟಿಕೋನಗಳಿಂದ ಹೊಸ ಚೇತನಗಳಿಂದ ನವನವೀನ ಆವಿಷ್ಕಾರಗಳು ಕಲಾಜಗತ್ತಿನಲ್ಲಿ ವಿಪ್ಲವಕ್ಕೆ ದಾರಿ ಮಾಡಿದವು. ವಿಶೇಷವಾಗಿ ದೃಶ್ಯಕಲೆ, ಸಾಹಿತ್ಯ, ತತ್ವಶಾಸ್ತ್ರ, ನಾಟ್ಯಶಾಸ್ತ್ರ, ತರ್ಕಶಾಸ್ತ್ರ, ಚರಿತ್ರೆ, ನ್ಯಾಯಶಾಸ್ತ್ರ, ವೈದ್ಯಕೀಯ, ವ್ಯಾಕರಣ ಇತ್ಯಾದಿಗಳಲ್ಲಿ ಪರಿವರ್ತನಾಶೀಲವಾದ ಬೆಳವಣಿಗೆಗಳು ಜನತೆಯ ಬೌದ್ಧಿಕ ಜೀವನದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದವು. ಇದನ್ನೆಲ್ಲಾ ಗುರುತಿಸಿಯೇ ಇದನ್ನು ಪುನರುಜ್ಜೀವನಯುವೆಂದು ಕರೆದಿದ್ದಾರೆ.

ಇಟಲಿಯ ರೋಮ ನಗರವು ಹಿಂದಿನ ಕಾಲದಿಂದಲೂ ಕ್ಯಾಥೋಲಿಕ್ ಪಂಥದ ಪೋಪ್ ಪರಂಪರೆಯ ನೆಲೆವೀಡಾಗಿದ್ದುದರಿಂದ ಅದರ ಆಶ್ರಯದಲ್ಲಿ ದೃಶ್ಯ ಕಲಾವಿದರಿಗೆ ಪ್ರೇರಣೆ ಮತ್ತು ಪುರಸ್ಕಾರಗಳು ದೊರೆಯುತ್ತ ಬಂದಿದ್ದವು.[೫೪] ರೋಮ್‌ನಂತಹ ಇನ್ನೊಂದು ಪ್ರಧಾನ ನಗರವೆಂದರೆ ಫ್ಲಾರೆನ್ಸ್. ಇದು ಒಂದು ನಗರ ಮಾತ್ರವಾಗಿರದೇ ಒಂದು ದೇಶವಾಗಿ ಬೆಳೆದು, ಅಲ್ಲಿನ 'ಮೆಡಿಸಿ'ಎಂಬ ಕುಟುಂಬದ ಧಾರಾಳ ಆಶ್ರಯದಲ್ಲಿ ಅನೇಕ ಪ್ರಸಿದ್ಧ ಕಲಾವಿದರನ್ನು ಪೋಷಿಸಿತು. ಅದರಂತೆಯೇ ವೆನಿಸ್ ನಗರವು ಶ್ರೀಮಂತವಾಗಿದ್ದುದರಿಂದ ಇದೂ ಸಹ ಕಲಾವಿದರ ತವರು ಮನೆಯಾಯಿತು. ಹೀಗೆ 'ರೋಮ್, ಫ್ಲಾರೆನ್ಸ್ ಮತ್ತು ವೇನಿಸ್ ಈ ಮೂರು ನಗರಗಳು ಕಲೆಗೆ ಪ್ರೋತ್ಸಾಹ, ಪುರಸ್ಕಾರ, ಪ್ರೇರಣೆ ನೀಡುವುದರಲ್ಲಿ ಪರಸ್ಪರ ಸ್ಪರ್ಧೆ ನಡೆಸಿದ್ದವು.[೫೫] ಈ ಬಗೆಯ ಸರ್ವತೋಮುಖ ಕ್ರಾಂತಿ ಆರಂಭದಲ್ಲಿ ಇಟಲಿ ದೇಶದಲ್ಲಿ ಪ್ರಚಲಿತವಾದರೂ ಅದು ಮುಂದೆ ಯುರೋಪಿನ ಪಶ್ಚಿಮ ಮತ್ತು ಉತ್ತರದ ರಾಷ್ಟ್ರಗಳಿಗೆ ವಿಸ್ತಾರವಾಗಿ ಹರಡಿ ಫಲ ನೀಡಿತು. ಈ ಹಿನ್ನೆಲೆಯಲ್ಲಿ ಹದಿನಾಲ್ಕನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ನಡೆದ ಸಾಹಸಗಳನ್ನು ಪುನರುತ್ಥಾನ ಯುಗದ ಕೊಡುಗೆಗಳೆಂದು ಪರಿಗಣಿಸಬೇಕಾಗುತ್ತದೆ.

ಪುನರುಜ್ಜೀವನ ಕಾಲದ ಚಿತ್ರಕಲೆಯ ಮತ್ತೊಂದು ಮಹತ್ವದ ಸಂಗತಿಯೆಂದರೆ ಲಿಯೋನಾರ್ಡೋ ಡಾ ವಿಂಚಿಯು ತನ್ನ 'ಮೊನೋಲಿಸಾ'ಎಂಬ ಚಿತ್ರದಲ್ಲಿ ಎರಡು ಭಿನ್ನ ದೃಶ್ಯಾಂತರಗಳನ್ನು ಪ್ರಯೋಗಿಸಿರುತ್ತಾನೆ. ಯಥಾದರ್ಶನ ಪರಿಕಲ್ಪನೆಯಂತೆ ನಾವು ನೋಡುವ ವಸ್ತು ಅದರ ಪರಿಮಾಣಗಳಲ್ಲಿ ಎಲ್ಲೆಲ್ಲಿ ದೂರ, ಎಲ್ಲೆಲ್ಲಿ ಸಮೀಪ, ಎಲ್ಲೆಲ್ಲಿ ದಪ್ಪ, ಎಲ್ಲೆಲ್ಲಿ ಸಣ್ಣಗೇ ಕಾಣಬೇಕೆಂಬುದನ್ನು ಚಿತ್ರಿಸಿದ್ದಾನೆ. ಅದೇ ಚಿತ್ರದ ಇನ್ನೊಂದು ಕಡೆಗೆ ಅದರಲ್ಲಿಯ ದೂರ ಸಮೀಪಗಳ ಸಂಬಂಧವನ್ನು ಬೇರೆ ತೆರನಾಗಿ ಚಿತ್ರಿಸಿದ್ದಾನೆ. ಇದು ಡಾ ವಿಂಚಿಯ 'ಮೊನಾಲೀಸಾ'ಳ ಕೃತಿಯ ವಿಶೇಷತೆ[೫೬] ಎಂದು ಗುರುತಿಸಬಹುದು. ಪುನರುಜ್ಜೀವನ ಕಾಲದ ಕಲೆಯ ಇನ್ನೊಂದು ಮಹತ್ವದ ಸಂಗತಿಯೆಂದರೆ, ಮನುಷ್ಯನ ದೇಹ ಚಿತ್ರಿಸುವಾಗ ಸ್ನಾಯು ಶಾಸ್ತ್ರದ ಅಳವಡಿಕೆ ಪ್ರಾರಂಭವಾದುದು. 'ಈ ಕಲಾವಿದರು ಮಾನವ ದೇಹವನ್ನು ಚಿತ್ರಿಸುವಾಗ ದೇಹದ ಸ್ನಾಯು ಖಂಡಗಳನ್ನು ಮೊಳೆಗಳ ರಚನೆಯನ್ನು ತಿಳಿಯಲು ಶವಗಳನ್ನು ಕೊಯ್ದು ಪರಿಶೀಲಿಸಿ ಅಧ್ಯಯನವನ್ನು ಮಾಡುತ್ತಿದ್ದರು.[೫೭] ಈ ಸ್ನಾಯುಶಾಸ್ತ್ರದ ಅಳವಡಿಕೆಯು ಪುನರುಜ್ಜೀವನ ಕಲೆಗೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿದೆ. ಪುನರುಜ್ಜೀವನ ಕಲೆಯ ಮತ್ತೊಂದು ಮಹತ್ವದ ಸಂಗತಿಯೆಂದರೆ, ತೈಲವರ್ಣದ ಬಳಕೆ ಪ್ರಪ್ರಥಮವಾಗಿ ಜಾರಿಯಲ್ಲಿ ಬಂದದ್ದು 'ಪ್ಲೇಮೇಲ್ ಆಚಾರ್ಯ' ಎಂಬುವವನು ಪ್ರಪ್ರಥಮವಾಗಿ ತೈಲವರ್ಣ ಗಳನ್ನು ಬಳಕೆಗೆ ತರುತ್ತಾನೆ.[೫೮] ಇದಕ್ಕೂ ಮೊದಲು ಕಲಾವಿದರು ಮಡಿ ಬಣ್ಣಗಳನ್ನು

ಮೊಟ್ಟೆಯ ಲೋಳೆಯೊಂದಿಗೆ ಮಿಶ್ರಣ ಮಾಡಿ ಉಪಯೋಗಿಸುತ್ತಿದ್ದರು. ಈ ಬಣ್ಣವು ಪಾತಾಳಿಗೆ ಬಿದ್ದ ತಕ್ಷಣ ಒಣಗಿ ಹೋಗುತ್ತಿತ್ತು. ಇದರಿಂದ ಈ ಬಣ್ಣದ ಜೊತೆಗೆ ಇನ್ನೊಂದು ಬಣ್ಣವನ್ನು ಮಿಶ್ರಣ ಮಾಡಲು ಆಗುತ್ತಿರಲಿಲ್ಲ. ಆದರೆ ತೈಲವರ್ಣದಲ್ಲಿ ಇಂಥ ಮಿಶ್ರಣ ಮಾಡಲು ಸಾಧ್ಯವಾಯಿತು. ಇದು ಕಲಾವಿದರಿಗೆ ದೊಡ್ಡ ವರದಾನವಾಯಿತು. 'ಮೈಕೆಲ್' ಎಂಜಲೋ ಕೂಡಾ ತನ್ನದೇ ಆದ ಸ್ವತಂತ್ರ ಶೈಲಿಯನ್ನು ಕಂಡುಕೊಳ್ಳಲು, ಡೆಮಿನಿಕೋ ಫಿರ್ಲಾಂಡಿಯೊ ಎಂಬ ಖ್ಯಾತ ಕಲಾವಿದನಲ್ಲಿ ತನಗೆ ಬೇಕಾದ ತಂತ್ರ ಹಾಗೂ ಶೈಲಿಗಳನ್ನು ಕಲಿತುಕೊಂಡನು.[೫೯] ತದನಂತರ ಮೈಕೈಲ್ ಎಂಜಲೋಗೆ ಅಂದಿನ ಎರಡನೆಯ ಪೋಪ್ ಜೂಲಿಯಸ್‌ನಿಂದ ಚಿತ್ರ ರಚನೆಗೆ ಕರೆ ಬಂತು. ಅಲ್ಲಿಯ ಚರ್ಚ್‌ನಲ್ಲಿ ಮೈಕೆಲ್ ಎಂಜಿಲೋ ಸತತ ನಾಲ್ಕು ವರ್ಷಗಳ ಕಾಲ ಭಿತ್ತಿ ಚಿತ್ರಗಳನ್ನು ರಚಿಸಿದನು. ರೋಮ್ ನಗರದ ವ್ಯಾಟಿಕನ್‌ನಲ್ಲಿ ರಾಫೆಲ್‌ನು ಅದ್ಭುತವಾದ ಭಿತ್ತಿ ಚಿತ್ರಗಳನ್ನು ರಚಿಸಿದನು. ಇವನು ರಚಿಸಿರುವ ಮೆಡೋನಾ (ರತಿ) ದೇವತೆಗಳ ಚಿತ್ರಗಳು ಇಂದಿಗೂ ವಿಶ್ವವಿಖ್ಯಾತಿಯನ್ನು ಪಡೆದಿವೆ. ಈ ಪುನರುತ್ಥಾನ ಕಲೆಯ ಆಂದೋಲನವು ಇತರ ರಾಷ್ಟ್ರಗಳಿಗೂ ಹರಡಿ, ನಂತರ ಈ ಕಲೆಯು ತಮ್ಮ ವೈಭವ ಮತ್ತು ವೈವಿಧ್ಯತೆಗಳ ಕಾರಣದಿಂದ ಯುರೋಪ ಖಂಡವನ್ನೆಲ್ಲ ವ್ಯಾಪಿಸಿ ಪ್ರಭಾವ ಬೀರಿತು. ಅದರಂತೆ ಭಾರತದಲ್ಲಿ ಕೆಲವೊಂದು ಚರ್ಚ್‌ನಲ್ಲಿ ಪುನರುಜ್ಜೀವನ ಕಲೆ ಗುರುತಿಸಬಹುದು.

**ಬಾರೊಕ್(ಬರೋಕ್)ಕಲೆ**

ಕ್ರಿ.ಶ.೧೫ ಮತ್ತು ೧೬ನೆಯ ಶತಮಾನದಲ್ಲಿ ಇಟಲಿಯಲ್ಲಿ ಬಳಕೆ ಬಂದದ್ದು ಬರೋಕ್ ಕಲಾಶೈಲಿಯಾಗಿದೆ. ಇಟಲಿಯ ಮೈಕಲ್ ಎಂಜಿಲೋನನನ್ನು 'ಬಾರೋಕ್ ಕಲೆಯ ಜನಕನೆಂದು ಕರೆಯುತ್ತಾರೆ.[೬೦] ಪೋರೆನ್ಸ್ ಪಟ್ಟಣದ ಮೆಡಸಿ ವಂಶದ ಗಲಿಯಾನೋನ್ ಎಂಬ ಅರಸನ ಕಲಾತ್ಮಕವುಳ್ಳ ಸಮಾಧಿಯ ಕಟ್ಟಡ ಹಾಘೂ ಲೋರೆಂಟಿಯನ್ ಲೈಬ್ರರಿ ಕಟ್ಟಡದ ವಾಸ್ತುಶಿಲ್ಪ ಇವುಗಳು ಬಾರೋಕ್ ಶೈಲಿಗಳಲ್ಲಿ ನಿರ್ಮಿಸಿವೆ. ನವೋದಯ ಕಾಲದ ಟೆಷನ್, ರಾಫೆಲ್, ಮೈಕಲ್ ಎಂಜಲೋ, ಗಿಯೋವಾನಿ, ಬರ್ನಿನಿ, ಎಲ್‌ಗ್ರಿಕೋ, ರೆಂಬ್ರಾಂಟ್ ಇವರೆಲ್ಲರೂ ಬಾರೋಕ್ ಕಲೆಯ ಪ್ರಮುಖ ಕಲಾವಿದರು.[೬೧] ಇಟಲಿ ಅಸ್ಟ್ರಿಯಾ ಜರ್ಮನಿ ಇತ್ಯಾದಿ ರಾಷ್ಟ್ರಗಳಲ್ಲಿ ರೋಮನ್ ಕ್ಯಾಥೋಲಿಕ್ ಧರ್ಮ ಪೀಠದವರು ಧಾರ್ಮಿಕ ಪ್ರಚಾರಕ್ಕಾಗಿ ವಾಸ್ತು ಶಿಲ್ಪಗಳಿಗೆ ಪ್ರೋತ್ಸಾಹವಿತ್ತರು. ಆದರೆ ಈ ವಾಸ್ತುಶಿಲ್ಪಗಳು ವಿಶೇಷವಾಗಿ ಬಾರೋಕ್-ಶೈಲಿಯ ಆಧಾರದ ಮೇಲೆ ರಚಿಸಲ್ಪಟ್ಟಿವೆ.

ಕ್ರಿ.ಶ.೧೭ನೆಯ ಶತಮಾನದಲ್ಲಿ ಕ್ರೈಸ್ತ್‌ಧರ್ಮದ ಆಧಾರದ ಮೇಲೆ ಇಟಲಿಯಲ್ಲಿ ಬಾರೋಕ್ ಕಲೆಯು ಬೆಳೆಯಿತು. ಕಟ್ಟಡಗಳ ವಾಸ್ತುಶಿಲ್ಪ ಹಾಗೂ ಭಿತ್ತಿಚಿತ್ರ ಇವುಗಳನ್ನು

ಬರ್ನಿನಿ ಕಲಾವಿದರು ಅತ್ಯಂತ ಸೊಗಸಾಗಿ ರಚಿಸಿದ್ದನು. ಡಚ್ಚ ಜನಾಂಗದವರು ಸಹ ಈ ಶೈಲಿಯ ವಾಸ್ತುಶಿಲ್ಪಗಳನ್ನು ಬೆಳೆಸಿದರು. ಇವರ ಕಲಾಕೃತಿಗಳನ್ನು ಅಮ್‌ಸ್ಟರ್ ಡ್ಯಾಮ್ ನಗರದ ಬಾಗಿಲುಪಟ್ಟಿ, ಕಂಬ, ಮಂಟಪ, ಚಾವಣಿ ಇತ್ಯಾದಿಗಳಲ್ಲಿ ಕಂಡುಬರುವುವು.[೬೨] ೧೮ನೆಯ ಶತಮಾನದಲ್ಲಿ ರಷ್ಯಾದ ಅನೇಕ ಕಲಾಕೃತಿಗಳು ಚಿತ್ರಕಲೆ, ಭಿತ್ತಿಚಿತ್ರ ಮಾಧ್ಯಮದಲ್ಲಿ ಈ ಕಲೆಯ ಏಳ್ಗೆಗೆ ಪ್ರಮುಖವಾಗಿ ಕಾರಣವಾದವು. ರುಬ್ಲೆನ್ ಕಲಾಕಾರನು ಬಾರೊಕ್ ಶೈಲಿಯಲ್ಲಿ ರಚಿಸಿದ್ದು ೧೮ನೆಯ ಶತಮಾನದಲ್ಲಿ ಫ್ರಾನ್ಸ್‌ದ ಅನೇಕ ಕಟ್ಟಡಗಳಲ್ಲಿ ಕಂಡುಬರುವುದು. ೧೮ನೆಯ ಶತಮಾದಲ್ಲಿ ಇಟಲಿ ದೇಶದಲ್ಲಿ ಈ ಶೈಲಿಯು ಬಹು ಬೇಗನೇ ವಿಕಾಸವಾಯಿತು. ಇತಿಹಾಸಕಾರರ ಅಭಿಪ್ರಾಯದಂತೆ ೧೮ನೆಯ ಶತಮಾನದಲ್ಲಿ ಬಾರೋಕ್ ಕಲೆ ಮುಂದುವರೆದ ರೂಪವೇ 'ರೋಕೋಕೋ ಶೈಲಿ' ಎಂದು ಕರೆಯಬಹುದು.

**ಬಾರೊಕ್ ಶೈಲಿ ವೈಶಿಷ್ಟಗಳು**

ಒಂದು ವಸ್ತುವಿನಲ್ಲಿ ಕಂಡುಬರುವ ಆಡಂಬರದ ಭವ್ಯತೆ ಹಾಗೂ ಅದರ ವಸ್ತ್ರಾಲಂಕಾರದಲ್ಲಿ ತುಲನಾತ್ಮಕ ರೂಪ, ನೆರಳು, ಬೆಳಕು, ವಿನ್ಯಾಸ ಇತ್ಯಾದಿ ಅಂಶಗಳು ಬೊರೊಕ್ ಶೈಲಿಯ ಗುಣವೈಶಿಷ್ಟಗಳಾಗಿವೆ. ಸ್ಪಾನಿಷ್ ಭಾಷೆಯಾದ 'ಬಾರೋಕೊ' ಪದದ ಅರ್ಥವೆಂದರೆ ಬಿರಿಯುವುದು ಎಂದರ್ಥವಾಗುತ್ತದೆ. ಅನಿಯಮಿತ ಆಕಾರದ ಆಕೃತಿಗಳು ತಮ್ಮ ಗಾತ್ರವನ್ನು ಮೀರಿ ಹೊರಗೆ ಬರುವ ವಿನ್ಯಾಸ ಹೀಗೆ ಬಾರೋಕ್ ಪದದ ಅರ್ಥವಾಗಿದೆ. ತಿರುವು ಮುರುವು ಮೆಟ್ಟಿಲುಗಳು, ಭವ್ಯವಾದ ಅರಮನೆಗಳು, ವಿಸ್ತಾರವಾದ ಉದ್ಯಾನಗಳು, ಕಟ್ಟಡಗಳು ಇತ್ಯಾದಿ ರಚನೆಯಲ್ಲಿ ಬಾರೊಕ್ ಶೈಲಿಯ ಕಲಾ ವಸ್ತುಗಳು ಕಂಡುಬರುತ್ತವೆ.[೬೪] ಯುರೋಪಿನ ಕಲಾ ಮಾಧ್ಯಮಗಳಲ್ಲಿ ಕಾಣಿಸಿಕೊಂಡ ಮತ್ತೊಂದು ಉತ್ಸಾಹಿ ಕಲಾ ಪ್ರವೃತ್ತಿಯನ್ನು 'ಬರೋಕ್'ಎಂಬುದಾಗಿ ಕರೆದಿದ್ದಾರೆ. ಸುಮಾರು ೧೬೦೦ರಿಂದ ೧೭೫೦ರ ತನಕ ಯುರೋಪಿನಲ್ಲಿ ಕಾಣಿಸಿದ ಕಲಾಪ್ರವೃತ್ತಿ ಮತ್ತು ಸೃಷ್ಟಿಗಳ ವಿಚಾರದಲ್ಲಿ ಈ ಮಾತನ್ನು ತಾತ್ಸಾರದ ದೃಷ್ಟಿಯಿಂದಲೇ ಬಳಸಿದ್ದಾರೆ. ಪ್ರಾಚೀನ ಕಾಲದ ಕಲಾಕೃತಿಗಳನ್ನು ಮೂದಲಿಸುವುದಾ ಕ್ಕಾಗಿಯೂ ಈ ಶಬ್ದವನ್ನು ಬಳಸಿದ್ದುಂಟು. 'ಬರೋಕ್ ಎಂಬ ಪದ ಮೂಲತಃ ಪೋರ್ಚುಗೀಸ್ ಭಾಷೆಯಿಂದ ಬಂದದ್ದು. 'ಆಕಾರಗೆಟ್ಟ ಮುತ್ತು, ವಿಕೃತ ಮುತ್ತು'[೬೫] ಎಂಬುದು ಈ ಪದದ ಅರ್ಥ. 'ಸಾಮಾನ್ಯವಾಗಿ ಬರೋಕ್' ಎಂದರೆ, ವೈವಿಧ್ಯಮಯ ಸಂಗತಿಗಳನ್ನು ಒಳಗೊಂಡಿದ್ದು ಎಂಬ ಅಭಿಪ್ರಾಯವಿದೆ. ಇಂದಿನ ಕಲಾ ವಿಮರ್ಶಕರು ಮತ್ತು ಚರಿತ್ರಕಾರರು ಮಾತ್ರ. ಈ ಬರೋಕ್ ಪ್ರವೃತ್ತಿಯು ಸ್ವತಂತ್ರವಾದದ್ದೂ ಅಲ್ಲ, ವಿಕೃತ ರೂಪದ್ದೂ ಅಲ್ಲವೆಂದೂ, ಅದು ಪುನರುಜ್ಜೀವನ ಯುಗಕ್ಕೆ ಸಂಬಂಧಿಸಿದ್ದೆಂದೂ ಅದರದೇ ಒಂದು ಫಲವೆಂದೂ ತಿಳಿಯುತ್ತಾರೆ.

ಪುನರುಜ್ಜೀವನ ಯುಗದ ಕೃತಿಗಳನ್ನು ನಾವು 'ಮಾರ್ಗಶೈಲಿ' ಎಂದು ಎಣಿಸುವಲ್ಲಿ, ಅದೇ ಮಾರ್ಗ ಶೈಲಿಯಿಂದ ಇದು ಸಹ ಹುಟ್ಟಿಕೊಂಡಿತು. ಮಾರ್ಗಶೈಲಿಯ ದೃಷ್ಟಿಯಿಲ್ಲಿ ಯಾವುದೇ ಒಂದು ಕಲಾಕೃತಿಯ ವಿವಿಧ ಅಂಗಗಳು, ಅದರ ಒಟ್ಟು ರೂಪಕ್ಕೆ ಪೋಷಣೆ ಕೊಡಬೇಕೇ ಹೊರತು, ಪ್ರತ್ಯೇಕವಾಗಿ ಉಳಿದುಕೊಂಡು ಸುಂದರ ಎನಿಸಲಾರವು. ಇಲ್ಲಿ ಕಲಾಕೃತಿಯ ವಿವಿಧ ಅಂಗಭಾಗಗಳೊಡನೆ ಪರಸ್ಪರ ಸಂಬಂಧ ಹೇಗಿರಬೇಕು ಎಂದು ನಿರ್ಧರಿಸುವ ವಿವೇಚನೆ ಕೆಲಸ ಮಾಡುತ್ತದೆ. ಆದರೆ, ಬರೋಕ್ ಶೈಲಿಯಲ್ಲಿ ಆ ಬಗೆಯ ವಿಚಾರಸರಣಿ ಕಾಣಿಸದೆ, ಕಲಾವಿದನ ಭಾವಾವೇಶ ಅವನನ್ನು ಓಲಾಡಿಸುತ್ತದೆ. ಅಂಥವರ ಕೃತಿಗಳನ್ನು ಕಾಣುವ ದೃಷ್ಟಿಯೇ ಬದಲಾಗಬೇಕಾಗುತ್ತದೆ. ಕಲಾಕೃತಿಗಳ ಆಕೃತಿ ಕಣ್ಮನಗಳನ್ನು ರಚಿಸಬೇಕು. ಅವುಗಳಲ್ಲಿ ಚೈತನ್ಯ ತುಂಬಿ ತುಳುಕಬೇಕು. ಅವನ್ನು ಕಂಡೊಡನೆಯೇ ಅವು ನಮ್ಮನ್ನು ಮುಗ್ಧಗೊಳಿಸಬೇಕು ಎಂಬ ಪ್ರೇರಣೆಯಿಂದ ಈ ಅವಧಿಯ ಸೃಷ್ಟಿಗಳು ಉಂಟಾದವು. ೧೭ನೆಯ ಶತಮಾನದ ಮಧ್ಯಂತರದಲ್ಲಿ ಬರೋಕ್ ಕಲಾಶೈಲಿಯ ಹಲವು ಶ್ರೇಷ್ಠ ಕೃತಿಗಳು ರೋಮ್‌ನಲ್ಲಿ ರಚಿಲ್ಪಟ್ಟವು. 'ಭಿತ್ತಿಚಿತ್ರ ಕಲಾವಿದರಾದ ಕಾರ್ಟೋನನ್ ಮತ್ತು ರೂಬೆನ್ಸ್ ಶಿಲ್ಪ ಕಲಾವಿದರಾದ ಟೊರ್ನಿನಿ ಇವರು ರೋಮ್ ನಗರದಲ್ಲಿ ಬರೋಕ್ ಕಲೆಯನ್ನು ಸ್ಥಿರಗೊಳಿಸಿದರು.[೬೬] ಅದು ಕ್ರಮೇಣ ಅಂತರಾಷ್ಟ್ರೀಯ ಕಲೆಯಾಗಿ ಪ್ರಚಲಿತವಾಯಿತು.

ಬರೋಕ್ ಕಲೆಯು ಮೂಲತಃ ಆಸ್ತಿಕವಾದವನ್ನು ಪ್ರತಿನಿಧಿಸಿರುವ ಕಲೆಯ ಅಭಿವ್ಯಕ್ತಿಯಾಗಿದೆ. ಕೈಸ್ತಧರ್ಮದ ಪ್ರಚಾರಕ್ಕೆ ಈ ಕಲಾ ಪ್ರಕಾರವನ್ನು ಅಪಾರವಾಗಿ ಉಪಯೋಗಿಸಿಕೊಳ್ಳಲಾಯಿತು. ಅಂದಿನ ಕ್ರೈಸ್ತ ಧರ್ಮದ ಶ್ರೀಮಂತ ಅನುಯಾಯಿಗಳು ಈ ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಬಹುತೇಕ ಚರ್ಚ್‌ಗಳಲ್ಲಿ ಈ ಕಲೆಯ ಅಭಿವ್ಯಕ್ತಿ ಅನುಭೂತಿಗಳು ಅವ್ಯಾಹತವಾಗಿ ಸಾಗಿದ್ದವು. ಧರ್ಮದ ಅನುಯಾಯಿಗಳು ಇದನ್ನು ಪ್ರೋತ್ಸಾಹಿಸಿರುವುದಲ್ಲದೇ ರಾಜಾಶ್ರಯ ಹಾಗೂ ಧರ್ಮಪೀಠಗಳ ಅಭಯ ಮತ್ತು ವರದ ಹಸ್ತಗಳು ಈ ಕಲೆಯ ಮೇಲೆ ಕೇಂದ್ರಿಕೃತವಾಗಿದ್ದವು. ಇದರಿಂದ ಬರೋಕ್ ಕಲೆ ತನ್ನ ಶಿಖರ ಶೃಂಗಗಳನ್ನು ಶ್ರೇಣೀಕರಿಸಿತು. ಬರೋಕ್ ಕಲೆಯ ಕಲಾವಿದರೆಲ್ಲ ಕ್ರೈಸ್ತಧರ್ಮದ ಅನುಯಾಯಿಗಳು. ಬರೋಕ್ ಕಲೆಯು ಸಂಪೂರ್ಣ ದೃಶ್ಯಕಲೆಗಳಲಿ ಚಿತ್ರ, ಶಿಲ್ಪ ಮತ್ತು ವಾಸ್ತುಶಿಲ್ಪ) ತನ್ನ ಸಮೃದ್ಧತೆಯನ್ನು ತೋರಿ ಮೆರೆದಿದೆ ಎಂದು ಹೇಳಬಹುದು.

ಬರೋಕ್ ಕಲೆಯ ವಾಸ್ತುಶೈಲಿಯಲ್ಲಿ ಇಗರ್ಜಿಗಳ(ಚರ್ಚ್)ಗೋಡೆಗಳ ಹೊರಗೂ, ಒಳಗೂ ಬಾಗಿಕೊಂಡಂತಿರುವುದು ಮಹಡಿಗಳನ್ನು(ಅಂತಸ್ತುಗಳನ್ನು) ಹಾಯ್ದು ಭಾವಣಿಯನ್ನು ಮುಟ್ಟುತ್ತವೆ. ಇಲ್ಲಿ ರೇಖಾತ್ಮಕ ಮತ್ತು ವರ್ಣಾತ್ಮಕ ಸಮತನ, ಓಂಜರಿತ ಏಕತ್ವ, ನಾನಾತ್ವ

ಹೀಗೆ ವೈವಿಧ್ಯ ಲಕ್ಷಣಗಳನ್ನು ನಿರೂಪಿಸುವುದರ ಜೊತೆಗೆ ಕ್ರೈಸ್ತಧರ್ಮದ ಹಿರಿಮೆ ಮತ್ತು ಹಿತಾಸಕ್ತಿಗಳನ್ನು ಅಭಿವ್ಯಕ್ತಿಸುವ ಉದ್ದೇಶವನ್ನು ಹೊಂದಿದೆ. ಈ ಕಲೆಯು ಇಂದಿಗೂ ತನ್ನ ಜನಪ್ರಿಯತೆಯ ಕುರುಹುಗಳನ್ನು ಚಾರಿತ್ರಿಕವಾಗಿ ಉಳಿಸಿಕೊಂಡಿದೆ. ಪಾಶ್ಚಾತ್ಯ ಕಲೆಯಲ್ಲಿ ಬರೋಕ್ ಕಲೆಯು ತನ್ನದೇ ಆದಂತಹ ವೈಶಿಷ್ಟ್ಯತೆಯನ್ನು ಹೊಂದಿದೆ.

**ರೋಕೊಕೊ ಕಲೆ**

ಬರೋಕ್ ಶೈಲಿಯಿಂದ ಹೊರಹೊಮ್ಮಿಬಂದ ಒಂದು ನವಶೈಲಿ ರೋಕೊಕೊ ಶೈಲಿಯಾಗಿದೆ. ಫ್ರಾನ್ಸಿನಲ್ಲಿ ೧೫ನೆಯ ಲೂಯಿಯ ಕಾಲದಲ್ಲಿ(೧೮ನೆಯ ಶತಮಾನ) ಬಳಕೆಗೆ ಬಂದಿತು. ಒಳಾಂಗಣಗಳ ಕುಸರಿ ಚಿತ್ರಣವೇ ಈ ಶೈಲಿಯ ವಿಶಿಷ್ಟ ಗುಣಗಳಾಗಿವೆ. ಅಲಂಕಾರಣಕ್ಕಾಗಿ ಕಪ್ಪೆಚಿಪ್ಪು, ಶಂಖ, ಹೂ, ಮೊದಲಾದವುಗಳನ್ನು ಬಳಸಲಾಗಿದೆ. ಈ ಶೈಲಿಯಲ್ಲಿ ಸ್ವಲ್ಪಮಟ್ಟಿಗೆ ಚೀನಿ ಮಾದರಿಗಳ ಅನುಕರಣೆ ಇದೆ. ರೋಕೊಕೊ ಶೈಲಿಯ ಪ್ರಭಾವ ಜರ್ಮನಿ ಆಸ್ಟ್ರೀಯ ಮತ್ತು ಇಂಗ್ಲೆಂಡಿನ ಮೇಲೆ ಸಾಕಷ್ಟು ಪರಿಣಾಮ ಬೀರಿದ ದಾಖಲೆಗಳಿವೆ.[೬೭] ಪಾಶ್ಚಾತ್ಯ ಕಲಾ ಪ್ರಕಾರಗಳಲ್ಲಿಯ ರೋಕೊಕೊ ಕಲೆಯು ಕ್ರಿ.ಶ.೧೮ನೆಯ ಶತಮಾನದಲ್ಲಿ ಹುಟ್ಟಿ ಬೆಳೆದು ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್ ಇತ್ಯಾದಿ ದೇಶಗಳಲ್ಲಿ ಈ ಕಲೆಯು ಹೆಚ್ಚು ಪ್ರಚಾರಕ್ಕೆ ಬಂದಿತ್ತು. 'ಇದು ಅಲಂಕಾರ ಪೂರ್ಣವೂ, ಭಾವನಾ ಪ್ರಧಾನವೂ ಆದ ಒಂದು ಕಲಾಶೈಲಿಯಾಗಿದೆ.[೬೮] ವಸ್ತು ಸಂಯೋಜನೆಯ ಚಿತ್ರಗಳು ಹಾಗೂ ಕಲ್ಪನೆಯ ಚಿತ್ರಗಳು ಈ ಕಲೆಯಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡಿದೆ. ಈ ಪಂಥದ ಕಲೆಯು ಜನ ಸಾಮಾನ್ಯರ ಹಾಗೂ ಖಾಸಗಿ ಕಟ್ಟಡಗಳ ಒಳಾಂಗಣ ಅಲಂಕಾರಗಳನ್ನು ಕುರಿತು ನಿರಂತರ ಶ್ರಮಿಸಿದೆ. ಸ್ವಲ್ಪವು ಓರಣವಿಲ್ಲದ, ಸಾಂಪ್ರದಾಯಿಕ ವಾದ ಅತ್ಯಂಲಕರಣ ಪ್ರಧಾನವುಳ್ಳ ರೋಕೊಕೊ ಶೈಲಿಯು ರಾಜವೈಭವ ಸದೃಶ್ಯ ಕಲೆಯಾದ ಬರೋಕ್ ಬದಲಾವಣೆಯಾಗಿ ಸಮಾಜದ ಶ್ರೀಮಂತ ವರ್ಗ ಮತ್ತು ಮಧ್ಯಮ ವರ್ಗದ ಪ್ರೋತ್ಸಾಹ ಪಡೆದು, ಮಧ್ಯಮ ವರ್ಗದವರ ಕಲೆ ಎಂದು ಕರೆಸಿಕೊಂಡಿದೆ.

ರೋಕೊಕೊ ಕಲೆಯು ಸಂಪ್ರದಾಯಬದ್ಧ ಅತ್ಯಲಂಕರಣಗಳನ್ನು ಒಳಗೊಂಡ ಶೈಲಿಯಾಗಿಲ್ಲ. ಇದು ತನ್ನ ಹಿಂದಿನ ಕಲಾಪ್ರಕಾರವಾಗಿದ್ದ ಭಾವಾವಿಷ್ಟ(ಬರೋಕ್) ಕಲೆಯ ಪರಿವರ್ತಿತ ಮುಂದುವರಿಕೆಯಾಗಿದೆ. ಆದರೆ ಭಾವಾವಿಷ್ಟೆ ಕಲೆಯು ಅತ್ಯಧಿಕವಾದ, ಸಂಪ್ರದಾಯ ಬದ್ಧ ಅಲಂಕರಣಗಳನ್ನು ಒಳಗೊಂಡಿತ್ತು. ಈ ವಸ್ತು ವಿನ್ಯಾಸ ಕಲೆಯು ಇಂತಹ ರಾಜವೈಭವದ ವಿನ್ಯಾಸಗಳನ್ನು ತಿರಸ್ಕರಿಸಿತು. ಅರಮನೆಗಳ, ಕೋಟೆ-ಕೊತ್ತಲಗಳ, ಧಾರ್ಮಿಕ ಸಂಸ್ಥೆಗಳ ಕಟ್ಟಡಗಳಲ್ಲಿಯ ವೈಭವದ ವಿಲಾಸ ಪ್ರಧಾನ ವಿನ್ಯಾಸಗಳನ್ನು ಈ ಪಂಥವು ತಿರಸ್ಕರಿಸಿ,

ಅದು ಜನಸಾಮಾನ್ಯರ ಹಾಗೂ ಮಧ್ಯಮವರ್ಗದವರ ನಿತ್ಯ ಜೀವನದಲ್ಲಿಯ ನೈಜ ವಸ್ತು ವಿಷಯಗಳಿಗೆ ಸ್ಥಾನವನ್ನು ಕಲ್ಪಿಸಿತು. ಇದರಿಂದ ಈ ಕಲೆಯು ಜನಸಾಮಾನ್ಯರ ಪ್ರೋತ್ಸಾಹ ಹಾಗೂ ಪುರಸ್ಕಾರಗಳನ್ನು ಪಡೆದು, ಜನಸಾಮಾನ್ಯರ ಕಲೆ ಎಂಬುದಾಗಿ ಗುರುತಿಸಿಕೊಂಡಿದೆ. ಸಾಮಾನ್ಯ ಮತ್ತು ಮಧ್ಯಮವರ್ಗದ ಜನರು ಬಳಸುತ್ತಿದ್ದ ವಸ್ತುಗಳು, ಅವರು ಧರಿಸುತ್ತಿದ್ದ ಬಟ್ಟೆಗಳು, ಅವರ ಕೌಟುಂಬಿಕ ಪರಿಕರಗಳು ಇತ್ಯಾದಿ ನಿತ್ಯಜೀವನದ ವಸ್ತು ಉಪಕರಣಗಳು ಕಲೆಯಲ್ಲಿ ಕಾಣಿಸಿಕೊಂಡವು. ಅವುಗಳ ಜೋಡಣೆಗಳು ನಿರ್ಮಾಣಗಳು ಈ ಶೈಲಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು. ವಿನ್ಯಾಸದ ರಚನೆಯಲ್ಲಿ ಕುರ್ಚಿ, ಮೇಜು, ಸೋಫಾ, ಟಿಪಾಯಿ, ಕಪಾಟು, ಪೀಠ, ಬಾಗಿಲು, ಕಿಟಕಿ ಇತ್ಯಾದಿ ಗೃಹಬಳಕೆಯ ಅಲಂಕಾರಿಕ ವಸ್ತುಗಳ ನಿರ್ಮಾಣದಲ್ಲಿ ಈ ಕಲೆಯು ತೊಡಗಿಕೊಂಡಿತ್ತು. ಅಂದರೆ, ಇದೊಂದು ತರಹದ ಬಡಿಗೆತನ(ಮರಗೆಲಸದ ಕಲೆ) ಆಗಿರಬೇಕೆನಿಸುತ್ತದೆ. ಈ ಶೈಲಿಯ ನಿರ್ದಶನಗಳು ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಕಲಾಕೃತಿಗಳೂ ದೊರೆತಿವೆ. ಅಂಥ ಕಲಾಕೃತಿಗಳಲ್ಲಿಯೂ ಜನಸಾಮಾನ್ಯರ ವಸ್ತು ಉಪಕರಣಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ.

ಈ ಕಲಾ ಪಂಥವು ವರ್ಣವಿನ್ಯಾಸಗಳಿಗೆ ವಿಶಿಷ್ಟತೆಯನ್ನು ಪಡೆದಿವೆ. ಇಲ್ಲಿಯ ವರ್ಣಗಳು ಅತ್ಯಂತ ಆಕರ್ಷಕವಾಗಿದೆ. ಸ್ವರ್ಣ ಮತ್ತು ತಾಮ್ರ ವರ್ಣಗಳು ಈ ಕಲಾ ಪ್ರಕಾರದಲ್ಲಿ ಹೆಚ್ಚು ಪ್ರಧಾನವಾಗಿ ಮೆರೆದಿದೆ. ಕಿತ್ತಳೆ, ನೇರಳೆ, ಗುಲಾಬಿ, ಹಸಿರು, ತಿಳಿ ಹಳದಿ, ನೀಲಿ ಬಣ್ಣಗಳ ಬಳಕೆ ಈ ಕಲಾಶೈಲಿಯಲ್ಲಿ ಹೆಚ್ಚು ಪ್ರಭುತ್ವ ಪಡೆದಿದೆ. ಚಿತ್ರಕಲಾ ಮಾಧ್ಯಮದಲ್ಲಿ ಇವರ ವರ್ಣಗಳ ಆಯ್ಕೆಯು ಹೊಸ ಆಯಾಮಗಳನ್ನು ತಂದುಕೊಟ್ಟವು. ವಸ್ತುಗಳ ಸಂಯೋಜನೆಯ ಚಿತ್ರಗಳು ಹೆಚ್ಚು ಕಾಲ್ಪನಿಕವಾದ ವಿನ್ಯಾಸಗಳ ಅಲಂಕಾರಗಳಿಂದ ಈ ಶೈಲಿಯಲ್ಲಿ ನೋಡಲು ಸಿಗುತ್ತವೆ. 'ಚಾಯ್ ಪೋಲೋ' ಎಂಬ ಕಲಾವಿದನು ಕ್ರಿ.ಶ.೧೭೪೫ರಲ್ಲಿ 'ಅಂಟೋನಿ ಮತ್ತು ಕ್ಲಿಯೋಪಾತ್ರ' ಎಂಬ ತೈಲವರ್ಣದ ಚಿತ್ರವನ್ನು ರಚಿಸಿದ್ದಾನೆ. ಇಲ್ಲಿ ಬಿಳಿ ಬಟ್ಟೆ ಧರಿಸಿದ ಕ್ಲಿಯೋ ಪಾತ್ರಗಳು ಹಾಗೂ ಕೆಂಪು ಬಟ್ಟೆ ಧರಿಸಿದ ಅಂಟೋನಿ ಇವರ ಚಿತ್ರಗಳು ತುಂಬಾ ಸುಂದರವಾಗಿ ರೂಪಿತವಾಗಿದೆ. ಈ ತೈಲವರ್ಣದ ಚಿತ್ರವು ಯಡನ್‌ಬರ್ಗ್‌ದಲ್ಲಿರುವ ನ್ಯಾಷನಲ್ ಗ್ಯಾಲರಿಯಲ್ಲಿ ಸಂಗ್ರಹವಾಗಿದೆ.[೭೦] ಹಾಗೆಯೇ ಗಾಯಮ್ ಬಟ್ಟೆಸಾಚಾಯ್ ಪೋಲೋ ಚಾರಡಿಯನ್ ಇತ್ಯಾದಿ ಕಲಾವಿದರು ಈ ವಿನ್ಯಾಸ ಕಲೆಯಲ್ಲಿ ಪ್ರಸಿದ್ಧರಾದ ಕಲಾವಿದರಾಗಿದ್ದಾರೆ. ರೋಕೊಕೊ ಕಲಾ ಶೈಲಿಯಲ್ಲಿ ಇಟಲಿಯ ಫ್ರೆಂಚ್, ಜರ್ಮನಿ ವಸ್ತುವಿನ್ಯಾಸ ಕಲೆ ಎಂಬ ಬೇರೆ ಬೇರೆ ದೇಶಿಯ ಪ್ರಕಾರಗಳೂ ಇವೆ. ಒಟ್ಟಿನಲ್ಲಿ ಸುಖ ಜೀವನ ಸಾಧನವಾಗಿ ಈ ರೋಕೊಕೊ ಶೈಲಿಯ ಅಂತಾರಾಷ್ಟ್ರಿಯ ಮನ್ನಣೆಯನ್ನು ಗಳಿಸಿತ್ತು.

**ಗಾಥಿಕ್ ಕಲೆ**

ಯುರೋಪಿನ ಮಧ್ಯಯುಗೀನ ಕಾಲದ ಕಲೆಯನ್ನು ಗಾಥಿಕ್ ಕಲೆಯೆಂದು ಕರೆದಿದೆ. ಈ ಶೈಲಿಯನ್ನು ಮೊಟ್ಟಮೊದಲು ಬಾರಿಗೆ ಬಳಸಿಕೊಂಡ ದೇಶವೇ ಫ್ರಾನ್ಸ್ ಇದನ್ನು ಪ್ರಪ್ರಥಮವಾಗಿ ಬಳಸಿದ ವಾಸ್ತುಕಲಾವಿದ ಕೆಥಿಡ್ರಲ್ ಎಂಬುವನು. ತದನಂತರ ಈ ಶೈಲಿಯ ಪ್ರಭಾವ ಯೂರೋಪಿನಲ್ಲೆಲ್ಲ ಹರಡಿತು. ಗಾಥಿಕ್ ಕಲೆ ಕ್ರೈಸ್ತನಿಗೆ ಸಂಬಂಧಿಸಿದ ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆಯನ್ನು ತನ್ನ ಕಲೆಯ ಮೂಲ ಆಕರವನ್ನಾಗಿಸಿಕೊಂಡಿದೆ.[೨೧] ಕ್ರೈಸ್ತ ಧರ್ಮದ ಧಾರ್ಮಿಕ, ದಾರ್ಶನಿಕ ಅಂಶಗಳನ್ನು ಒಳಗೊಂಡಿರುವುದರಿಂದ ಆ ಕಾಲದ ಕಲೆಯ ಎಲ್ಲಾ ಮಾಧ್ಯಮಗಳು, ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆ, ಫಲಕ ಚಿತ್ರಗಳು, ಹಸ್ತಪ್ರತಿ ಕಲೆ, ಭಿತ್ತಿ ಚಿತ್ರಗಳು ಕ್ರೈಸ್ತ ಜೀವನ ಮತ್ತು ಅವನ ಪರಿಸರ, ಕ್ರೈಸ್ತನ ಪವಾಡಗಳು, ಆ ಕಾಲದ ನಿತ್ಯಜೀವನ ಇತ್ಯಾದಿಗಳನ್ನು ಸಾಂಕೇತಿಕ ರೂಪಕಗಳಿಂದ ಸ್ಪಷ್ಟಪಡಿಸುತ್ತದೆ. ಕ್ರೈಸ್ತ ದೇವಾಲಯಗಳಲ್ಲಿ ಗಾಜಿನ ಕಿಟಕಿ, ಬಾಗಿಲು ಹಾಗೂ ಕಂಬಗಳಲ್ಲಿಯ ಕ್ರಿಸ್ತನ ಜೀವನದ ಕಥೆಗಳು ಇತ್ಯಾದಿಗಳಲ್ಲಿ ಗಾಥಿಕ್ ಶೈಲಿಯ ಕಲಾಕೃತಿಗಳನ್ನು ಕಾಣಬಹುದು. ಈ ಶೈಲಿಯು ಚಿತ್ರಕಲೆಯ ವಿಷಯದಲ್ಲಿಯೂ ವಿಭಿನ್ನತೆಯುಂಟು. ಅದನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಗ್ರಂಥಸ್ಥ ಚಿತ್ರಕಲೆ, ಎರಡನೆಯದು ರಂಗಿತ ಗಾಜಿನ ಚಿತ್ರಗಳು, ಮೂರನೆಯದು ಭಿತ್ತಿ ಚಿತ್ರಗಳು. ಒಟ್ಟಾರೆಯಾಗಿ ಗಾಥಿಕ್ ಕಲೆಯು ವೈವಿಧ್ಯಮಯವಾಗಿದೆ ಎಂದು ಹೇಳಬಹುದು.

**ಸಂಗೀತ ಕಲೆ**

ಪಾಶ್ಚಾತ್ಯ ಸಂಗೀತವು ಒಂದು ರೀತಿಯಲ್ಲಿ ವಿಭಿನ್ನ ಹಾಗೂ ವಿನೂತನವಾದುದು. ಪಾಶ್ಚಾತ್ಯ ಸಂಗೀತಕ್ಕೂ ಮತ್ತು ಭಾರತೀಯ ಸಂಗೀತಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ವ್ಯಕ್ತಿಯ ಅನುಭವದ ಕಡೆ ಮತ್ತು ಅವನ ಅಂತರಂಗದ ಭಾವನೆಗಳ ಮಿಡಿತವನ್ನು ಅಭಿವ್ಯಕ್ತಿಗೊಳಿಸುವುದರ ಕಡೆಗೆ ಭಾರತೀಯ ಸಂಗೀತ ಹೆಚ್ಚು ಗಮನವನ್ನು ಕಟ್ಟಿತು. ಹೊರಗಿನ ನಾದ ಪರಿಕರಗಳು ಮತ್ತು ವಾದ್ಯಗಳು ಅದಕ್ಕೆ ಕೇವಲ ಸಹಾಯಕವಾದವುಗಳು, ನಿರ್ದಿಷ್ಟವಾದ ಆಧಾರ ಶ್ರುತಿಯನ್ನಿಟ್ಟುಕೊಂಡು ಅದರಲ್ಲಿ ನಾದವು ಲೀನವಾಗುವಂತೆ ಸ್ವರ ವಿನ್ಯಾಸಗಳನ್ನು ಕೈಕೊಂಡು ಸೃಷ್ಟಿಸುವ ಸಂಗೀತ, ಮನೋಧರ್ಮದ ಅಭಿವ್ಯಕ್ತಿಗೆ ಸಹಾಯಕವಾಗುತ್ತದೆ. ಆದರೆ, ಪಾಶ್ಚಾತ್ಯ ಸಂಗೀತದಲ್ಲಿ ಅನೇಕ ಶೃತಿಗಳ ಧ್ವನಿಸಾಮ್ಯ ಏಕಕಾಲದಲ್ಲಿ ಉಂಟಾಗುತ್ತದೆ. ಸ್ವರಮೇಳಗಳ ತತ್ವಕ್ಕನುಗುಣವಾಗಿ ಆ ಸಂಗೀತ ರೂಪಗೊಳ್ಳ ಬೇಕಾಗುತ್ತದೆ. ಅಲ್ಲಿ ವೈಯಕ್ತಿಕ ಭಾವನೆಗಳ ಅಭಿವ್ಯಕ್ತಿಗಿಂತ ಹಲವಾರು ಧ್ವನಿಗಳ ಸಾಮರಸ್ಯಕ್ಕೆ

ಗಮನ ಹೆಚ್ಚು. ಆದುದರಿಂದಲೇ ಅದನ್ನು ಸ್ವರಮೇಳ ಸಂಗೀತ(Hormonical system) ಎಂದು ಕರೆಯಲಾಗಿದೆ. ಹಾಗೇ ಭಾರತೀಯ ಸಂಗೀತವನ್ನು ಸುಸ್ವರ ಸಂಗೀತ(Melodical system) ಎಂದು ಕರೆಯಬಹುದು. ಸಾಮೂಹಿಕವಾದ ಸಹಕಾರ ಮತ್ತು ಸ್ವರಮೇಳಗಳಿಂದ ಅದ್ಭುತ ಶಕ್ತಿಯನ್ನು ಪಾಶ್ಚಾತ್ಯ ಸಂಗೀತ ತೋರ್ಪಡಿಸಿದರೆ, ವೈಯಕ್ತಿಕವಾದ ಪ್ರತಿಭೆಯಿಂದ ಅಭಿವ್ಯಕ್ತಿಗೊಳ್ಳುವ ಸೂಕ್ಷ್ಮ ಭಾವ ವಿನ್ಯಾಸವನ್ನು ಭಾರತೀಯ ಸಂಗೀತ ಸೃಷ್ಟಿಸುತ್ತದೆ. ಇದನ್ನು 'ರಾಗ ಸಂಗೀತ'ವೆಂದೂ, ಪಾಶ್ಚಾತ್ಯ ಸಂಗೀತವನ್ನು 'ಸಂವಾದ ಸಂಗೀತ'[೨]ವೆಂದು ಕರೆಯಲಾಗಿದೆ. ಪ್ರಸ್ತುತ ದಿನಗಳಲ್ಲಿ ಎಲ್ಲೆಡೆ ಪಾಶ್ಚಾತ್ಯ ಸಂಗೀತದ ಮಿಶ್ರಣದೊಂದಿಗೆ ಅಬ್ಬರ ಹೆಚ್ಚಾಗಿದೆ.

## ೩.೬. ತಂತ್ರಜ್ಞರು ಮತ್ತು ಶ್ರಮಿಕರು

### ತಂತ್ರಜ್ಞರು

ತಂತ್ರಜ್ಞರು ಅಥವಾ ತಾಂತ್ರಿಕರು ಎಂಬುದು ಟೆಕ್ನಾಲಾಜಿಸ್ಟ್ ಅಥವಾ ಇಂಜನಿಯರುಗಳಿಗೆ ಕರೆಯಬಹುದು. ಆದಿ ಹಳೆಯ ಶಿಲಾಯುಗದಿಂದ ಹಿಡಿದು ಮಾನವ ಒಂದಲ್ಲ ಒಂದು ತಂತ್ರಜ್ಞಾನ ಕಂಡು ಹಿಡಿಯುತ್ತ ನಾಗರಿಕತೆ, ರಾಜಮನೆತನ ನೆಲೆ ನಿಲ್ಲಲ್ಲು ಹಲವಾರು ರೀತಿ ಯೋಜನೆಗಳನ್ನು ರೂಪಿಸಿರುವುದು ಚರಿತ್ರೆಯ ಪುಟಗಳಲ್ಲಿ ನೋಡುತ್ತೇವೆ. ಮಾನವ ತನ್ನ ವಾಸಕ್ಕಾಗಿ ಮರದ ಪೊಟರೆ, ಕಲ್ಲಾಸರೆಯಿಂದ ಹೊರಬಂದು ಗುಡಿಸಲು, ಗವಿಗಳನ್ನು ನಿರ್ಮಿಸಿದ್ದಾನೆ. ಆಹಾರ, ಬೇಟೆಗಾರಿಕೆ, ಕಲ್ಲಿನ, ಕಟ್ಟಿಗೆಯ, ಕಬ್ಬಿಣದ ಪರಿಕರಗಳನ್ನು ನಿರ್ಮಿಸಿ ಉಪಯೋಗಿಸುವ ಕಲೆ ಕೂಡ ಕಲಿತವನು. ಇವೆಲ್ಲ ಮಾನವನಿಗೆ ಪಾರಂಪರಿಕ ಜ್ಞಾನವೆಂದು ಗುರುತಿಸಬಹುದು. ಹೀಗಾಗಿ ಮಾನವನು ತಾನು ಪಡೆದಂತಹ ಜ್ಞಾನ ಮತ್ತು ಅನುಭವದಿಂದ ಯಂತ್ರಗಳನ್ನು ಕಂಡುಹಿಡಿದನು. ಇವೆ ಯಂತ್ರಗಳ ಸಹಾಯದಿಂದ ಕಲ್ಲು ಒಡೆಯುವುದು, ಬಾವಿ ತೋಡುವುದು, ಮರಗಳನ್ನು ಕಡಿದು ಕೆತ್ತುವುದು, ಕೆರೆಕಟ್ಟೆಗಳನ್ನು ನಿರ್ಮಿಸುವುದು, ಕಾಲುವೆ ಅಗಿಯುವುದು, ಇಟ್ಟಿಗೆ ತಯಾರಿಸಿ ಸುಡುವುದು. ಇವೆಲ್ಲಾ ಪರಿಕರಗಳನ್ನು ಉಪಯೋಗಿಸಿ ತಾಂತ್ರಿಕತೆ ಅಥವಾ ವ್ಯವಸ್ಥಿತ ಯೋಜನೆ ರೂಪಿಸಿ ಕಟ್ಟಡಗಳನ್ನು ನಿರ್ಮಿಸಲು ಪ್ರಾರಂಭಿಸಲಾಯಿತು. ಈ ಕಟ್ಟಡಗಳ ನೀಲನಕ್ಷೆ ತಯಾರಿಸುವವನಿಗೆ ಇಂಜನಿಯರ್ ಅಥವಾ ತಂತ್ರಜ್ಞರು ಎಂದು ಕರೆಯಲಾಗುತ್ತದೆ. ಎಷ್ಟೋ ಜನರು ಇಂದಿಗೂ ಸಹ ಇಂಜನಿಯರ್ ಜ್ಞಾನವನ್ನು ಮೀರಿಸಿ ಕಟ್ಟಡ ನಿರ್ಮಿಸುವ ಪ್ರತಿಭಾವಂತರಿದ್ದಾರೆ. ಇವರಿಗೆ ಅನುಭವ ಮತ್ತು ತಿಳುವಳಿಕೆಯ ಆಧಾರದಿಂದ ಕಟ್ಟಡ ನಿರ್ಮಿಸವ ಜ್ಞಾನ ಬಂದಿರುತ್ತದೆ. ಕಟ್ಟಡಗಳನ್ನು ಯಾವ ಉದ್ದೇಶಕ್ಕಾಗಿ ನಿರ್ಮಿಸುತ್ತಿವೋ ಆ ಪ್ರಯೋಜನವನ್ನು ಸಾಧಿಸುವುದು ಒಂದು ದೃಷ್ಟಿ. ಕೇವಲ ಅದೊಂದೇ

ದೃಷ್ಟಿಯಿಂದ ಕೆಲಸ ಮಾಡುವವರು 'ಇಂಜನಿಯರ್' ಎಂದು ಕರೆಯುವುದುಂಟು. ಅಂಥ ಇಂಜನಿಯರನ ಕಲೆಯಲ್ಲಿ ಆ ಕಟ್ಟಡಗಳಿಗೆ ಸಂಬಂಧಿಸಿದ ತಳಪಾಯದ ಆಯ, ಅಳತೆ, ಬಳಸುವ ಸಾಮಗ್ರಿಗಳು, ಅಂದರೆ ಇಟ್ಟಿಗೆ, ಕಲ್ಲು, ಮರ, ಕಬ್ಬಿಣ, ಸಿಮೆಂಟ್ ಮೊದಲಾದ ವಸ್ತುಗಳ ಪರಿಚಯವೂ ಇರಬೇಕು.[೨೩] ಇಂಥ ಇಂಜನಿಯರ ಶ್ರಮಿಕವರ್ಗದವರ ಸಹಾಯದಿಂದ ತನಗೆ ಇಷ್ಟವಾಗುವ ರೀತಿಯ ಅವಶ್ಯವಿರುವ ಪರಿಕರಗಳ ಸಹಾಯದಿಂದ ತನ್ನ ತಾಂತ್ರಿಕ ಬುದ್ಧಿಶಕ್ತಿಯಿಂದ ಕಟ್ಟಡವನ್ನು ನಿರ್ಮಿಸುತ್ತಾನೆ.

ಇಂಜನಿಯರ್ ಎಂದರೇನು? ಎಂಜನಿಯರ್ ಎಂಬ ಆಂಗ್ಲ ಪದದ ಅಥ, ಕಲ್ಪನೆ ಮಾಡು, ರಚಿಸು, ಆಗಿಸು, ಸಾಧಿಸು[೨೪] ಎಂದರ್ಥ. ಸಾಮಾನ್ಯವಾಗಿ ಈ ಪದವನ್ನು ಕನ್ನಡ ಭಾಷೆಯಲ್ಲಿ ಇದ್ದಕ್ಕಿದ್ದಂತೆಯೇ ಬಳಸುತ್ತಿದ್ದಾರೆ. ಯಂತ್ರ ಶಕ್ತಿಯನ್ನು ಒದಗಿಸಬಲ್ಲ ಒಂದು ಸಾಧನವನ್ನು ನಾವು 'ಎಂಜಿನ್' ಎಂದು ಕರೆಯುತ್ತೇವೆ. ಅದನ್ನು ನಿರ್ಮಿಸುವವನು, ಸರಿಪಡಿಸುವವನು ಎಂಜನಿಯರ್ ಎನಿಸಿಕೊಂಡ. ಕಾಲಾಂತರದಲ್ಲಿ ಇದೇ ಹೆಸರನ್ನು ಯಂತ್ರ ಸಾಧನಗಳ ತಂತ್ರಜ್ಞರಿಗೂ ಉಪಯೋಗಿಸ ತೊಡಗಿದರು. ಶಕ್ತ್ಯುತ್ವವನ್ನ ಯಂತ್ರಗಳಿಗೆ ಸಂಬಂಧಪಟ್ಟ ಕಾಮಗಾರಿಗಳನ್ನು ಕೂಡಾ ಎಂಜನಿಯರಿಂಗ್ ಎಂಬ ಪದದಿಂದ ಕರೆಯುತ್ತಿದ್ದಾರೆ.[೨೫] ಒಟ್ಟಾರೆಯಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ವಸಾಹತು ಕಾಲದ ಸಂದರ್ಭದಲ್ಲಿ ಯುರೋಪಿನ ಇಂಜನಿಯರು ಹಾಗೂ ಸ್ಥಳೀಯ ಶ್ರಮಿಕವರ್ಗದವರು ಸ್ಥಳೀಯ ಮೂಲಭೂತ ಕಚ್ಚಾ ಸಾಮಗ್ರಿಗಳಿಂದ ಕಟ್ಟಡಗಳನ್ನು ನಿರ್ಮಿಸಿದರು.

ನಾಗರಿಕರ ಜೀವನಕ್ಕೆ ಬೇಕಾಗುವ ಕಟ್ಟಡಗಳ ರಚನೆ, ರಸ್ತೆಗಳ ನಿರ್ಮಾಣ, ಸೇತುವೆಗಳ ನಿರ್ಮಾಣ, ಒಡ್ಡು, ಕೆರೆಕಟ್ಟೆ, ನೀರಾವರಿ ಕಾಲುವೆ ನಿರ್ಮಾಣ ಇವೆಲ್ಲವುಗಳನ್ನು ಇಂಜನಿಯರಿಂಗ್ ಎಂದು ಕರೆಯುತ್ತಾರೆ. ಯುದ್ಧಕ್ಕೆ ಸಂಬಂಧಪಟ್ಟ ಶಸ್ತ್ರಾಸ್ತ್ರಗಳ ರಚನೆಯನ್ನು ಯುದ್ಧ ಕಾಲದಲ್ಲಿ ನಿರ್ಮಿಸುವ ಸೇತುವೆ ಮೊದಲಾದ ಕಾಮಗಾರಿಗಳನ್ನು 'ಮಿಲಿಟರಿ ಇಂಜನಿಯರಿಂಗ್ ಎಂದು ಕರೆಯುತ್ತಾರೆ. ಮನುಷ್ಯನ ನಿತ್ಯ ಜೀವನದ ಅವಶ್ಯಕತೆಗಳಿಗೆ ಒದಗುವ ಕಟ್ಟಡಗಳ ನಿರ್ಮಾಣವನ್ನು 'ಸಿವಿಲ್ ಎಂಜನಿಯರಿಂಗ್'ಎಂಬುದಾಗಿ ಕರೆಯುತ್ತಾರೆ.[೨೬] ಇಂಜನಿಯರಿಂಗ್‌ದಲ್ಲಿ ಇನ್ನೂ ಹಲವಾರು ವಿಭಾಗಗಳಿರುವುದನ್ನು ಗುರುತಿಸಬಹುದು.

ಭಾರತದಲ್ಲಿ ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದ ಹಾಗೂ ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ಇಂಜನಿಯರುಗಳು ಭಾರತದ ಬೇರೆ ಬೇರೆ ನಗರಗಳಲ್ಲಿ ಅನೇಕ ಸಂಖ್ಯೆಯಲ್ಲಿ ಸಾರ್ವಜನಿಕ ಕಟ್ಟಡಗಳ ವಿನ್ಯಾಸ ತಯಾರಿಸಿ, ನಿರ್ಮಾಣ ಮಾಡಿದರು.[೨೭] ಅವು ಸಾಮಾನ್ಯವಾಗಿ ಇಂಗ್ಲೆಂಡಿನಲ್ಲಿ ನಿರ್ಮಿಸಲಾಗಿದ್ದ ಸಮಕಾಲೀನ ಸಾಮಿಪ್ಪರ ಕಟ್ಟಡಗಳನ್ನುಸರಿಸಿ

ಭಾರತೀಯ ಪರಿಸ್ಥಿತಿಗೆ ಹೊಂದುವ, ಅಲಂಕಾರ ವಿನ್ಯಾಸ ರಚನಾ ವ್ಯವಸ್ಥೆಯಲ್ಲಿ ಬಹುಸುಂದರ ವಾಗಿ ಸಮ್ಮಿಶ್ರಿತಗೊಳಿಸಿ, ತುಸು ಮಾರ್ಪಾಟುಗಳೊಂದಿಗೆ ರೂಪಿತವಾಗಿದ್ದವು. ಅಂಥ ಕಟ್ಟಡಗಳಲ್ಲಿ ಕಲ್ಕತ್ತದ ಸೆಂಟ್ ಜಾನ್ಸ್ ಚರ್ಚ(೧೭೮೭) ಹಾಗೂ ಗವರ್ನಮೆಂಟ್ ಹೌಸ್(೧೮೦೨)[೭೮] ಉಲ್ಲೇಖಾರ್ಹವಾಗಿವೆ. ಇವುಗಳಲ್ಲಿ ಮೊದಲನೆಯದು ಬೆಂಗಾಲ್ ಇಂಜನಿಯರ್ಸ್ ಗುಂಪಿನ ಲೆಫ್ಟಿನೆಂಟ್ ಆಗ್‌ನಿಂದ ವಿನ್ಯಾಸಗೊಳಿಸಲ್ಪಟ್ಟಿದ್ದು, ಪರ್ಸಿಬ್ರೌನ್ ಅವರ ಪ್ರಕಾರ ಅದು ವಾಲ್‌ಬ್ರೂಕ್‌ನಲ್ಲಿರುವ ಸೆಂಟ್ ಸ್ಟಿಫನ್ಸ್ ಚರ್ಚನ ವಿನ್ಯಾಶವನ್ನಾಧರಿಸಿದೆ. 'ಕಲ್ಕತ್ತ ಗವರ್ನ್‌ಮೆಂಟ್ ಹೌಸ್ ಕಟ್ಟಡವು  ಲಾರ್ಡ್ ವೆಲ್ಲೆಸ್ಲಿಯ ಕಲ್ಪನೆಯ ಕೂಸು; ಅದರ ವಿನ್ಯಾಸವನ್ನು ಅದೇ ಇಂಜನಿಯರುಗಳ ಗುಂಪಿನ ಕ್ಯಾಪ್ಟನ್ ಚಾರ್ಲ್ಸ್ ವ್ಯಾಟ್ ತಯಾರಿಸಿದ್ದನು.[೭೯] ಹೀಗೆ ಕಟ್ಟಡಗಳ ನಿರ್ಮಾಣದ ಕಾರ್ಯ ಬಾಂಬೆ ಪ್ರಾಂತ್ಯದ ಮೂಲಕ ಮುಂದುವರೆದ ಬಾಗಲಕೋಟೆ ಜಿಲ್ಲೆಯಲ್ಲಿ ವಸಾಹತು ಕಾಲದ ಸ್ಮಾರಕಗಳು ನಿರ್ಮಾಣಗೊಂಡಿದ್ದು ಗಮನಾರ್ಹವಾಗಿದೆ.

ಭಾರತಕ್ಕೆ ಕ್ರೈಸ್ತ ಮಿಷನರಿಗಳು ಪ್ರವೇಶಿಸಿದ ನಂತರ ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿ ಅವರು ಮೊದಲು ಪ್ರಾರ್ಥನಾ ಮಂದಿರಗಳನ್ನು ಸ್ಥಾಪಿಸಿಕೊಂಡರು. ಆರಂಭಿಕ 'ಪ್ರಾರ್ಥನಾ ಮಂದಿರ ಅಥವಾ ಕ್ರೈಸ್ತ ದೇವಾಲಯಗಳನ್ನು ವಿನ್ಯಾಸಗೊಳಿಸಿದವರು ಪೂಜಾರಿಗಳು ಅಥವಾ ಸಂನ್ಯಾಸಿಗಳು ವಾಸ್ತುಶಿಲ್ಪಿಗಳಾಗಿದ್ದರು.[೮೦] ಏಕೆಂದರೆ ಭಾರತಕ್ಕೆ ಬರುತ್ತಿದ್ದ ಕ್ರೈಸ್ತ ಮಿಷನರಿಗಳು ಒಂದು ನಿರ್ದಿಷ್ಟ ಪ್ರದೇಶಕ್ಕೆ ಬರುತ್ತಿದ್ದರು. ಸಮಸ್ತ ಹಕ್ಕುಗಳೊಂದಿಗೆ ನೆಲವನ್ನು ಪಡೆದುಕೊಳ್ಳುತ್ತಿದ್ದರು. ಆ ಮೇಲೆ ಒಂದು ಸಾಮಾನ್ಯವಾದ ಯೋಜನೆಯನ್ನು ರೂಪಿಸಿಕೊಂಡು, ಅಲ್ಲಿಂದ ಕ್ರೈಸ್ತರ ಹಾಗೂ ಕುಶಲಕರ್ಮಿಗಳ ನೆರವಿನಿಂದ ಒಂದು ಅಡಿಗಲ್ಲು ಹಾಕಿದ್ದಲ್ಲದೆ, ಅದಕ್ಕೆ ಸಾಮಗ್ರಿಗಳು, ತಾಂತ್ರಿಕ ನೆರವು, ದುಡಿಮೆಯೂ ಬೇಕಾಗುತ್ತಿತ್ತು. ಇದನ್ನು ಅಗತ್ಯವಾದ ಕೌಶಲ್ಯಗಳಿದ್ದ ಕ್ರೈಸ್ತರೇ ಪೂರೈಸುತ್ತಿದ್ದರೆಂದು ತೋರುತ್ತದೆ. ಈ ವ್ಯವಸ್ಥೆಯು ೧೦೫೦ಕ್ಕೆ ಮುಂಚೆ ಪಾದ್ರಿಗಳಿಗೆ ಅದು ಸಾಮಾನ್ಯವಾಗಿತ್ತು. ಅದರಲ್ಲಿಯೂ ವಿಶೇಷವಾಗಿ ಕ್ಲೂನಿಯಾಕ್ ಪಂಥದ ಸಂನ್ಯಾಸಿಗಳಿಗೆ ಕಟ್ಟಡವನ್ನು ವಿನ್ಯಾಸಗೊಳಿಸುವ ಒಂದು ಯೋಜನೆಯನ್ನು ರೂಪಿಸಿ, ನೀಲನಕ್ಷೆಯನ್ನು ತಯಾರಿಸಿ ಅದರ ಮೇಲ್ವಿಚಾರಣೆಯನ್ನು ಮಾಡುವುದು ಸಾಮಾನ್ಯವಾಗಿತ್ತು. ಆದರೆ '೧೦೫೦ರ  ಅನಂತರದ ದೊಡ್ಡ ಕತೀಡ್ರಲ್‌ಗಳಿಗೆ ಸಂನ್ಯಾಸಿಗಳೂ ಅಥವಾ ಪಾದ್ರಿಗಳೂ ಆಗಿರದ ವೃತ್ತಿಪರ ವಾಸ್ತುಶಿಲ್ಪಿಗಳನ್ನು ಕೆಲಸದಲ್ಲಿ ತೊಡಗಿಸಿಕೊಳ್ಳುವುದು ಅವಶ್ಯಕವಾಗಿ ಕಂಡಿತು.[೮೧] ೧೭ ಮತ್ತು ೧೮ನೆಯ ಶತಮಾನದಲ್ಲಿ ಗೋವೆಯಲ್ಲಿ ಅನೇಕ ಕ್ರೈಸ್ತ ಶಿಲ್ಪಿಗಳಿದ್ದರು.[೮೨] ಅವರನ್ನು ಜೆಸ್ಯೂಟರು ಪ್ರೋತ್ಸಾಹಿಸಿದರು. ಕ್ರೈಸ್ತ ಕಸಬುದಾರರು ಪರಸ್ಪರ ಸ್ನೇಹದಿಂದ ಇದ್ದರು. ಅವರಲ್ಲಿ ಧರ್ಮದ ಆಧಾರದ ಯಾವುದೇ ವೈರತ್ವವಾಗಲಿ, ಶತ್ರುತ್ವವಾಗಲಿ ಇರಲಿಲ್ಲ. ಆದರೆ 'ಇವರು ಗೋವಾದ ಮುನಿಸಿಪಾಲಿಟಿಯ

ವತಿಯಿಂದ ಅನುಮತಿಯನ್ನು ಪಡೆದು ಕೆಲವು ಕ್ರೈಸ್ತ ದೇವಲಾಯಗಳನ್ನು ನಿರ್ಮಿಸಿದ್ದಾರೆ.[೮೩] ಗೋವೆಯಿಂದ ಬೆಳಗಾವಿ, ಕಲಾದಗಿ, ಗುಳೇದಗುಡ್ಡ, ಆಡಗಲ್, ಮುಷ್ಟೀಗೇರಿ ಹಾಗೂ ಬಾಗಲಕೋಟೆಯಲ್ಲಿ ಚರ್ಚಗಳ ನಿರ್ಮಾಣ ಕಾರ್ಯವು ಮುಂದುವರೆಯಿತು ಎಂದು ಹೇಳಬಹುದು. ಬ್ರಿಟಿಷರು ತಮ್ಮ ದೇಶದಿಂದ ತರಿಸಿಕೊಂಡ ಯಂತ್ರಗಳಿಂದ ಸ್ಥಳೀಯವಾಗಿ ದೊರೆಯುವ ಕಟ್ಟಡ ಕಚ್ಚಾ ಸಾಮಗ್ರಿಗಳನ್ನು ತಯಾರಿಸಿಕೊಂಡು, ಸ್ಥಳೀಯ ಪರಿಣಿತ ಶ್ರಮಿಕವರ್ಗದವರೊಂದಿಗೆ ವಸಾಹತು ಶೈಲಿಯ ತಾಂತ್ರಿಕತೆ ಕೌಶಲ್ಯವನ್ನು ಅಳವಡಿಸಕೊಂಡು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಸ್ಥಳೀಯವಾಗಿ ತಯಾರಿಕೊಳ್ಳುತ್ತಿದ್ದ ಕಟ್ಟಡಕ್ಕೆ ಬೇಕಾದ ಕಚ್ಚಾ ಸಾಮಗ್ರಿಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಇಟ್ಟಿಗೆ:** ಇಟ್ಟಿಗೆಯನ್ನು ಉಪಯೋಗಿಸಿಕೊಂಡು ಬ್ರಿಟಿಷರು ಹಲವಾರು ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಗದ್ದನಕೇರಿ ಕ್ರಾಸ್, ಸೀಮಿಕೇರಿ, ತುಳಸಿಗೇರಿ, ಅನಗವಾಡಿ, ಕಲಾದಗಿ, ಜಮಖಂಡಿ ಇತ್ಯಾದಿ ಸ್ಥಳಗಳಲ್ಲಿ ಇಟ್ಟಿಗೆ ಭಟ್ಟಿಗಳು ಇಂದಿಗೂ ಕಾರ್ಯಾಚರಣೆ ಯಲ್ಲಿವೆ. ಸ್ಥಳೀಯವಾಗಿ ದೊರೆಯುವ ಕೆಂಪು, ಕಪ್ಪು ಮಣ್ಣು ನೀರಲ್ಲಿ ತೋಯಿಸಿ ಹದ ಮಾಡಿ ಪಡಿಯಚ್ಚು ತೆಗೆದು ಭಟ್ಟಿಗಳಲ್ಲಿ ಕಟ್ಟಿಗೆಯ ಸಹಾಯದಿಂದ ಸುಡುತ್ತಾರೆ. ಹಾಗಾಗಿ ಇಟ್ಟಿಗೆಯು ಗಟ್ಟಿಯಾಗಿರುವುದರಿಂದ ಕಟ್ಟಡಕ್ಕೆ ಉಪಯುಕ್ತ ಸಾಮಗ್ರಿಯಾಗಿದೆ.

**ಹೆಂಚು:** ಸ್ಥಳೀಯವಾಗಿ ಕುಂಬಾರರು ಮಳಿಗೆ ದುಂಡಾದ ಹೆಂಚು ತಯಾರಿಸುತ್ತಿದ್ದರು. ಬ್ರಿಟಿಷರು ಭಾರತಕ್ಕೆ ಬಂದಾದ ಮೇಲೆ ಮಂಗಳೂರಿನ 'ಜೆಪ್ಪು' ಎನ್ನುವಲ್ಲಿ ೧೮೬೫ರಲ್ಲಿ ಹೆಂಚು ಕಾರ್ಖಾನೆಯನ್ನು ಸ್ಥಾಪಿಸಿ ಅದಕ್ಕೆ ಮಂಗಳೂರು ಹೆಂಚು[೮೪] ಎಂದು ಹೆಸರಿಟ್ಟರು. ಈ ಹೆಂಚುಗಳು ಹಲಗೆಯಾಕಾರದಲ್ಲಿದ್ದು, ಒಂದಕ್ಕೊಂದು ಬಿಗಿಯಾಗಿ ಹಿಡಿದುಕೊಳ್ಳುತ್ತಿದ್ದವು. ಮಳೆ ನೀರು ಸರಾಗವಾಗಿ ಹರಿದು ಹೋಗುತ್ತಿತ್ತು. ಬೇಸಿಗೆಯಲ್ಲಿ ಕಟ್ಟಡಗಳು ತಂಪಾಗಿರುತ್ತಿದ್ದವು. ಹೆಚ್ಚಾಗಿ ಬಾಳಿಕೆ ಬರುತ್ತಿದ್ದವು. ಹಾಗಾಗಿ ಬ್ರಿಟಿಷರು ಕಟ್ಟಡಗಳಿಗೆ ಹೇರಳವಾಗಿ ಮಂಗಳೂರು ಹೆಂಚು ಬಳಸಿದ್ದಾರೆ.

**ಕಲ್ಲು:** ಕಲ್ಲು ನಿಸರ್ಗದತ್ತವಾದ ಸಂಪತ್ತು. ಭೂಮಿಯಿಂದ ಕಲ್ಲನ್ನು ಅಗೆದು ತೆಗೆದು ಕಟ್ಟಡಕ್ಕೆ ಅಳತೆಗನುಸಾರ ನಿರ್ಮಿಸಿಕೊಂಡು ಕಟ್ಟಡಕ್ಕೆ ಉಪಯೋಗಿಸಲಾಗಿದೆ. ಕೆಂಪು, ಕಲ್ಲು, ಬೆಣಜಿನ ಬಣ್ಣದ ಕಲ್ಲು ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುವುದರಿಂದ ಬ್ರಿಟಿಷರು ಕಲ್ಲನ್ನು ಬಳಸಿ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಕಲ್ಲಿನ ಕಟ್ಟಡಗಳಿಗೆ ಆಯುಷ್ಯ ಹೆಚ್ಚಾಗಿರುತ್ತದೆ.

**ಸುಣ್ಣ ಅಥವಾ ಗಾರೆಗಚ್ಚು:** ಬಾಗಲಕೋಟೆ ಜಿಲ್ಲೆಯಲ್ಲಿ ಸುಣ್ಣದ ಕಲ್ಲು ಸಿಮೆಂಟ್ ತಯಾರಿಕೆಗೆ ಕಲ್ಲು ಹೇರಳವಾಗಿ ದೊರೆಯುತ್ತದೆ. ಸುಣ್ಣದ ಭಟ್ಟಿಯಲ್ಲಿ ಕಲ್ಲು, ಕಟ್ಟಿಗೆ ಹಾಕಿ ಬೆಂಕಿಯಲ್ಲಿ

ಸುಟ್ಟಾಗ ಬಿಳಿಸುಣ್ಣ ರಚನೆಗೊಳ್ಳುತ್ತದೆ. ಇದನ್ನು ನೀರಿನಲ್ಲಿ ಕಲಿಸಿ ಕೆಲವು ದಿನಗಳವರೆಗೆ ಉರುಳಾಡಿಸಿದರೆ ಗಚ್ಚು ತಯಾರಾಗುತ್ತದೆ. ಇಟ್ಟಿಗೆ, ಕಲ್ಲು, ಕಟ್ಟಿಗೆ, ಕಬ್ಬಿಣದಿಂದ ಕೂಡಿಸಿ ಕಟ್ಟಡ ನಿರ್ಮಿಸಲು ಗಾರೆಗಚ್ಚು ಬೇಕೆ ಬೇಕು. ಇದು ಅಂಟು ಅಂಟಾಗಿರುವುದರಿಂದ ಕಟ್ಟಡ ನಿರ್ಮಾಣಕ್ಕೆ ಉಪಯೋಗಿಸಲಾಗಿದೆ. ಜಿಲ್ಲೆಯ ಕಲಾದಗಿ, ಮುಧೋಳ, ಲೋಕಾಪುರ, ಜಮಖಂಡಿ, ಇಲಕಲ್ಲ ಇತ್ಯಾದಿ ಪ್ರದೇಶಗಳಲ್ಲಿ ಸುಣ್ಣ(ಗಾರೆಗಚ್ಚು) ತಯಾರಿಸುವ ಭಟ್ಟಿಗಳು ಇದ್ದು ಇಂದಿಗೂ ಸುಣ್ಣದ ಭಟ್ಟಿಗಳು ಚಾಲನೆಯಲ್ಲಿವೆ. ಸುಣ್ಣ ತಯಾರಿಸುವ ಡೋಲೋಮೈಟ್ ಖನಿಜ ಸಂಪತ್ತು ಜಿಲ್ಲೆಯಲ್ಲಿ ಹೇರಳವಾಗಿದೆ.

**ಕಬ್ಬಿಣ:** ಭಾರತಕ್ಕೆ ಐರೋಪ್ಯರ ಆಕ್ರಮಣಕ್ಕೆ ಮುನ್ನ ಸಣ್ಣ ಇದ್ದಿಲ ಕುಲುಮೆಗಳಲ್ಲಿ ಕಬ್ಬಿಣದ ಅದಿರನ್ನು ಕರಗಿಸುವುದು ಭಾರತದ ಪ್ರಧಾನ ಉದ್ಯಮಗಳಲ್ಲಿ ಒಂದಾಗಿತ್ತು. ಕೈಗಾರಿಕಾ ಕ್ರಾಂತಿಯು ಈ ಪ್ರಕ್ರಿಯೆಗಳನ್ನು ಇನ್ನು ಹೆಚ್ಚು ಅಗ್ಗವಾಗಿ ಇನ್ನೂ ದೊಡ್ಡ ಪ್ರಮಾಣದಲ್ಲಿ ಮಾಡುವುದು ಹೇಗೆ ಎಂದು ಯುರೋಪಿಗೆ ತೋರಿಸಿಕೊಟ್ಟಿತು. ಇದರಿಂದ ಭಾರತದ ಉದ್ಯಮವು ಕೊನೆಯುಸಿರೆಳೆಯಿತು. ಏಕೆಂದರೆ ಯುರೋಪಿನ ತಂತ್ರಜ್ಞಾನದಿಂದ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾದವು.[೮೫] ಬಾಗಲಕೋಟೆ ಜಿಲ್ಲೆಯ ಅಮೀನಗಡ, ಕಮತಗಿ ಕಬ್ಬಿಣ ಕಣಿ ಪ್ರದೇಶಗಳಲ್ಲಿ ಕಬ್ಬಿಣದ ಅದಿರು ದೊರೆಯುವುದರಿಂದ ಕಟ್ಟಡಗಳಿಗೆ ಬ್ರಿಟಿಷರು ಸ್ಥಳೀಯರ ಸಹಾಯದಿಂದ ಕಬ್ಬಿಣದ ಅದಿರನ್ನು ಕಟ್ಟಡಗಳಿಗೆ ಬಳಸಿದ್ದಾರೆ.

**ಸಿಮೆಂಟ್:** ಕ್ರಿ.ಶ.೧೮೨೪ರಲ್ಲಿ ಇಂಗ್ಲೆಂಡಿನ ಜೋಸೆಪ್ ಆಸ್ಪಡಿನ್ ಎಂಬುವನು ಪೋರ್ಟ್‌ಲ್ಯಾಂಡ್ ಸಿಮೆಂಟ್ ಎಂಬ ವಸ್ತುವನ್ನು ಕಟ್ಟಡ ಸಾಮಗ್ರಿಗಾಗಿ ತಯಾರಿಸಿದನು.[೮೬] ಇದನ್ನು ಹೆಚ್ಚಾಗಿ ಕಟ್ಟಡಗಳಲ್ಲಿ ಬಳಸಿದ್ದುದರಿಂದ ಜನರು ಆಕರ್ಷಿತರಾದರು. ಬ್ರಿಟಿಷರು ಕರ್ನಾಟಕದಲ್ಲಿ ಸಿಮೆಂಟ್ ಉದ್ದಿಮೆಗೆ ಆಸಕ್ತಿ ತೋರಿದ ಪ್ರತಿಫಲವಾಗಿ ಬೆಳಗಾವಿ, ಬಾಗಲಕೋಟೆ, ಬಳ್ಳಾರಿ, ವಾಡಿ, ಕೊಪ್ಪಳ, ಶಹಾಬಾದು ಪ್ರದೇಶಗಳಲ್ಲಿ ಇಂದು ಸಿಮೆಂಟ್ ಕಾರ್ಖಾನೆಗಳು ಪ್ರಾರಂಭಗೊಂಡಿವೆ. ಬಾಗಲಕೋಟೆ ಜಿಲ್ಲೆಯಲ್ಲಿ ಕಲಾದಗಿ, ಬಾಗಲಕೋಟೆ, ಲೋಕಾಪುರ, ನಿಂಗಾಪುರ, ಮುದ್ದಾಪುರ, ನಾಗಣಾಪುರ ಪ್ರದೇಶಗಳಲ್ಲಿ ಸಿಮೆಂಟ್ ಕಾರ್ಖಾನೆಗಳು ತಲೆ ಎತ್ತಿವೆ. ಇಂದಿಗೂ ಸಹ ಜಿಲ್ಲೆಯ ಸಿಮೆಂಟ್ ಅಂತರಾಜ್ಯದಲ್ಲಿಯೂ ವಿನಿಮಯವಾಗುತ್ತದೆ. ಇಂದಿನ ಎಲ್ಲಾ ಕಟ್ಟಡಗಳಿಗೆ ಸಿಮೆಂಟ್‌ನ್ನು ಉಪಯೋಗಿಸಿ ನಿರ್ಮಿಸುತ್ತಿದ್ದಾರೆ. ಸಿಮೆಂಟ್ ತಯಾರಿಸಲು ಲೈಮ್‌ಸ್ಟೋನ್ ಖನಿಜ ಸಂಪತ್ತು ಮೇಲಿನ ಪ್ರದೇಶಗಳಲ್ಲಿ ಹೇರಳವಾಗಿದೆ.

**ಕಾಂಕ್ರೀಟು:** ಸಿಮೆಂಟ್‌ಗೆ, ಜಲ್ಲಿಕಲ್ಲು, ಮರಳು, ನೀರು ಸೇರಿಸಿ ಮಿಶ್ರಣ ಮಾಡಿದಾಗ ರಚನೆಗೊಳ್ಳುವ ಜಿಗುಟು ಕಚ್ಚಾ ಸಾಮಗ್ರಿಯ ಕಾಂಕ್ರೀಟಾಗಿದೆ. ಕಬ್ಬಿಣದ ಸರಳುಗಳನ್ನು ನಿಲ್ಲಿಸಿ ಅವುಗಳಿಗೆ

ಪೆಟ್ಟಿಗೆ ಮಾಡಿ ಅದರಲ್ಲಿ ಕಾಂಕ್ರೀಟ್ ಹಾಕಿ ಕಂಬಗಳನ್ನು ನಿರ್ಮಿಸುತ್ತಾರೆ. ಕಟ್ಟಡದ ಮೇಲು ಹೊದಿಕೆಗೆ ಕಟ್ಟಿಗೆ, ಮಂಗಳೂರು ಹೆಂಚು ಬದಲಾಗಿ ಮರದ ಹಲಗೆ ಸೆಡ್ಡನ್ನು ತಾತ್ಕಾಲಿಕವಾಗಿ ನಿರ್ಮಿಸಿ ಕಬ್ಬಿಣದ ಸರಳುಗಳನ್ನು ಕಟ್ಟಿ ಕಾಂಕ್ರೀಟ್‌ನಿಂದ ಮುಚ್ಚಲಾಗುತ್ತದೆ. ನಂತರದಲ್ಲಿ ತಾತ್ಕಾಲಿಕ ಹಲಗೆಯ ಸೆಡ್ಡು, ಕಂಬಗಳಿಗೆ ಜೋಡಿಸಿದ ತಾತ್ಕಾಲಿಕ ಪೆಟ್ಟಿಗೆ ತೆಗೆಯಲಾಗುತ್ತದೆ. ಈಗ ನವೀನವಾದ ಕಾಂಕ್ರೀಟ್ ಕಟ್ಟಡ ತಯಾರಾಗುತ್ತಿವೆ. ಕಾಲಾನುಕ್ರಮೇಣ ಬ್ರಿಟಿಷರು ಗಾರೆಗಚ್ಚು ಪ್ರಮಾಣ ಕಡಿಮೆಗೊಳಿಸುತ್ತಾ ಕಾಂಕ್ರೀಟು ಉಪಯೋಗ ಹೆಚ್ಚಾಗಿ ಉಪಯೋಗಿಸಿ ಕಟ್ಟಡಗಳನ್ನು ನಿರ್ಮಿಸಿದ್ದಾರೆ.

**ಮರದ ಉಪಯೋಗ:** ಸ್ಥಳೀಯವಾಗಿ ದೊರೆಯುವ ಕರಿಮತ್ತಿ, ಹೊನ್ನೆ, ತೇಗ, ಬೇವಿನ ಮರಗಳನ್ನು ಕಡಿದು ಒಣಗಿಸಿದ ಮೇಲೆ ಯಂತ್ರಗಳಲ್ಲಿ ಅಳತೆಗನುಸಾರ ಕತ್ತರಿಸಲಾಗುತ್ತದೆ. ಮರದಿಂದ ಬಾಗಿಲು, ಕಿಟಕಿ, ಚೌಕಟ್ಟು, ತೊಲೆ, ಜಂತಿ, ಪಟ್ಟಿ, ಹಲಗೆ, ಕಂಬ, ಛಾವಣಿ, ಅಟ್ಟನಿಗೆ, ರೈಲು ಮಾರ್ಗಕ್ಕೆ ಸ್ಲೀಪರುಗಳು, ನಾಲೆಯ ತೂಬಿನ ಕದಗಳು ಮುಂತಾದವುಗಳನ್ನು ಮರದಿಂದ ತಯಾರಿಸಿ ಕಟ್ಟಡದಲ್ಲಿ ಗೊತ್ತುಪಡಿಸಿದ ಸ್ಥಳಗಳಲ್ಲಿ ಅಳವಡಿಸಲಾಗುತ್ತಿತ್ತು. ಇದರಿಂದ ಕಟ್ಟಡಕ್ಕೆ ಮತ್ತಷ್ಟು ಮೆರಗು ಬಂದು ಆಕರ್ಷಿತವಾಗುತ್ತಿತ್ತು. ಗೃಹಪಯೋಗಿ ಸಾಮಗ್ರಿಗಳಾದ ಮೇಜು, ಕುರ್ಚಿ, ಮಂಚ ಮುಂತಾದ ಪರಿಕರಗಳನ್ನು ಕೂಡಾ ಕಟ್ಟಿಗೆಯಿಮದ ತಯಾರಿಸಲಾಗುತ್ತಿತ್ತು. ಈ ಎಲ್ಲಾ ಕಟ್ಟಡ ಸಾಮಗ್ರಿಗಳನ್ನು ತಯಾರಿಸುವಲ್ಲಿ ಸ್ಥಳೀಯ ಶ್ರಮಿಕವರ್ಗದವರ ಜ್ಞಾನಪರಂಪರೆ, ಕೈಚಳಕ, ಎಲ್ಲವು ಅತ್ಯಂತ ಮಹತ್ವದ್ದಾಗಿವೆ ಎಂಬುದು ಇಲ್ಲಿ ಗಮನಾರ್ಹವಾದುದು.

**ಶ್ರಮಿಕರು**

ಭಾರತೀಯ ಸಮಾಜದಲ್ಲಿ ವೃತ್ತಿಯ ಆಧಾರದ ಮೇಲೆ ಕೃಷಿ ಸಮುದಾಯ, ಕುಶಲಕರ್ಮಿಗಳ ಸಮುದಾಯವೆಂದು ಗುರುತಿಸಲಾಗಿದೆ. ಆದರೆ ಪ್ರಮುಖವಾಗಿ ೧೨ನೆಯ ಶತಮಾನದಲ್ಲಿ ವಚನ ಅಥವಾ ಭಕ್ತಿ ಚಳವಳಿಯ ಕಾಲದಲ್ಲಿ ಉತ್ಪಾದನೆಯಲ್ಲಿ ಶ್ರಮವಿಭಜನೆಗೊಂಡು ವೃತ್ತಿಯ ಜಾತಿಯ ಹೆಸರಿನಲ್ಲಿ ವಿಭಜನೆಗೊಂಡಿರುವುದರ ಬಗ್ಗೆ ಹೆಚ್ಚು ಉಲ್ಲೇಖಗಳು ಸಿಗುತ್ತದೆ.[೮೭] ಪ್ರತಿಯೊಂದು ಪ್ರದೇಶದಲ್ಲಿರುವ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯಗಳ ನೈಪುಣ್ಯತೆಯು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಪ್ರಭುತ್ವವು ತಮ್ಮ ಪ್ರದೇಶದ ಅಭಿವೃದ್ಧಿಗಾಗಿ ಮತ್ತು ವೃತ್ತಿಯಲ್ಲಿ ವೈವಿಧ್ಯತೆಯನ್ನು ಹೆಚ್ಚಿಸುವ ಸಲುವಾಗಿ ಅನೇಕ ಕಾರ್ಯಗಳನ್ನು ಕೈಗೊಂಡಿರುತ್ತದೆ. ಅದರಲ್ಲಿ ಮುಖ್ಯವಾದುದು ಸ್ಥಳೀಯ ಕುಶಲಕರ್ಮಿಗಳ ಕೌಶಲ್ಯತೆಯನ್ನು ಬೆಳೆಸಲು ಬೇರೆ ಬೇರೆ ಪ್ರದೇಶಗಳಿಗೆ ಕಳುಹಿಸುವ ಅಥವಾ ಬೇರೆ ರಾಜ್ಯಗಳಿಂದ ಉತ್ಪಾದನಾ ವಿನಿಮಯ ವರ್ತಕ ಸಮುದಾಯದವರನ್ನು ಬಂದು ನೆಲೆಸುವಂತೆ ಪ್ರೋತ್ಸಾಹಿಸುವುದು ಕೂಡಾ

ಆಗಿದೆ.[೮೮] ವರ್ತಕ ವಿನಿಮಯಕ್ಕೆ ಶ್ರಮಿಕವರ್ಗ ಬಹಳ ಮುಖ್ಯವಾಗಿ ಬೇಕಾಗಿರುತ್ತದೆ ಎಂಬುದು ಗಮನಾರ್ಹವಾಗಿದೆ.

ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯ ಪೂರ್ವದಲ್ಲಿ ಎರಡು ರೀತಿಯ ಶ್ರಮಿಕ ವರ್ಗವನ್ನು ಕಾಣಬಹುದು. ಯಾವುದೇ ಒಂದು ರಾಜ್ಯದಲ್ಲಿ ಅಥವಾ ರಾಜ ಆಸ್ಥಾನಗಳಲ್ಲಿ ರಾಜಾಶ್ರಯ ಪಡೆದಿದ್ದ ಶ್ರಮಿಕವರ್ಗ ಮತ್ತೊಂದು ಹಳ್ಳಿಗಳಲ್ಲಿನ ಶ್ರಮಿಕವರ್ಗ. ರಾಜ್ಯದ ರಾಜ್ಯಗಳಲ್ಲಿದ್ದ ಶ್ರಮಿಕವರ್ಗವು ತಮ್ಮ ವೃತ್ತಿಯಿಂದ ಪೋಷಿತರಾಗಿದ್ದರು. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ವೃತ್ತಿ ಆಧಾರಿತ ಸಮುದಾಯಗಳಿದ್ದವು. ಅವುಗಳೆಂದರೆ ಕಮ್ಮಾರರು, ಕುಂಬಾರರು, ಮರಗೆಲಸ ಗಾರರು, ಕಲ್ಲು ಕುಟ್ಟಿಗರು, ಚಮ್ಮಾರರು, ದಂತ ಕೆಲಸಗಾರರು, ಬುಟ್ಟಿ ಹೆಣೆಯುವವರು, ಬಣ್ಣ ಬಳಿಯುವವರು, ಶೃಂಗರಿಸುವವರು, ಅಗಸರು, ಬೆಸ್ತರು, ನಾವಿಕರು, ಬೇಟೆಗಾರರು, ಕವಾಡಿಗ, ಕಟುಕರು, ಮಿಠಾಯಿಗಾರರು, ಕ್ಷೌರಿಕರು, ಹೂವಾಡಿಗರು, ಬಾಣಸಿಗಳು ಇತ್ಯಾದಿ ತಳಸಮುದಾಯ ಗಳಿದ್ದವು. ಇಲ್ಲಿರುವ ಶ್ರಮಿಕವರ್ಗವು ಹೆಚ್ಚು ಸಂಪನ್ನರು ಮತ್ತು ಹೆಚ್ಚು ವೈಜ್ಞಾನಿಕವಾಗಿ ತಮ್ಮ ವೃತ್ತಿಯನ್ನು ನಿರ್ವಹಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದರು. ಹಾಗಾಗಿ ಇವರನ್ನು ಉತ್ಪಾದಿಸುತ್ತಿದ್ದ ವಸ್ತುಗಳಿಗೆ ಯುರೋಪಿನ ರಾಷ್ಟ್ರಗಳಲ್ಲಿ ಅಪಾರ ಬೇಡಿಕೆ ಇತ್ತು. ಕ್ರಿಪೂ.ಒಂದನೆಯ ಶತಮಾನದಿಂದ ಕ್ರಿ.ಶ.ಹದಿನೆಂಟನೆಯ ಶತಮಾನದವರೆಗೆ ಭಾರತದಲ್ಲಿ ಉತ್ಪಾದನೆಯಾಗುತ್ತಿದ್ದ ಹತ್ತಿ ಬಟ್ಟೆ ಪ್ರಪಂಚದ ಅದ್ಭುತಗಳಲ್ಲಿ ಒಂದಾಗಿತ್ತು.[೮೯] ಇದಕ್ಕೆ ಪೂರಕವಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ರಬಕವಿ, ಬನಹಟ್ಟಿ, ಇಳಕಲ್ಲು, ಹುನಗುಂದ, ಬಾದಾಮಿ, ಗುಳೇದಗುಡ್ಡ, ಗೂಡುರು, ಅಮೀನಗಡ, ಕಮತಗಿ ಇತ್ಯಾದಿ ಪ್ರದೇಶಗಳಲ್ಲಿ ಅಲೆ ಹೆಚ್ಚಾಗಿ ಹತ್ತಿಯನ್ನು ಬೆಳೆಯುತ್ತಿದ್ದುದರಿಂದ ಯುರೋಪಿಗೆ ಬ್ರಿಟಿಷರು ರಫ್ತು ಮಾಡುತ್ತಿದ್ದರು.

ಬಾಗಲಕೋಟೆಯ ಜಿಲ್ಲೆಯಲ್ಲಿ ನೇಕಾರಿಕೆಗೆ ಆಧುನಿಕ ಸ್ಪರ್ಶ ನೀಡಿದರ ಫಲವಾಗಿ ನೇಕಾರರ ಬದುಕು ಸಾಗಿಸಲು ಅನುಕೂಲವಾಯಿತು. ಹಾಗೇನೆ ಆಯಾ ಸಮುದಾಯಗಳಿಗೆ ಅವರ ವೃತ್ತಿ ಆಧಾರಿತವಾಗಿ ತರಬೇತಿ ನೀಡಿ ಉತ್ಪಾದನೆಯನ್ನು ಹೆಚ್ಚಿಸಲು ಬ್ರಿಟಿಷರು ಶ್ರಮಿಸಿದರು. ಕಲಾದಗಿಯಲ್ಲಿ ಸುಣ್ಣ ತಯಾರಿಸಿ ಮಾರಾಟ ಮಾಡುವ ಸಮುದಾಯದವರಿದ್ದಾರೆ. ಅವರಿಗೆ ಹಲವಾರು ಹೊಸ ಯೋಜನೆಗಳನ್ನು ರೂಪಿಸಿ ದೊಡ್ಡದಾದ ಸುಣ್ಣದ ಬಟ್ಟಿಗಳನ್ನು ನಿರ್ಮಿಸಿದರ ಫಲವಾಗಿ ಉತ್ಪಾದನೆಯಲ್ಲಿ ಗಣನೀಯ ಎರಿಕೆ ಕಂಡುಬಂದಿತು. ಬ್ರಿಟಿಷರು ಕಟ್ಟಡಗಳಿಗೆ ಹೆಚ್ಚಾಗಿ ಸೀಮೆಸುಣ್ಣ ಗಾರೆಗಚ್ಚು ಉಪಯೋಗಿಸುತ್ತಿದ್ದರಿಂದ ಸುಣ್ಣ, ಕಲ್ಲು ಹೆಚ್ಚಾಗಿ ಬಳಕೆಯಾಯಿತು. ಹಾಗೇನೆ ಈ ಶ್ರಮಿಕರಿಗೆ ಉದ್ಯೋಗವು ಸಹ ನಿರಂತರವಾಗಿ ದೊರೆಯಿತು. ಕುಶಲಕರ್ಮಿಗಳಾದ ಬಡಿಗರು, ಕಮ್ಮಾರರು, ಕಟ್ಟಿಗೆ ಮತ್ತು ಕಬ್ಬಿಣದ ಉಪಕರಣ ತಯಾರಿಸುತ್ತಿದ್ದರು. ಇವರ ಸಹಾಯ ಕೂಡಾ ಸ್ಮಾರಕ ನಿರ್ಮಾಣದಲ್ಲಿದೆ. ವಡ್ಡರು(ಕಲ್ಲು ಕುಟಿಕರು) ಮುಧೋಳ ತಾಲೂಕಿನ

ಭಂಟನೂರ ಗ್ರಾಮದಲ್ಲಿ ಹೆಚ್ಚಾಗಿರುವುದರಿಂದ ಇವರ ಕೈಚಳಕದಿಂದ ಜಿಲ್ಲೆಯಲ್ಲಿ ಅನೇಕ ಸ್ಮಾರಕಗಳು ನಿರ್ಮಾಣಗೊಂಡಿವೆ.

ಭಾರತದಲ್ಲಿ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸಾರ್ವಜನಿಕ ರಂಗವೊಂದು ಅಸ್ತಿತ್ವಕ್ಕೆ ಬಂದಿತು. ರೈಲು ಅತಿದೊಡ್ಡ ಸಾರ್ವಜನಿಕ ಖಾತೆಯಾಗಿತ್ತು.[೬೦] ಇದರ ಜೊತೆಗೆ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರ ಇಲಾಖೆಯ ವತಿಯಿಂದ ರಸ್ತೆ–ಸಾರಿಗೆ ನಿರ್ಮಾಣ ಕಾರ್ಯಗಳು, ಅಣೆಕಟ್ಟು–ಕಾಲುವೆ ನಿರ್ಮಾಣಗಳು, ಸಾರ್ವಜನಿಕ ವಿಶ್ರಾಂತಿ ಧಾಮಗಳು, ರಕ್ಷಣಾ ಕಟ್ಟಡಗಳ ನಿರ್ಮಾಣ ಕಾರ್ಯಗಳು ಹಾಗೂ ಕೈಗಾರಿಕೆಗಳು ಆರಂಭವಾಗಿದ್ದರಿಂದ ಸ್ಥಳೀಯ ಕಾರ್ಮಿಕರ ಜೊತೆಗೆ ಬೇರೆ ಜಿಲ್ಲೆ, ರಾಜ್ಯಗಳಿಂದ ಕಾರ್ಮಿಕರನ್ನು ಕರೆಯಿಸಿ ಕೆಲಸ ಪ್ರಾರಂಭಿಸಲಾಯಿತು. ೧೮೭೬ರಲ್ಲಿ ಬರಗಾಲ ಆರಂಭವಾದಾಗ ಬ್ರಿಟಿಷರು ಹೆಚ್ಚಾಗಿ ಎಲ್ಲ ಶ್ರಮಿಕ ಸಮುದಾಯದವರನ್ನು ರೈಲು ಹಳಿ ನಿರ್ಮಾಣ, ಸೇತುವೆ, ಬಂಗಲೆ, ಆಡಳಿತ, ಶೈಕ್ಷಣಿಕ, ಸಾರ್ವಜನಿಕ ಕಟ್ಟಡಗಳನ್ನು ನಿರ್ಮಿಸಲು ಬಳಸಿಕೊಂಡರು. ಇದರಿಂದ ಜನರಿಗೆ ಬರಗಾಲದಲ್ಲಿ ಉದ್ಯೋಗ ನೀಡಿ ಉಪಜೀವನ ಸಾಗಿಸಿದಂತಾದರೆ, ಮತ್ತೊಂದು ತ್ವರಿತಗತಿಯಲ್ಲಿ ಬ್ರಿಟಿಷರು ತಮಗೆ ಅನುಕೂಲಕರವಾದ ಮಹತ್ವದ ಸ್ಥಗಳಲ್ಲಿ ಕಟ್ಟಡಗಳು ತಲೆ ಎತ್ತಲು ಸಹಾಯವಾಯಿತು.

ಈಸ್ಟ್ ಇಂಡಿಯಾ ಕಂಪನಿಯು ಭಾರತಕ್ಕೆ ಬಂದು ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದ ಹಲವು ಕಾಯಿದೆ, ಕಟ್ಟಳೆ, ನಿರ್ಬಂಧಗಳಿಂದ ಮತ್ತು ಆಧುನಿಕ ತಂತ್ರಜ್ಞಾನದ ಪ್ರಭಾವದಿಂದ ಸಾಂಪ್ರದಾಯಿಕ ಕರಕುಶಲ ಕಲೆಗಳ ಮೇಲೆ ಬಾರಿ ಪೆಟ್ಟು ಬಿದ್ದಿತು.[೬೧] ತತ್ಪರಿಣಾಮವಾಗಿ ಹಳ್ಳಿಯಲ್ಲಿ ಗುಡಿ ಕೈಗಾರಿಕೆಗಳು, ವೃತ್ತಿ ಕಸುಬುಗಳು ಬ್ರಿಟಿಷರ ಆಧುನಿಕ ಯಂತ್ರದ ಗಾಲಿಗೆ ಚಿಲುಕಿ ತ್ತರಿಸಿ ಹೋಗಿ ಈ ಸಮುದಾಯಗಳು ನಷ್ಟಕ್ಕೀಡಾದವು. ಆಧುನಿಕ ತಂತ್ರಜ್ಞಾನವು ಜನರನ್ನು ಬಹುಬೇಗನೆ ಆಕರ್ಷಿಸಿತು. ತಯಾರಿಸುವ ಅವಧಿ ಕಡಿಮೆ ಉತ್ಪಾದನೆಯಲ್ಲಿ ಗರಿಷ್ಠ ಪ್ರಮಾಣದ ವೇಗ. ಹಾಗಾಗಿ ಸ್ಥಳೀಯ ಕುಶಲಕರ್ಮಿಗಳು ಆಧುನಿಕ, ಕೈಗಾರಿಕಾ ನೀತಿಗೆ ಪೈಪೋಟಿ ನೀಡುವಲ್ಲಿ ವಿಫಲರಾದರು. ಇದರಿಂದ ಅನಿವಾರ್ಯವಾಗಿ ಸ್ಥಳೀಯ ಶ್ರಮಿಕರು ಲಭ್ಯವಿರುವ ಕಸುಬು ಅಥವಾ ಉದ್ಯೋಗವನ್ನು ಆರಿಸಿಕೊಂಡು ಸ್ಥಳಾಂತರಗೊಂಡರು. ಹಾಗೇನೇ ಕೆಲವರು ತಮ್ಮ ಮೂಲ ವೃತ್ತಿಯನ್ನೇ ಅವಲಂಬಿಸುವ ಅನಿವಾರ್ಯ ಪರಿಸ್ಥಿತಿಯು ವಸಾಹತು ಕಾಲದ ಸಂದರ್ಭದಲ್ಲಿ ಬಂದಿತು ಎಂದು ಸ್ಪಷ್ಟಪಡಿಸಬಹುದು.

ಜಿಲ್ಲೆಯ ಉಪ್ಪಾರ ಸಮುದಾಯ ಬ್ರಿಟಿಷರು ಜಾರಿಗೆ ತಂದ ಹೊಸ ತೆರಿಗೆಯಿಂದ ತತ್ತರಿಸಿ ಅನಿವಾರ್ಯವಾಗಿ ತಮ್ಮ ಕೆಲಸಕ್ಕೆ ವಿದಾಯ ಹೇಳಿ ಮೂಲ ವೃತ್ತಿಯನ್ನು ಬಿಟ್ಟು

ನಂತದಲ್ಲಿ ಇಟ್ಟಿಗೆ ತಯಾರಕರಾಗಿ, ಸುಣ್ಣದ ಭಟ್ಟಿ ಕಾರ್ಯದಲ್ಲಿ ತೊಡಗಿಕೊಂಡು ಮನೆಗಳ ಕಟ್ಟಡಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿಕೊಂಡರು. ಅದರಂತೆ ಕೆರೆಕಟ್ಟೆ ಕಟ್ಟಲು ಸಾರ್ವಜನಿಕ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಹಾಗೂ ಹಳೇಯ ಕಟ್ಟಡಗಳ ದುರಸ್ಥಿ, ಜೀರ್ಣೋದ್ಧಾರ ಕಾರ್ಯದಲ್ಲಿ ತೊಡಗಿಕೊಂಡರು. ನೇಯ್ಗಗಾರರು ಜವಳಿ ಉದ್ಯಮದಲ್ಲಿ ಅಂದರೆ ಬಟ್ಟೆಯನ್ನು ನೂಲುವುದು ರೇಶ್ಮೆ, ಹತ್ತಿಯಿಂದ ನೇಯುತ್ತಿದ್ದರು. ಈ ಬಟ್ಟೆಗಳಿಗೆ ದೇವಾಂಗ ಸಮುದಾಯದವರು ಸಹ ಬಟ್ಟೆ ನೇಯುವ ವೃತ್ತಿಯಲ್ಲಿ ತೊಡಗಿದ್ದರು. ಬ್ರಿಟಿಷರ ಆಧುನಿಕ ಯಂತ್ರಗಳ ಮುಂದೆ ನೇಕಾರರು ಕೈಮಗ್ಗಗಳು ಪೈಪೋಟಿ ಮಾಡದೇ ನೆಲ ಕಚ್ಚಿದವು. ಇಲ್ಲಿ ಆಧುನಿಕ ಯಂತ್ರದ ನಿರ್ವಹಣೆಯನ್ನು ಕಲಿತು ಅದರಂತೆ ಉದ್ಯೋಗ ತೊಡಗಬೇಕು. ಇಲ್ಲ ಕಲಿಯಲು ಕಷ್ಟವಾದರೇ ಪರ್ಯಾಯ ಉದ್ಯೋಗಕ್ಕೆ ಹೊಂದಿಕೊಳ್ಳುವುದು ಅನಿವಾರ್ಯವಾಯಿತು. ಅದರಂತೆ ಮಾದಿಗರು, ನಾಯಕರು, ಕುರುಬ, ಪಾಂಚಾಳ, ಕಮ್ಮಾರ, ಬಡಗಿ, ದರ್ಜಿ, ವಡ್ಡರು, ಸುಣಗಾರ, ನೇಕಾರ, ದೀವಟಿಗೆ, ಶಿಲೇದಾರರು, ಪಿಂಜಾರ, ಹೊಲೆಯ, ಶಿಕ್ಕಲಿಕ, ಹರಣಶಿಕಾರಿ, ದಗ್ಗಲಿಕೆ, ಲಂಬಾಣಿ, ಕೊರಮ, ಕೊರಚರು, ಲಿಂಗಾಯತರು, ಗಾಣಿಗರು ಹಾಗೂ ಇನ್ನೂ ಅನೇಕ ಸಮುದಾಯಗಳು ತಮ್ಮ ಮೂಲ ವೃತ್ತಿಯನ್ನು ಮಾಡುತ್ತಾ ಬೇರೆ ಬೇರೆ ಉದ್ಯೋಗದಲ್ಲಿ ತೊಡಗಿಸಿಕೊಂಡರೆ, ಇನ್ನು ಕೆಲವರು ಇದ್ದುದರಲ್ಲಿಯೇ ಜೀವನ ಸಾಗಿಸುವ ದೃಢ ಸಂಕಲ್ಪದಿಂದ ತಮ್ಮ ಕುಲ ಕಸಬಿನಲ್ಲಿ ಇದ್ದುಕೊಂಡು ವೃತ್ತಿ ಮುಂದುವರೆಸಿದರು. ವಸಾಹತು ಕಾಲದ ಸಂದರ್ಭದಲ್ಲಿ ಈ ಮೇಲಿನ ಹಾಗೂ ಇತರ ಸಮುದಾಯದ ಶ್ರಮಿಕರ ಸೇವೆಯನ್ನು ಉಪಯೋಗಿಸಿಕೊಂಡು ಬ್ರಿಟಿಷರು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಇಲ್ಲಿ ಶ್ರಮಿಕವರ್ಗದವರ ಕೆಲಸದ ಮೇಲಿನ ಕಾಳಜಿ, ಪ್ರೀತಿ, ಪ್ರಾಮಾಣಿಕ ಸೇವೆ, ಆಸಕ್ತಿಯು ಮುಖ್ಯವಾದುದರಿಂದ ಎಷ್ಟು ಪ್ರಶಂಸನೀಯ ಸುರಿಮಳೆ ಗರಿದರೂ ಸಾಲದು. ಶ್ರಮಿಕವರ್ಗ ನಮ್ಮ ಮುಂದೆ ಇಲ್ಲ, ಆದರೆ ಅವರು ಮಾಡಿದ ಕೆಲಸ ಇಂದಿಗೂ ನಮ್ಮ ಮುಂದೆ ಸ್ಮಾರಕಗಳ ರೂಪದಲ್ಲಿ ಆಧುನಿಕ ಸ್ಮಾರಕಗಳಿಗೆ ಮಾದರಿಗಳಾಗಿ ನಮ್ಮ ಕಣ್ಮುಂದಿವೆ. ಶ್ರಮಿಕವರ್ಗದ ಕೈ ಚಳಕದಿಂದ ನಿರ್ಮಾಣಗೊಂಡಂತಹ ವಸಾಹತು ಕಾಲದ ಸ್ಮಾರಕಗಳು ಬೆಲೆ ಕಟ್ಟಲಾರದ ಆಸ್ತಿ ಎಂದು ಹೇಳಬಹುದು. ಶ್ರಮಿಕವರ್ಗ ಯುರೋಪಿನ ಇಂಜನಿಯರರು ಹಾಗೂ ಬ್ರಿಟಿಷ ಅಧಿಕಾರಿಗಳ ನಿರ್ದೇಶನದಂತೆ ಕೆಲಸ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಕೆಲವೊಂದು ಸಾರಿ ಶ್ರಮಿಕರು ತಮ್ಮ ಜ್ಞಾನ, ಬುದ್ಧಿಶಕ್ತಿ, ಕೈಚಳಕವನ್ನು ಉಪಯೋಗಿಸಿ ಕಟ್ಟಡಗಳನ್ನು ಸಹ ನಿರ್ಮಿಸಿದ ಉದಾಹರಣೆಗಳುಂಟು. ಕಟ್ಟಡಗಳ ನಿರ್ಮಾಣದಿಂದ ಹಳ್ಳಿಗಳು ನಗರಗಳಾಗಿ ಉತ್ಪಾದನೆಯ ಗುಣಮಟ್ಟವು ಹೆಚ್ಚಾಗಿ ಉದ್ಯೋಗದಲ್ಲಿ ಹೆಚ್ಚಳ, ಆಧುನಿಕ ತಂತ್ರಜ್ಞಾನದ ತಿಳುವಳಿಕೆ ಮತ್ತು ಬಳಕೆ ಇವುಗಳಿಂದ ಒಂದು ದೇಶವು ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ.

**ಕೊನೆ ಟಿಪ್ಪಣಿಗಳು**

೧. The Oxford English Dictionary IInd Edition , Pp.495

೨. ಮ್ಯಾಗೇರಿ ಐ.ಜಿ. ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು(ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೫

೩. ಅಂಬಳಿಕೆ ಹಿರಿಯಣ್ಣ(ಪ್ರಸಂ.), ೨೦೦೯, ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೯೨೯

೪. ಮ್ಯಾಗೇರಿ ಐ.ಜೆ., ಪೂರ್ವೋಕ್ತ, ಪು.೧೫-೧೬

೫. ಅದೇ, ಪು.೧೬

೬. ಅದೇ, ಪು.೧೭

೭. ಅದೇ, ಪು.೧೭-೧೮

೮. ಅದೇ, ಪು.೧೮

೯. ಅದೇ, ಪು.೧೮-೧೯

೧೦. ಅದೇ, ಪು.೧೯-೨೦

೧೧. ಅದೇ, ಪು.೨೦

೧೨. ಅದೇ, ಪು೨

೧೩. ಸಣ್ಣಪಾಲಯ್ಯ ಬಿ.ಪಿ., ೨೦೧೭, ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ(ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೬೬-೬೭

೧೪. ಅದೇ, ಪು.೬೮

೧೫. ಅದೇ, ಪು.೬೮

೧೬. ವಿಲ್ ಡ್ಯೂರಾಂಟ್(ಮೂಲ), ಪ್ರಧಾನ ಗುರುದತ್ತ(ಅನು)(ಪ್ರಸಂ.), ೨೦೦೨, ನಾಗರಿಕತೆಯ ಕಥೆ ಧರ್ಮ ಶ್ರದ್ಧೆಯ ಯುಗ, ಸಂಪುಟ ೪, ಪು.೧೧೭೪

೧೭. ಮರಿಶಾಮಾಚಾರ್ ಎನ್.(ಸಂ), ೨೦೦೨, ಕಲಾಚರಿತ್ರೆ, ಪು.೧೩೧

೧೮. ವಿಲ್ ಡ್ಯೂರಾಂಟ್(ಮೂಲ), ೨೦೦೨, ಪೂರ್ವೋಕ್ತ, ಪು.೧೦೨೬

೧೯. ಅದೇ, ಪು.೧೨೧೨

೨೦. ಅದೇ, ಪು.೧೨೧೪

೨೧. ಸಂದೀಪ ಪಡ್ಡೆ, ೨೦೧೨, ವಾಸ್ತುಶಿಲ್ಪಗಳು, ಪು.೧೮

೨೨. ಸಣ್ಣಪಾಲಯ್ಯ ಬಿ.ಪಿ., ಪೂರ್ವೋಕ್ತ, ಪು.೭೧

೨೩. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ೨೦೦೯, ಪೂರ್ವೋಕ್ತ, ಪು.೧೭೯-೧೮೦

೨೪. ಮರಿಶಾಮಾಚಾರ್ ಎನ್., ೨೦೦೨, ಪೂರ್ವೋಕ್ತ, ಪು.೧೨೯

೨೫. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ೨೦೦೯, ಪೂರ್ವೋಕ್ತ, ಪು.೧೭೯-೧೮೦

೨೬. ಅದೇ, ಪು.೧೮೦

೨೭. ಅದೇ, ಪು.೧೮೦

೨೮. ಅದೇ, ಪು.೧೮೦

೨೯. ಅದೇ, ಪು.೧೨೯

೩೦. ವಿಲ್ ಡ್ಯೂರಾಂಟ್(ಮೂಲ), ೨೦೦೨, ಪೂರ್ವೋಕ್ತ, ಪು.೧೧೭೦

೩೧. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ಪೂರ್ವೋಕ್ತ, ಪು.೧೮೦

೩೨. ಅದೇ, ಪು.೧೭೯

೩೩. ಅದೇ, ಪು.೧೭೯

೩೪. ಅದೇ, ಪು.೧೭೯

೩೫. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೫೯

೩೬. ಅದೇ, ಪು.೬೦

೩೭. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ಪೂರ್ವೋಕ್ತ, ಪು.೧೪೯

೩೮. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೬೧

೩೯. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೭೦, ಕರ್ನಾಟಕದ ಇತಿಹಾಸ ದರ್ಶನ, ಪು.೧೦೫೪

೪೧. ಸಣ್ಣಪಾಲಯ್ಯ ಬಿ.ಪಿ., ೨೦೧೭ ಪೂರ್ವೋಕ್ತ, ಪು.೬೧

೪೨. ರಮಾನಾಥ ಕೋಟೆಕಾರ್, ೨೦೧೩, ಬಲ್ಲವರು ಮತ್ತು ಬಾಸೆಲ್ ಮಿಷನ್, ಪು.೭೦

೪೩. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೬೪

೪೪. ವಿಲ್ ಡ್ಯೂರಾಂಟ್(ಮೂಲ), ೨೦೦೨, ಪೂರ್ವೋಕ್ತ, ಪು.೧೪೮

೪೫. ಅದೇ, ಪು.೧೪೭

೪೬. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೬೫-೬೬

೪೭. ಅದೇ, ಪು.೬೬

೪೮. ಉಪಾಧ್ಯ ಡಿ.ಎ., ೨೦೦೧, ಪಾಶ್ಚಾತ್ಯ ದೃಶ್ಯಕಲೆಗಳು, ಪು.೩೩

೪೯. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ಪೂರ್ವೋಕ್ತ, ಪು.೧೮೦

೫೦. ಅದೇ, ಪು.೧೮೦

೫೧. ಅಶೋಕ ಅಕ್ಕಿ, ಕಲಾಚರಿತ್ರೆ, ಪು.೪೭

೫೨. ಅದೇ, ಪು.೪೭

೫೩. ಅದೇ, ಪು.೪೭

೫೪. ಉಪಾಧ್ಯ ಡಿ.ಎ., ೨೦೦೧, ಪೂರ್ವೋಕ್ತ, ಪು.೪೯

೫೫. ಅದೇ, ಪು.೪೯

೫೬. ಅದೇ, ಪು.೫೦

೫೭. ಅದೇ, ಪು.೫೧

೫೮. ಅದೇ, ಪು.೫೧

೫೯. ಅದೇ, ಪು.೫೩

೬೦. ಅದೇ, ಪು.೫೫

೬೧. ಅದೇ, ಪು.೫೫

೬೨. ಅದೇ, ಪು.೫೬

೬೩. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ಪೂರ್ವೋಕ್ತ, ಪು.೧೮೦

೬೪. ಅಶೋಕ ಅಕ್ಕಿ, ಕಲಾಚರಿತ್ರೆ, ಪು.೫೬

೬೫. ಉಪಾಧ್ಯ ಡಿ.ಎ., ೨೦೦೧, ಪೂರ್ವೋಕ್ತ, ಪು.೪೬

೬೬. ಅಶೋಕ ಅಕ್ಕಿ, ಕಲಾಚರಿತ್ರೆ, ಪು.೫೬

೬೭. ಅಂಬಳಿಕೆ ಹಿರಿಯಣ್ಣ(ಪ್ರ.ಸಂ.), ಪೂರ್ವೋಕ್ತ, ಪು.೧೮೦

೬೮. ಕಾಳೆ ವಿ.ಟಿ., ೨೦೦೭, ಚಿತ್ರಕಲಾ ದರ್ಪಣ, ಪು.೬೨

೬೯. ಉಪಾಧ್ಯ ಡಿ.ಎ., ೨೦೦೧, ಪೂರ್ವೋಕ್ತ, ಪು.೭೧

೭೦. ಅದೇ, ಪು.೭೩–೭೪

೭೧. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೬೯

೭೨. ತಿಪ್ಪೇರುದ್ರಸ್ವಾಮಿ ಎಚ್., ೨೦೦೧, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು.೬೫೪

೭೩. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೧೯೮

೭೪. ಶ್ರೀನಿವಾಸನ್ ಎಂ.ಜಿ., ೨೦೦೨, ಸಿವಿಲ್ ಎಂಜನಿಯರಿಂಗ್ ಮೇಲೆ ವಿಜ್ಞಾನದ ಪ್ರಭಾವ, ಪು.೭

೭೫. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೧೯೯

೭೬. ಅದೇ, ಪು.೧೯೯

೭೭. ಮಜುಂದಾರ್ ಆರ್.ಸಿ.(ಮೂಲ), ಎ.ವಿ.ನರಸಿಂಹಮೂರ್ತಿ(ಅನು), ೧೯೯೮, ಸ್ವಾತಂತ್ರ್ಯ ಸಂಗ್ರಾಮ(ಭಾಗ–೩), ಪು.೩೮೦

೭೮. ಅದೇ, ಪು.೩೮೦

೭೯. ಅದೇ, ಪು.೩೮೦

೮೦. ವಿಲ್ ಡ್ಯೂರಾಂಟ್(ಮೂಲ), ೨೦೦೨, ಪೂರ್ವೋಕ್ತ, ಪು.೧೧೫೮

೮೧. ಅದೇ, ಪು.೧೧೫೮

೮೨. ಪಿಯಸ್ ಫಿಡೆಲಿಸ್ ಪಿಂಟೊ, ೨೦೦೪, ಕೆಳದಿ ವೀರಶೈವ ನಾಯಕರು ಮತ್ತು ಕ್ರೈಸ್ತರು, ಪು.೧೪೬

೮೩. ಅದೇ, ಪು.೧೪೬

೮೪. ಮೋಹನ್‌ಕೃಷ್ಣ ರೈ ಕೆ., ೨೦೦೭, ವಸಾಹತುಶಾಹಿ ಮತ್ತು ನಗರೀಕರಣ, ಪು.೬೩

೮೫. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೨೦೪

೮೬. ಶ್ರೀನಿವಾಸ ಎಂ.ಜಿ., ೨೦೧೭, ಪೂರ್ವೋಕ್ತ, ಪು.೨೦೪

೮೭. ವಿಜಯಶ್ರೀ ಇಟ್ಟಣ್ಣವರ, ೨೦೧೧, ಹದಿನೆಂಟು ಜಾತಿಗಳು, ಪು.೧

೮೮. ಯಶೋಧ ಪಿ., ೨೦೧೬, ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ(೧೭೯೯–೧೯೪೭), ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಪು.೧೧೯

೮೯. ಗುರುನಾಥ ನಾಗಲೋಟಿ, ೨೦೦೯, ನೇಕಾರಿಕೆ ವೃತ್ತಿಯಲ್ಲಿ ಪ್ರಾದೇಶಿಕ ವೈವಿಧ್ಯತೆಗಳು, ಸಿ.ಮಹದೇವ(ಸಂ), ನೇಕಾರ ಸಮಾಜ ಸಂಸ್ಕೃತಿ ಆರ್ಥಿಕ ಸ್ಥಿತಿಗತಿ, ಪು.೩೮

೯೦. ಭಾರತದ ಗ್ಯಾಸೆಟಿಯರ್, ೧೯೮೭, ಸಂಪುಟ ೨, ಭಾಗ ೧, 'ಅರ್ಥವ್ಯವಸ್ಥೆ ಮತ್ತು ಉದ್ಯಮಗಳು', ಪು.೫೧೯

೯೧. ಸಣ್ಣಪಾಲಯ್ಯ ಬಿ.ಪಿ., ೨೦೧೭, ಪೂರ್ವೋಕ್ತ, ಪು.೨೦೭

# ಅಧ್ಯಾಯ: ನಾಲ್ಕು

## ಬಾಗಲಕೋಟೆ ಜಿಲ್ಲೆಯ ವಸಾಹತು ಕಾಲದ ಸ್ಮಾರಕಗಳು

೪.೧. ಧಾರ್ಮಿಕ ವಾಸ್ತುಶಿಲ್ಪ ಹಾಗೂ ಕಟ್ಟಡಗಳು

೪.೨. ಶಿಕ್ಷಣ ಸಂಸ್ಥೆಗಳು ಹಾಗೂ ಕಟ್ಟಡಗಳು

೪.೩. ಆಡಳಿತ ಕಟ್ಟಡಗಳು

೪.೪. ರಕ್ಷಣಾ ಕಟ್ಟಡಗಳು

೪.೫. ಸಾರ್ವಜನಿಕ ಕಟ್ಟಡಗಳು

೪.೬. ಬ್ರಿಟಿಷರ ಸಮಾಧಿ(ಗೋರಿ)ಕಟ್ಟಡಗಳು

೪.೭. ಜಮಖಂಡಿ ಮತ್ತು ಮುಧೋಳ ಸಂಸ್ಥಾನಿಕರ ಕಟ್ಟಡಗಳು

# ಅಧ್ಯಾಯ: ನಾಲ್ಕು

# ಬಾಗಲಕೋಟೆ ಜಿಲ್ಲೆಯ ವಸಹಾತು ಕಾಲದ ಸ್ಮಾರಕಗಳು

## ಪೀಠಿಕೆ

ಜುಡಾ ದೇಶದ ಬೆಥ್ಲಹೆಮ್ ಎಂಬ ಹಳ್ಳಿಯಲ್ಲಿ ಎರಡು ಸಾವಿರ ವರ್ಷಗಳ ಹಿಂದೆ ನಡೆದ ಮಹತ್ವದ ಘಟನೆಯನ್ನು ಸ್ಮರಿಸುವ ದಿನವೇ ಕ್ರಿಸ್‌ಮಸ್. ದೇವರು ಮಾನವನ ಮೇಲಿನ ಮಹಾಪ್ರೀತಿಯ ಫಲವಾಗಿ ಏಕಮಾತ್ರ ಪುತ್ರನನ್ನೇ ಪ್ರೀತಿ, ಶಾಂತಿಯ ಪ್ರತೀಕವಾಗಿ ಮಾನವ ರಕ್ಷಣೆಗಾಗಿ ಭೂಲೋಕಕ್ಕೆ ಕಳುಹಿಸಿದ ಮಹಾ ಸುದಿನವಿದು. ದೀನರಲ್ಲಿ ದೀನರಾಗಿ ಜನಿಸಿದ ಪ್ರಭು ಯೇಸುವಿನ ಶಾಂತಿ–ಐಕ್ಯತೆ, ಪ್ರೀತಿಯನ್ನು ಹಂಚುವ ದಿನ ಕ್ರಿಸ್‌ಮಸ್ ಆಚರಣೆಯಾಗಿದೆ. ಮಾನವರ ನಡುವೆ ನೆಲೆಯಾಗಲು ಬಂದ ಕ್ರಿಸ್ತನು ಬಡವ–ಶ್ರೀಮಂತ, ವಿದ್ಯಾವಂತ–ಅವಿದ್ಯಾವಂತ, ಹಿರಿಯ–ಕಿರಿಯ, ಮೇಲು–ಕೀಳು ಎಂಬ ಭೇದಭಾವವಿಲ್ಲದೆ ಪ್ರತಿಯೊಬ್ಬರಲ್ಲೂ ನೆಲೆಯಾಗಿದ್ದಾನೆ.

ಕ್ರಿಸ್‌ಮಸ್(Chritmas) ಎಂದರೆ, christ + mass ಪದ ನಿಷ್ಪತ್ತಿ ಹೊಂದಿ, ಜನಸಮೂಹದೊಡನೆ ಕ್ರಿಸ್ತ ಎಂದರ್ಥವಾಗುತ್ತದೆ. ಸತ್ಯ, ಪ್ರೀತಿ, ಐಕ್ಯತೆಯ ಮಾರ್ಗವನ್ನು ಪಾಲಿಸಿ ನಡೆಯಲು ಏಕಮಾತ್ರ ಪುತ್ರನ ಮೂಲಕ ಪ್ರೋತ್ಸಾಹಿಸಿದ ಕರುಣಾಮಯ ದೇವರಿಗೆ ವಂದನೆ ಸ್ತುತಿ–ಸ್ತೋತ್ರ, ಪ್ರಾರ್ಥನೆ ಸಲ್ಲಿಸುವುದರ ಜೊತೆಗೆ ಶಾಂತಿದಾಯಿಕ ಯೇಸು ಸ್ವಾಮಿಯನ್ನು ಹಿಂಬಾಲಿಸಲು ಬೇಕಾದ ವರ ಪ್ರಸಾದಗಳನ್ನು ಕೇಳಿಕೊಳ್ಳುವ ಹಬ್ಬವೇ ಕ್ರಿಸ್‌ಮಸ್. ಜಗತ್ತಿನ ರಾಗ–ದ್ವೇಷ ಸಾಧ್ಯತೆ. ಆದರೆ ಬಳಕೆ ಮಾಡಿ ನಡುವೆಯೂ, ಅಸಮ್ಮತಿ ಮಾತ್ರ ಸಂಘರ್ಷಗಳ ಮಧ್ಯೆಯೂ 'ಪರಲೋಕದಲ್ಲಿ' ದೇವರಿಗೆ ಮಹಿಮೆ, ಇಹಲೋಕದಲ್ಲಿ ಸಮಾನ ಮನಸ್ಕರಿಗೆ ಶಾಂತಿ ಎಂಬ ಘೋಷಣೆಯ ಹಿಂದಿನ ತತ್ವವನ್ನು ಶತಮಾನಗಳ ಮೂಲಕ ಮನುಕುಲದ ಹೃದಯದಲ್ಲಿ ಸಾಗಿ ತಂದಿದೆ ಕ್ರಿಸ್‌ಮಸ್ ಸಂದೇಶ.[೧] ಇದು ಕ್ರಿಸ್‌ಮಸ್‌ನ ಮಹತ್ವದ ವೈಶಿಷ್ಟ್ಯತೆ.

ಯುರೋಪದಲ್ಲಿ ಯಹೂದಿಯರಾದ ಮರಿಯಾ(ಮೇರಿ) ಹಾಗೂ ಜೋಸೆಫ್ ದಂಪತಿಗಳ ಮಗನಾಗಿ ಏಸು ಅಥವಾ ಜೀಸಸ್‌ನು ಜೆರೂಸಲೇಂ ಹತ್ತಿರ ಬೆಥ್ಲೆಹೆಮ್ ಎಂಬಲ್ಲಿ ಗೋದಲಿ(ಕ್ರಿಲ್)ಯಲ್ಲಿ ಜನಿಸಿದನು. ನಜರತ್ ಎಂಬ ಹಳ್ಳಿಯಲ್ಲಿ ಏಸು ತನ್ನ ಬಾಲ್ಯವನ್ನು ಕಳೆದು, ಮಹಾಜ್ಞಾನಿಯಾದ 'ಜಾನ್' ಬಳಿ ಧರ್ಮದೀಕ್ಷೆ ಪಡೆದು ಮುಂದೆ ಮಹಾನ್ ಧರ್ಮ ಸ್ಥಾಪಕನಾಗಿ ಧರ್ಮೋಪದೇಶಗಳನ್ನು ಮೌಖಿಕವಾಗಿ ನಡೆಸಿದನು. ಜೀಸಸ್ ಎಂದರೆ ದೇವರೆ ನಮ್ಮೊಡನಿದ್ದಾನೆ ಎನ್ನುವ ಅರ್ಥ. 'ತನ್ನ ಜನರನ್ನು ಅವರ ಪಾಪಗಳಿಂದ ರಕ್ಷಿಸಿ ಉದ್ಧಾರ ಮಾಡುವವನು' ಎನ್ನುವ ಅರ್ಥವಿದೆ.[೨] ಸ್ಥಳೀಯ ಭಾಷೆಯಾದ ಸಿರಿಯನ್(ಹಿಬ್ರೂ) ಭಾಷೆಯಲ್ಲಿ ಧರ್ಮವನ್ನು ಬೋಧಿಸಿದನು. ಏಸುವಿನ ಜೊತೆಗೆ ಹನ್ನೆರಡು ಜನರಾದ, ಸಾಯಮನ್(ಪೀಟರ್), ಆಂಡ್ರ್ಯೋ(ಸಾಯಮನ್ ತಮ್ಮ), ಜಾಕೋಬ್(ಜಬೆದಾಯನ ಮಗ), ಜಾನ್(ಜಾಕೋಬ್‌ನ ತಮ್ಮ), ಫಿಲಿಪ್, ಬಾರ್ಥೋಲೊಮ್ಯೂ, ಥಾಮಸ್, ಸುಂಕದ ಮ್ಯಾಥ್ಯೊ, ಜೇಮ್ಸ್(ಅಲ್ಫಾಯನ ಮಗ), ಲೆಬೌಸತದಾಯ, ಸಾಯಮನ್(ಮತಾಭಿಮಾನಿ ಎಂಬ ಹೆಸರು ಹೊಂದಿದವನು) ಜೂಡ ಇಸ್ಕರಿಯಾತ್(ಯೇಸುನನ್ನು ಹಿಡಿದುಕೊಟ್ಟವ) ಇವರೆಲ್ಲರೂ ಏಸುವಿನ ಶಿಷ್ಯರಾಗಿ ಏಸುವಿನ ಪವಾಡವನ್ನು ಮಾಡಿ ತೋರಿಸುವ ಸಾಮರ್ಥ್ಯವನ್ನು ಪಡೆದರು.[೩] ಸುವಾರ್ತೆಗಳು (Gospels) ಹಾಗೂ ಹೊಸ ಒಡಂಬಡಿಕೆ(New Testament), ಅಪೋಕ್ರಿಫಾ (Apocrypha), ಫಿಲೊ(Phyllo), ರಚನೆಗಳು ಜೋಸೆಫ್‌ನ ಕೃತಿಗಳು. ಹಳೆಯ ಒಡಂಬಡಿಕೆ (old Testament), ಆಯ್ದುಭಾಗಗಳಾದ ಇನಾಕ್(Enoch), ಡೇನಿಯಲ್(Danial), ಪುಸ್ತಕಗಳು ಕ್ರೈಸ್ತ ಧಾರ್ಮಿಕ ಗ್ರಂಥಗಳಾಗಿವೆ.[೪] ಈ ಐದು ಗ್ರಂಥಗಳ ಆಧಾರದಿಂದ ಯೇಸುವಿನ ಉಪದೇಶಗಳ ಸಾರವನ್ನು ಜೀವನದ ದಿವ್ಯತೆಯನ್ನು ಅರಿಯಬಹುದಾಗಿದೆ.

## ನಂಬಿಕೆ ಮತ್ತು ಆಚರಣೆಗಳು

### ಕ್ರೈಸ್ತ ಮತದ ತತ್ವಗಳು

ಕ್ರೈಸ್ತಧರ್ಮದಲ್ಲಿ ಮೂರ್ತಿಗಳಿಂದ ಅಥವಾ ದೇವರಿಗೆ ರೂಪ ಕೊಟ್ಟು ಪೂಜಿಸುವುದು ನಿಷೇಧ. ಕೇವಲ ಮನಸ್ಸಿನಲ್ಲಿ ಅಂತಃಕರಣದಲ್ಲಿ ದೇವರನ್ನು ಚಿಂತಿಸಬೇಕು. ಪ್ರಾರ್ಥನೆಯು ಹೃದಯಾಳದಲ್ಲಿರಬೇಕು. ಪ್ರಾರ್ಥನೆ ಸಾರ್ವಜನಿಕ ಸ್ಥಳಗಳು, ಗೊಂದಲ ಸ್ಥಳಗಳಲ್ಲಿ ಮಾಡದೆ, ಶಾಂತವಾದ ಸ್ಥಳದಲ್ಲಿ ಹೃದಯಪೂರ್ವಕವಾಗಿ ಪ್ರಾರ್ಥನೆಯನ್ನು ಮಾಡಬೇಕು. ಜೀವನದಲ್ಲಿ ಸತ್ಯ, ಪ್ರೇಮ, ಕರುಣೆ, ದಾನ, ದಯೆ, ತ್ಯಾಗ, ಪ್ರೀತಿ, ಶಾಂತಿ, ಕೋಪ, ತ್ಯಾಜ್ಯ, ಔದಾರ್ಯ, ನ್ಯಾಯಪರತೆ, ಸಂಯಮ, ಸೇವೆ, ಕ್ಷಮೆ, ಸರಳತೆ, ಶ್ರದ್ಧೆ, ತಾಳ್ಮೆ, ಸ್ತ್ರೀ ಗೌರವದೊಡನೆ ಸ್ತ್ರೀ ರಕ್ಷಣೆ, ಅಹಿಂಸೆ ಇವುಗಳಿಗೆ ಪ್ರಾಧಾನ್ಯತೆವಿದೆ. ಕ್ರೈಸ್ತರಲ್ಲಿ ಜಾತಿ ಬೇಧವಿಲ್ಲ. ಮೇಲು–

ಕೀಳುಗಳಿಲ್ಲ, ಎಲ್ಲಾ ಮಾನವರೂ ಸಮಾನರು. ಆದರೆ ಮುಂದೆ ಅದು ರೋಮನ್ ಕ್ಯಾಥೋಲಿಕ್ ಹಾಗೂ ಪ್ರೋಟೆಸ್ಟೆಂಟ್ ಎಂದು ಎರಡು ಪಂಗಡಗಳಾದವು.[೫] ಈ ಎರಡು ಪಂಗಡಗಳಲ್ಲಿ ನಂಬಿಕೆ ಮತ್ತು ಆಚರಣೆಗಳಲ್ಲಿ ಭಿನ್ನತೆಗಳಿವೆ.

**ದೇವರ ಪವಿತ್ರತ್ರಯ(Holy Trinity)**

ದೇವರು ಮೂರು ಪವಿತ್ರ ರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆಂದು ಕ್ರೈಸ್ತರು ನಂಬಿದ್ದಾರೆ.

**೧. ಪರಮ ಪಿತ(God the father in Heaven)**

ದೇವನು ಒಬ್ಬನೇ ಒಬ್ಬ. ಈ ವಿಶ್ವದ ತಂದೆಯಾಗಿದ್ದಾನೆ. ದೇವರು ಸರ್ವಶಕ್ತ ಸರ್ವವ್ಯಾಪಕ, ಸರ್ವಸೃಷ್ಟಿಕರ್ತ, ನಿರಾಕಾರ, ಅನಂತ, ಅನಾದಿ, ಪರಮಪವಿತ್ರ, ಕರುಣಾಮಯಿ, ಅಗೋಚರ ಶಕ್ತಿ, ಹಾಗಾಗಿ ಚಿತ್ರ, ದೃಶ್ಯ, ಇಂದ್ರಿಯಗಳಿಂದ ಅರಿಯಲು ಸಾಧ್ಯವಿಲ್ಲ. ಅದು ಆಂತರಿಕ ಚಿಂತನೆ ಪ್ರಾರ್ಥನೆಯಿಂದ ಮಾತ್ರ ಸಾಧ್ಯ.

**೨. ದೇವಪುತ್ರ (Son of God)**

ದೇವರನ್ನು ದೇವಪುತ್ರನಾದ ಏಸುವಿನ ಮೂಲಕ ಅರಿಯಬಹುದು. ದೇವರಿಗೂ ಮಾನವರಿಗೂ ಮಧ್ಯೆ ಸಂಪರ್ಕ ಸೇತುವೆ ಏಸು, ಲೋಕದ ಜನರ ಉದ್ಧಾರಕ್ಕಾಗಿಯೇ ದೇವರಾದ ಸ್ವರ್ಗದಲ್ಲಿರುವ ತಂದೆಯ ಮಗನಾದ ಏಸುವನ್ನು ಧರೆಗೆ ಕಳುಹಿಸಿದ್ದಾನೆ. ಏಸು ನಡೆದ ಹಾಗೂ ಹೇಳಿದ ದಾರಿಯಲ್ಲಿ ನಡೆದರೆ ದೇವರನ್ನು ಅರಿಯಬಹುದು. ಏಸು ಒಬ್ಬನೇ ಮಾರ್ಗದರ್ಶಕನಾಗಿದ್ದಾನೆ.

**೩. ಪವಿತ್ರ ಆತ್ಮ**(The Holy Ghost)

ಈ ಜಗತ್ತಿನಲ್ಲಿ ದೇವರ ಒಂದು ದಿವ್ಯವಾದ ದೈವೀ ಶಕ್ತಿಯ ಪವಿತ್ರ ಆತ್ಮವಿದೆ. ಅದನ್ನೇ ಸತ್‌ಶಕ್ತಿ(God) ಎನ್ನುತ್ತಾರೆ. ಅದು ಮಾನವನು ಕೆಟ್ಟ ದಾರಿಯಲ್ಲಿ ನಡೆಯದಂತೆ ತಡೆಯುವ ಶಕ್ತಿಯಾಗಿದೆ. ಮಾನವನು ದೇವರ ಅನುಭವವನ್ನು ಪಡೆದ ದೇವರ ಸಾಮ್ರಾಜ್ಯದಲ್ಲಿ ಸೇರಬೇಕಾದರೆ ಈ ಸತ್‌ಶಕ್ತಿಯಾದ ಪವಿತ್ರಾತ್ಮನ(The Holy Ghost) ಅನುಗ್ರಹವನ್ನು ಪ್ರತಿಯೊಬ್ಬನು ಪಡೆಯಲೇಬೇಕು.[೬]

**ಏಸುವಿನ ಪಂಚಸೂತ್ರ (ಆದೇಶ)ಗಳು**

೧. ಕೊಲ್ಲಬೇಡ, ಸಿಟ್ಟಾಗಬೇಡ, ಪರರ ನಿಂದಿಸಬೇಡ.

೨. ಪರಸ್ತ್ರೀಯ ಸಂಗ ಮಾಡಬೇಡ, ವಿನಾಕಾರಣ ಹೆಂಡತಿಯ ಪರಿತ್ಯಜಿಸಬೇಡ.

೩. ಆಣೆ ಮಾಡಬೇಡ, ಪರರ ಬಗ್ಗೆ ಹೇಳಿದರೆ ಸಂಕ್ಷಿಪ್ತವಾಗಿ ಹೌದು ಅಥವಾ ಇಲ್ಲ ಎಂದಷ್ಟೇ ಹೇಳು.

೪. ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲಿನ ಪ್ರತೀಕಾರ ಬೇಡ, ಕೇಡಿಗೆ ಪ್ರತಿಕೇಡು ಮದ್ದಲ್ಲ.

೫. ಕೇವಲ ಜಾತಿ ಬಾಂಧವರಷ್ಟೇ ಅಲ್ಲ, ಇಡಿ ಮಾನವ ಕುಲವೇ ಒಂದು ಹಾಗೂ ಬಂಧುಗಳೆಂದು ತಿಳಿದು ಪ್ರೀತಿಸು.[೭]

ಈ ಎಲ್ಲಾ ಸೂತ್ರಗಳು ವಿಶ್ವ ಮಾನವ ಧರ್ಮ, ಮಾನವತಾ ಪ್ರೇಮಕ್ಕೆ ಸಾಕ್ಷಿಯಾಗಿವೆ.

**ಕ್ರೈಸ್ತರ ಸಪ್ತ ಸಂಸ್ಕಾರಗಳು**

೧. ದೇಹ ಮತ್ತು ಆತ್ಮ ಸಂಯೋಗವೇ ಹುಟ್ಟು, ದೇಹ, ಆತ್ಮ ಬೇರೆಯಾಗುವುದೇ ಮರಣ, ಆತ್ಮಶುದ್ಧಿಗಾಗಿ ಜ್ಞಾನಸ್ನಾನ(Baptism) ಕ್ರೈಸ್ತ ದೀಕ್ಷೆ ತೊಡಬೇಕು.

೨. ದೃಢೀಕರಣ(Confirmation) ಕ್ರೈಸ್ತ ತತ್ವದ ನಂಬಿಕೆಯ ದೃಢತೆ.

೩. ದೇವ ಪವಿತ್ರ ಪ್ರಸಾದ (Eucharist)

೪. ಪ್ರೇಮ ಸಂಸ್ಕಾರ (Sacrament of Love)

೫. ದೇವ ಪವಿತ್ರ ಪೂಜೆ (Holy mass)

೬. ತಪ್ಪೊಪ್ಪಿಗೆ ಅಥವಾ ಪ್ರಾಯಶ್ಚಿತ್ತ ಸಂಸ್ಕಾರ (Confessionor Penance)

೭. ಪವಿತ್ರ ವಿವಾಹ (Matrimony).[೮]

**ಕ್ರೈಸ್ತರ ಪಂಗಡಗಳು**

ಕ್ರೈಸ್ತರಲ್ಲಿ ಮೂರು ತಾತ್ವಿಕ ಬಣಗಳಿವೆ. ಅವು ಇಂತಿವೆ.

೧. **ಈಸ್ಟರ್ನ್ ಆರ್ಥೋಡಾಕ್ಸ್ ಚರ್ಚ**

ಇವರು ಪ್ಯಾಲೆಸ್ತಿನ್, ಸಿರಿಯಾ, ಈಜಿಪ್ಟ್, ಇಥಿಯೋಪಿಯಾ, ಇಂಡಿಯಾ, ಗ್ರೀಸ್, ರಷ್ಯಗಳಲ್ಲಿರುವ ಪ್ರಾರಂಭದಲ್ಲಿದ್ದ ಅಂದರೆ ರೋಮ್‌ದಲ್ಲಿ ಕ್ರೈಸ್ತರಾಗುವುದಕ್ಕಿಂತ ಮೊದಲಿದ್ದ ಕ್ರೈಸ್ತ ವಂಶಜರಿವರು. ಇದಕ್ಕೆ ಸಿರಿಯನ್ ಚರ್ಚಎಂತಲೂ ಕರೆಯುವುದುಂಟು. ರೋಮನ್ ಸಾಮ್ರಾಜ್ಯ ಕ್ರಿ.ಶ.೩೧೨ರಲ್ಲಿ ಕ್ರೈಸ್ತಧರ್ಮವನ್ನು ಅಧಿಕೃತ ಧರ್ಮವೆಂದು ಸ್ವೀಕರಿಸಿತು. ಈಸ್ಟರ್ನ್ ಚರ್ಚನ ಪದ್ಧತಿ ಹಳೆಯದು. ರೋಮನ್ ಕ್ಯಾಥೋಲಿಕರಿಗಿಂತ ತುಸು ಬೇರೆ. ಇವರು

ಏಸುವಿನ ಅಥವಾ ಇತರ ಕ್ರೈಸ್ತ ಸಂತರ ವಿಗ್ರಹಗಳನ್ನು ಆರಾಧಿಸುವುದಿಲ್ಲ. ಕೇವಲ ಶಿಲುಬೆಯನ್ನು ಮಾತ್ರ ಆರಾಧಿಸುತ್ತಾರೆ. ಇವರು ಐದು ಸಂಸ್ಕಾರಗಳನ್ನು ಮಾತ್ರ ಒಪ್ಪಿದ್ದಾರೆ.[೯]

### ೨. ರೋಮನ್ ಕ್ಯಾಥೋಲಿಕ್

ಇವರು ಇಟಲಿ ದೇಶದ ರೋಮನ್ ವ್ಯಾಟಿಕನ್ ನಗರದಲ್ಲಿರುವ ಪೋಪ್‌ನ ಸರ್ವಾಧಿಕಾರದ ಅಡಿಯಲ್ಲಿರುತ್ತಾರೆ. ಇವರು ಕ್ರೈಸ್ತನ ಮೂರ್ತಿ ಚಿತ್ರವನ್ನು ಬಳಸುತ್ತಾರೆ. ವರ್ಜಿನ್ ಮೇರಿಗೆ ಪ್ರಾಧ್ಯಾನತೆಯಿದೆ. ಇವರು ಈ ಮೇಲೆ ಹೇಳಿದ ಎಲ್ಲ ಏಳು ಸಂಸ್ಕಾರಗಳನ್ನು ಸ್ವೀಕರಿಸಿದ್ದಾರೆ. ಪ್ರಪಂಚದಲ್ಲಿ ಕ್ರೈಸ್ತ ಮತಸ್ಥರ ಸಂಖ್ಯೆ ಬಹಳ ಜಾಸ್ತಿ ಇದ್ದು ಪ್ರಥಮ ಸ್ಥಾನದಲ್ಲಿದೆ. ಯುರೋಪ್, ಉತ್ತರ ಅಮೇರಿಕಾ, ದಕ್ಷಿಣ ಅಮೇರಿಕಾ, ರಷ್ಯಾ, ದಕ್ಷಿಣ ಆಫ್ರಿಕ, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಫಿಲಿಫೈನ್ಸ್, ನ್ಯೂಗಿನಿ ಇತ್ಯಾದಿ ದೇಶಗಳಲ್ಲಿ ೯೦% ರಷ್ಟು ಕ್ರೈಸ್ತರು ಇದ್ದಾರೆ. ಇವರಲ್ಲಿ ರೋಮನ್ ಕ್ಯಾಥೋಲಿಕರು ಹೆಚ್ಚಿನ ಸಂಖ್ಯೆಯಲ್ಲಿ ಇರುವರು.[೧೦]

### ೩. ಪ್ರೋಟೆಸ್ಟೆಂಟ್ ಚರ್ಚ

ಜರ್ಮನಿಯ ಮಾರ್ಟಿನ್ ಲೂಥರ್(ಕ್ರಿ.ಶ.೧೪೪೩–೧೫೪೬) ಪ್ರೋಟೆಸ್ಟೆಂಟ್ ಚರ್ಚ ಸ್ಥಾಪಕ. ಇವರಿಗೆ ಬೈಬಲ್ ಅತಿ ಮುಖ್ಯ. ಬೈಬಲ್‌ಗೆ ಸ್ವಲ್ಪ ವ್ಯತ್ಯಾಸವಿದ್ದರೂ ಇವರು ಸ್ವೀಕರಿಸುವುದಿಲ್ಲ. ಇವರು ಕೇವಲ ದೀಕ್ಷಾ ಸ್ನಾನ ಮತ್ತು ಪ್ರಭು ಭೋಜನಗಳೆಂಬ ಎರಡು ಸಂಸ್ಕಾರಗಳನ್ನು ಮಾತ್ರ ಸ್ವೀಕರಿಸುತ್ತಾರೆ. ಇವರ ಗುರುಗಳು(ಫಾದರ್) ಮದುವೆಯಾಗಿ ಸಂಸಾರ ನಡೆಸಬಹುದು.[೧೧]

ಈ ರೀತಿಯಾಗಿ ಕ್ರೈಸ್ತ ಧರ್ಮದ ಕುರಿತು ಸಂಕ್ಷಿಪ್ತವಾಗಿ ವಿವರಿಸಲಾಗಿದ್ದು, ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನಲ್ಲಿರುವ ಮುಷ್ಠಿಗೇರಿ ಗ್ರಾಮದಲ್ಲಿ ಕ್ರಿಸ್‌ಮಸ್ ವೈಶಿಷ್ಟತೆ ಕುರಿತು ಈ ಕೆಳಗಿನಂತೆ ಚರ್ಚಿಸಲಾಗಿದೆ. ಅದರಂತೆ ಬಾಗಲಕೋಟೆ ಜಿಲ್ಲೆಯ ಚರ್ಚಗಳ ಕುರಿತು ಕ್ಷೇತ್ರಕಾರ್ಯಧಾರಿತವಾಗಿ ಸಂಗ್ರಹಿಸಿದ ಮಾಹಿತಿಯನ್ನು ವಿಶ್ಲೇಷಿಸಿ ದಾಖಲಿಸಿದೆ.

### ಬಾಗಲಕೋಟೆ ಜಿಲ್ಲೆಗೆ ಕ್ರೈಸ್ತ ಮತದ ಪ್ರಸಾರ

ಉತ್ತರ ಕರ್ನಾಟಕ ಭಾಗದಲ್ಲಿ ಕ್ರೈಸ್ತ ಧರ್ಮ ಪ್ರಸಾರಗೊಂಡಿದ್ದು, ವಿಜಯಪುರ ಆದಿಲ್ ಶಾಹಿಗಳ ಆಡಳಿತದ ಅವಧಿಯಲ್ಲಿ, ಅಂದರೆ ಕ್ರಿ.ಶ.೧೫೬೧ರಲ್ಲಿ ಮತ್ತು ಕ್ರಿ.ಶ.೧೬೨೩ರಲ್ಲಿ ಜೆಸುಯಟ್ ಗುರುಗಳು ವಿಜಯಪುರದ ಆದಿಲ್‌ಶಾಹರನ್ನು ಭೇಟಿಯಾಗಿದ್ದರು. ಕ್ರೈಸ್ತ ಧರ್ಮ ಪ್ರಚಾರ ಮತ್ತು ಚರ್ಚಗಳನ್ನು ಕಟ್ಟುವುದಕ್ಕೂ ಅನುಮತಿಯನ್ನು ಪಡೆದಿದ್ದರು. ಕ್ರಿ.ಶ.೧೬೭೩ರಲ್ಲಿ

ಪೋಪ್ ಜಗದ್ಗುರುಗಳು. ಕ್ರೈಸ್ತನಾಗಿದ್ದ ಒಬ್ಬ ಬ್ರಾಹ್ಮಣ ಕಾಸ್ಟ್ರೋ(Bishop Mathew Castro) ಎಂಬಾತನನ್ನು Vicor Apostle of Bijapur ಆಗಿ ನೇಮಿಸಿದ್ದರು. ಈತ ಕೆಲವು ಸ್ಥಳಗಳಲ್ಲಿ ಚರ್ಚಗಳನ್ನು ನಿರ್ಮಿಸಿ ೩೦ರಿಂದ ೩೫ ಜನ ದೇಶಿಯ ಕ್ರೈಸ್ತ ಯುವಕರನ್ನು ಯಾಜಕರನ್ನಾಗಿಸಿದರು.[೧೨] ಈ ಸಮಯದಲ್ಲಿ ಬಾಗಲಕೋಟೆ ಪ್ರದೇಶಗಳಲ್ಲಿ ಯಾವುದೇ ಚರ್ಚಗಳು ನಿರ್ಮಾಣದ ಉಲ್ಲೇಖಗಳಿಲ್ಲ. ಬ್ರಿಟಿಷ್ ಆಡಳಿತದ ಪ್ರಭಾವ ಥಾಮಸ್ ಮನ್ರೋನ ನೇತೃತ್ವದಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಆರಂಭವಾಯಿತೆಂದು ಚರಿತ್ರೆಯಲ್ಲಿ ದಾಖಲಾಗಿದೆ.

ಕ್ರಿ.ಶ.೧೮೧೮ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ, ಥಾಮಸ್ ಮನ್ರೋ ಬೃಹತ್ತಾದ ಸೈನ್ಯದೊಂದಿಗೆ ಬಾದಾಮಿಗೆ ಮುತ್ತಿಗೆ ಹಾಕಿ ಬಾದಾಮಿ, ಗುಳೇದಗುಡ್ಡ, ಆಡಗಲ, ಕಟಗಿನಹಳ್ಳಿ, ಮುಷ್ಠಿಗೇರಿ, ಹವೇಲಿ, ಬಾಗಲಕೋಟ, ಕಲಾದಗಿ ಇತ್ಯಾದಿ ಸ್ಥಳಗಳನ್ನು ವಶಪಡಿಸಿಕೊಂಡನು. ಕ್ರೈಸ್ತ ಮಿಶನರಿಯಾಗಿದ್ದ ರೆವರೆಂಡ್ ಜಿ.ಕೀಜ ಅವರು ೧೮೪೫, ಜುಲೈ ೨೨ ರಿಂದ ಆಗಸ್ಟ್ ೯ರ ವರೆಗೆ ಗುಳೇದಗುಡ್ಡದಲ್ಲಿ ಇದ್ದು ಬೈಬಲ್ಲಿನ ಮಥಾಯನ್ ಸುವಾತ್ತೆ ಭಾಗದಿಂದ ಕ್ರೈಸ್ತಮತದ ಬೋಧನೆ ಮಾಡಿದನು. ಕೆಲವು ವರ್ಷಗಳ ನಂತರದಲ್ಲಿ ಜರ್ಮನಿಯ ರೆವರೆಂಡ್ ಗ್ರೂಸ್‌ಮನ್ ಕ್ರಿ.ಶ.೧೮೭೭ರಲ್ಲಿ ಮುಷ್ಠಿಗೇರಿ ಗ್ರಾಮಕ್ಕೆ ಬಂದು ಕ್ರೈಸ್ತಧರ್ಮ ಪ್ರಚಾರ ಮಾಡಿದನು.[೧೩] ಈ ಸಂದರ್ಭದಲ್ಲಿ ಗ್ರಾಮದ ಅನೇಕ ಜನರು ಯೇಸುಕ್ರಿಸ್ತನನ್ನು ನಂಬಿ ಕ್ರೈಸ್ತಮತದ ಅನುಯಾಯಿ ಗಳಾದರು. ಬಳಿಕ ೧೮೭೮ರಲ್ಲಿ ಮುಷ್ಠಿಗೇರಿ ಗ್ರಾಮದಲ್ಲಿ ಗ್ರೂಪ್‌ಮನ್ ಸ್ಮಾರಕ ಚರ್ಚ (ದೇವಾಲಯ) ಪ್ರಾರಂಭಗೊಂಡಿತು.

## ೪.೧. ಧಾರ್ಮಿಕ ವಾಸ್ತುಶಿಲ್ಪ ಹಾಗೂ ಕಟ್ಟಡಗಳು

### ಗ್ರೋಸ್‌ಮನ್ ಸ್ಮಾರಕ ಚರ್ಚ(ದೇವಾಲಯ) ಮುಷ್ಠೀಗೇರಿ

ಕ್ರೈಸ್ತ ಮಿಶನರಿಯಾಗಿದ್ದ ರೆವರೆಂಡ್ ಜಿ.ಕೀಜ ಅವರು ೧೮೪೫ ಜುಲೈ ೨೨ ರಿಂದ ಆಗಸ್ಟ್ ೯ರ ವರೆಗೆ ಗುಳೇದಗುಡ್ಡದಲ್ಲಿ ಇದ್ದು ಬೈಬಲ್ಲಿನ ಮಥಾಯನ್ ಸುವಾತ್ತೆ ಭಾಗದಿಂದ ಕ್ರೈಸ್ತ ಮತದ ಬೋಧನೆಯನ್ನು ಮಾಡಿದರು. ಕೆಲವು ವರ್ಷಗಳ ನಂತರದಲ್ಲಿ ಜರ್ಮನಿಯ ರೆವರೆಂಡ್ ಗ್ರೋಸ್‌ಮನ್ ಕ್ರಿ.ಶ.೧೮೭೭ರಲ್ಲಿ ಮುಷ್ಠಿಗೇರಿ ಗ್ರಾಮಕ್ಕೆ ಬಂದು ಕ್ರೈಸ್ತಧರ್ಮ ಪ್ರಚಾರ ಮಾಡಿದನು.[೧೪] ಈ ಸಂದರ್ಭದಲ್ಲಿ ಗ್ರಾಮದ ಅನೇಕ ಜನರು ಯೇಸುಕ್ರಿಸ್ತನನ್ನು ನಂಬಿ ಕ್ರೈಸ್ತಮತದ ಅನುಯಾಯಿಗಳಾದರು. ಬಳಿಕ ೧೮೭೮ರಲ್ಲಿ ಮುಷ್ಠೀಗೇರಿಯಲ್ಲಿ ಗ್ರೋಸ್‌ಮನ್ ಸ್ಮಾರಕ ಚರ್ಚ(ದೇವಾಲಯ) ಪ್ರಾರಂಭಗೊಂಂಡಿತು. ಈ ಚರ್ಚ ದಕ್ಷಿಣ ಭಾರತ ಸಭೆ(ಸಿ.ಎಸ್.ಐ) ಕರ್ನಾಟಕ ಉತ್ತರ ಸಭಾ ಪ್ರಾಂತ್ಯ(ಕೆ.ಎನ್.ಡಿ)ದ ಅಧೀನದಲ್ಲಿ ಇಂದಿಗೂ ಕಾರ್ಯನಿರ್ವಹಿಸುತ್ತದೆ. ಕ್ರಿ.ಶ.೧೮೮೮ರಲ್ಲಿ ಮುಷ್ಠೀಗೇರಿ ಗ್ರಾಮದಲ್ಲಿ ಪ್ರಥಮಶಾಲೆ

ಪ್ರಾರಂಭವಾಗಿ ಇದರಿಂದ ಅನೇಕ ಬಡ ಮಕ್ಕಳಿಗೆ ಶಿಕ್ಷಣ ದೊರೆಯುವಂತಾಯಿತು. ೧೮೮೮ರಲ್ಲಿ ಶ್ರು ಸುಭದ್ರಪ್ಪ ಖಾನಾಪೂರ ಇವರು ಶಾಲೆಯ ಮೇಲ್ವಿಚಾರಕರಾಗಿ ಸೇವೆಯನ್ನು ಮಾಡುತ್ತಿದ್ದರು. ಇಂದು ೨೦೦ಕ್ಕೂ ಅಧಿಕ ಕ್ರೈಸ್ತ ಸಮುದಾಯದ ಕುಟುಂಬಗಳು ಮುಷ್ಠಿಗೇರಿ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ.

ಬಾದಾಮಿಯಿಂದ ಕಬ್ಬಲಗೇರಿ ಮಾರ್ಗವಾಗಿ ಕೆರೂರಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಬಾದಾಮಿಯಿಂದ ೧೫ ಕಿ.ಮೀ. ಅಂತರದಲ್ಲಿ ಮುಷ್ಠಿಗೇರಿ ಗ್ರಾಮವಿದೆ. ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಕ್ರೈಸ್ತರು ಪ್ರತಿ ವರ್ಷ ಕ್ರಿಸ್‌ಮಸ್ ಹಬ್ಬವನ್ನು ವೈಶಿಷ್ಟ್ಯ ಪೂರ್ಣವಾಗಿ ಆಚರಿಸುತ್ತಾ ಬಂದಿರುವರು. ಕರ್ನಾಟಕದ ಬಹುತೇಕ ಭಾಗಗಳಲ್ಲಿ ಕ್ರಿಸ್‌ಮಸ್ ಹಿಂದಿನ ದಿನ ಅಂದರೆ, ಡಿಸೆಂಬರ್ ೨೪ ರಂದು 'ಮಕ್ಕಳ ಕ್ರಿಸ್‌ಮಸ್' ಎಂದು ಸಾಮಾನ್ಯವಾಗಿ ಎಲ್ಲಾ ಪ್ರೋಟೆಸ್ಟೆಂಟ್ ಚರ್ಚಗಳಲ್ಲಿ ಆಚರಿಸಲಾಗುತ್ತದೆ. ಆ ದಿನ ಮಕ್ಕಳು ನೃತ್ಯ, ನಾಟಕ, ಸಂಗೀತದ ಮೂಲಕ ಕ್ರಿಸ್ತನ ಜನನದ ಶುಭವಾರ್ತೆ ತಿಳಿಸುತ್ತಾರೆ. ಕ್ರಿಸ್‌ಮಸ್ ಟ್ರೀ, ಯೇಸು ಜನಿಸಿದ ಕ್ರಿಬ್(ಗೋದಲಿ) ಪ್ರತಿಕೃತಿಗಳು ಚರ್ಚನ ಹೊರಗೆ ಮತ್ತು ಒಳಾಂಗಣದ ಭಾಗದಲ್ಲಿ ವಿವಿಧ ಬಣ್ಣದ ದ್ವೀಪದ ಬೆಳಕಿನಲ್ಲಿ ಹೊಳೆಯುವಂತೆ ಅಲಂಕರಿಸುತ್ತಾರೆ. ಡಿಸೆಂಬರ್ ೨೪ರ ರಾತ್ರಿ ಚರ್ಚಗಳಲ್ಲಿ ಎಲ್ಲರೂ ಸೇರಿ ಕ್ಯಾರಲ್(ಕರೋಲ್) ಪ್ರಸ್ತುತಪಡಿಸುತ್ತಾರೆ. ಕರೋಲ್ ಎಂದರೆ ಒಂದು ಧಾರ್ಮಿಕ ಪದ್ಯ, ಕ್ರಿಸ್‌ಮಸ್ ಅಥವಾ ಈಸ್ಟರ್ ಹಬ್ಬದ ಕಥೆಗಳನ್ನು ವಿವರಿಸುತ್ತಾ ಕೇಳುಗರನ್ನು ಹರ್ಷ ಸನ್ನಿವೇಶದಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುವುದಾಗಿದೆ.[೧೫] ಮಧ್ಯರಾತ್ರಿ ೧೨ ರಿಂದ ೧:೪೫ ಘಂಟೆಯವರೆಗೆ ಬಲಿಪೂಜೆಯಲ್ಲಿ ಭಾಗವಹಿಸಿ ಸಾಮಾಜಿಕ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಸಾಂಟಾಕ್ಲಾಸ್ ಜೊತೆಗೆ ಹಾಡಿ ಕುಣಿದು, ಬಂಧು ಬಳಗದವರೊಂದಿಗೆ ಶುಭಾಶಯ ಕೋರುತ್ತಾರೆ.

ಮುಷ್ಠಿಗೇರಿ ಚರ್ಚನಲ್ಲಿ ಕ್ರೈಸ್ತರೂ, ಹಿಂದೂ ಮತ್ತು ಮುಸ್ಲಿಂರೊಡಗೂಡಿ ಕ್ರಿಸ್‌ಮಸ್ ಹಬ್ಬವನ್ನು ಅರ್ಥಪೂರ್ಣವಾಗಿ ಆಚರಿಸುವುದು ವಿಶೇಷವಾಗಿದೆ. ಹಿಂದೂಗಳು ತಮ್ಮ ಭಕ್ತಿಯಂತೆ ಎಣ್ಣೆಯನ್ನು ತಂದು ಚರ್ಚಿನ ಆವರಣದಲ್ಲಿ ದೀಪಗಳನ್ನು ಬೆಳಗಿಸುತ್ತಾರೆ. ಮುಸ್ಲಿಂರು ಪರಿಮಳ ಸೂಸುವ ಅಗರಬತ್ತಿಗಳನ್ನು ತಂದು ಚರ್ಚಿನ ಬಾಗಿಲಿನ ಬಳಿಯಲ್ಲಿ ಹಚ್ಚುತ್ತಾರೆ. ಕ್ರಿಸ್‌ಮಸ್ ಅಂಗವಾಗಿ ಪ್ರತಿ ವರ್ಷ ಸಾಮೂಹಿಕ ಅನ್ನ ಸಂತರ್ಪಣೆ ಕಾರ್ಯಕ್ರಮ ನಡೆಸಿಕೊಂಡು ಬರಲಾಗುತ್ತಿದೆ. ಇದೆ ಊರಿನ ಜನರು, ಜಾತಿ, ಮತ ಬೇಧವಿಲ್ಲದೆ ಚರ್ಚನೊಂದಿಗೆ ಅನ್ಯೋನ್ಯ ಸಂಬಂಧ ಉಳಿಸಿಕೊಂಡಿದ್ದಾರೆ. ಈ ಚರ್ಚಿನ ಇನ್ನೊಂದು ವಿಶೇಷವೆಂದರೆ ದಿನದ ೨೪ ಗಂಟೆಗಳೂ ಚರ್ಚಿನ ಬಾಗಿಲು ತೆರೆದಿರುತ್ತದೆ.

## ಕಬ್ಬಿನ ಕ್ರಿಸ್‌ಮಸ್

ಮುಷ್ಠಿಗೇರಿಯಲ್ಲಿ ಪ್ರತಿವರ್ಷ 'ಕಬ್ಬಿನ ಕ್ರಿಸ್‌ಮಸ್' ಆಚರಿಸುವುದು ವಿಶೇಷ. ಉತ್ತರ ಕರ್ನಾಟಕದ ಬಹುತೇಕ ಭಾಗಗಳಲ್ಲಿ ಕ್ರಿಸ್‌ಮಸ್ ಹಿಂದಿನ ದಿನ ಅಂದರೆ ಡಿಸೆಂಬರ್ ೨೪ ರಂದು 'ಮಕ್ಕಳ ಕ್ರಿಸ್‌ಮಸ್' ಎಂದು ಸಾಮಾನ್ಯವಾಗಿ ಎಲ್ಲಾ ಪ್ರೋಟೆಸ್ಟೆಂಟ್ ಚರ್ಚಗಳಲ್ಲಿ ಆಚರಿಸಲಾಗುತ್ತದೆ. ಮುಷ್ಠಿಗೇರಿಯಲ್ಲಿ 'ಮಕ್ಕಳ ಕ್ರಿಸ್‌ಮಸ್' ಜೊತೆಗೆ 'ಕಬ್ಬಿನ ಕ್ರಿಸ್‌ಮಸ್' ಅಥವಾ 'ಕಬ್ಬಿನ ಹಬ್ಬ' ಎಂದು ಆಚರಿಸುತ್ತಾರೆ.

ಡಿಸೆಂಬರ್ ೨೪ರ ದಿನದಂದು ಗ್ರಾಮದ ಎಲ್ಲಾ ವರ್ಗದ ಜನರು ಸೇರಿ ತಮ್ಮ ಎತ್ತಿನ ಬಂಡಿಗಳನ್ನು ಶೃಂಗರಿಸಿಕೊಂಡು ಚರ್ಚಿನ ಮುಂಭಾಗದಲ್ಲಿ ಬಂದು ಸೇರುತ್ತಾರೆ. ೧೦ ಘಂಟೆಗೆ ಚರ್ಚನ ಪಾದ್ರಿ ಅಥವಾ ಫಾದರ್ ಬಂದು ಪ್ರಾರ್ಥನೆ ಮಾಡಿ, ಎಲ್ಲರನ್ನೂ ದೇವರ ಹೆಸರಿನಲ್ಲಿ ಹರಸುತ್ತಾರೆ. ನಂತರ ಎತ್ತಿನ ಬಂಡಿಗಳ ಮೂಲಕ ಸಮೀಪದ ನೀಲಗುಂದ ಗ್ರಾಮಕ್ಕೆ ಹೋಗಿ ಅಲ್ಲಿ ಈ ಮೊದಲೇ ಗೊತ್ತುಪಡಿಸಿದ ಒಂದು ಕಬ್ಬಿನ ಹೊಲದಲ್ಲಿ ತಮ್ಮ ಶಕ್ತಿಗನುಸಾರವಾಗಿ ಕಬ್ಬನ್ನು ಖರೀದಿಸಿ, ಬಂಡಿ(ಎತ್ತಿನ ತಕ್ಕಡಿ)ಯಲ್ಲಿ ಹೇರಿಕೊಂಡು ತಾ ಮೊದಲು ಎಂಬಂತೆ ಸ್ಪರ್ಧಿಸುತ್ತಾ ಎತ್ತು ಬಂಡಿಯನ್ನು ಓಡಿಸಿಕೊಂಡು ಬರುತ್ತಾರೆ. ಎತ್ತಿನ ಬಂಡಿಗಳು ಮುಷ್ಠಿಗೇರಿ ಗ್ರಾಮ ಪ್ರವೇಶಿಸುವಾಗ ಕ್ರೈಸ್ತರು ಸಂಗೀತ ಹಾಡುತ್ತಾ ಊರೊಳಗೆ ಮೆರವಣಿಗೆ ಮೂಲಕ ಎತ್ತಿನ ಬಂಡಿಗಳನ್ನು ಕರೆ ತರುತ್ತಾರೆ. ಪ್ರತಿ ಎತ್ತಿನ ಬಂಡಿಯವರು ತಾವು ಹರಕೆ ಹೇಳಿಕೊಂಡ (ಬೇಡಿಕೊಂಡ)ಷ್ಟು ಕಬ್ಬನ್ನು ಚರ್ಚಗೆ ಕಾಣಿಕೆಯಾಗಿ ನೀಡಿ, ನಂತರ ಉಳಿದಿರುವಂತಹ ಕಬ್ಬನ್ನು ತಮ್ಮ ಮನೆಗಳಿಗೆ ಕೊಂಡೊಯ್ಯುತ್ತಾರೆ. ಇದನ್ನೇ ಕಬ್ಬಿನ ಕ್ರಿಸ್‌ಮಸ್ ಅಥವಾ ಕಬ್ಬಿನ ಹಬ್ಬ ಎಂದು ಕರೆಯುತ್ತಾರೆ. ಚರ್ಚನಲ್ಲಿ ಸಂಗ್ರಹಣೆಗೊಂಡ ಕಬ್ಬನು ಡಿಸೆಂಬರ್ ೨೫ ರಂದು ಮನೆಮನೆಗೆ ಹಂಚಿ ಎಲ್ಲರಿಗೂ ಯೇಸು ಒಳ್ಳೆಯದನ್ನು ಮಾಡಲಿ ಎಂದು ಪಾದ್ರಿಯವರು ಪ್ರಾರ್ಥಿಸುತ್ತಾರೆ. ಕಳೆದ ಮೂರ್‍ನಾಲ್ಕು ವರ್ಷಗಳ ಹಿಂದೆ ನೀಲಗುಂದದಿಂದ ಎತ್ತಿನ ಬಂಡಿಯಲ್ಲಿ ಕಬ್ಬನ್ನು ತರುತ್ತಿರುವಾಗ ವ್ಯಕ್ತಿಯೊಬ್ಬ ಬಂಡಿಯಿಂದ ಕೆಳಗೆ ಬಿದ್ದು ಮೃತಪಟ್ಟ ಪರಿಣಾಮವಾಗಿ ಕಬ್ಬಿನ ಹಬ್ಬ ತನ್ನ ಮೊದಲಿನ ಸಂಭ್ರಮವನ್ನು ಉಳಿಸಿಕೊಂಡಿಲ್ಲ. ಆದರೂ ಸಹ ಕಬ್ಬಿನ ಕ್ರಿಸ್‌ಮಸ್ ಇಂದಿಗೂ ಮುಷ್ಠಿಗೇರಿಯಲ್ಲಿ ವ್ಯವಸ್ಥಿತವಾಗಿ ವಿಜೃಂಭಣೆಯಿಂದ ಹಿಂದೂ, ಮುಸ್ಲಿಂ, ಕ್ರೈಸ್ತರೆಲ್ಲರೂ ಸೇರಿ ಆಚರಿಸುತ್ತಿರುವುದು ವಿಶೇಷವಾಗಿದೆ. ಮುಷ್ಠಿಗೇರಿ ಗ್ರಾಮದಲ್ಲಿ ಹೆಚ್ಚಾಗಿ ಕುರುಬ ನಾಯಕ(ವಾಲ್ಮೀಕಿ) ಸಮುದಾಯ ದವರು ಕ್ರೈಸ್ತ ಮತದ ಅನುಯಾಯಿಗಳಾಗಿದ್ದಾರೆ. ಇತ್ತೀಚೆಗೆ ಮಾದಿಗ ಸಮುದಾಯದ ಕೆಲವೇ ಕೆಲವು ಮನೆತನದವರು ಕ್ರೈಸ್ತ ಅನುಯಾಯಿಗಳಾಗಿದ್ದಾರೆ.

## ಪುನರುತ್ಥಾನದ ಆಚರಣೆ

'ಜೀಸಸ್ ಲೋಕ ರಕ್ಷಕ, ಅವನ ಪುನರ್ ಜನ್ಮ ನಿಶ್ಚಿತ' ಎನ್ನುವುದು ಬಲವಾದ ನಂಬಿಕೆ, ಕಾಲದ ಅಂತ್ಯ ಎನ್ನುವುದು ಜೀಸಸ್‌ನ ಪುನರುತ್ಥಾನದಿಂದ ಎಂದು ಕ್ರೈಸ್ತರು ನಂಬಿದ್ದಾರೆ.[೧೬] ಉತ್ತರ ಕರ್ನಾಟಕ ಸಭಾ ಪ್ರಾಂತ್ಯದಲ್ಲಿರುವ ಸಿ.ಎಸ್.ಐ. ಗ್ರೋಸ್‌ಮನ್ ಚರ್ಚ ಮುಷ್ಠಿಗೇರಿಯಲ್ಲಿ ಪುನರುತ್ಥಾನ ಹಬ್ಬದ ಆಚರಣೆಯಲ್ಲಿ ಪ್ರತಿವರ್ಷ ಚಾಚು ತಪ್ಪದೇ ನೇರವೇರುತ್ತಿದೆ. ಪುನರುತ್ಥಾನ ಹಬ್ಬದ ದಿನದಿಂದು ಬೆಳಿಗ್ಗೆ ೫ ಗಂಟೆಗೆ ಆರಾಧನೆ ಪ್ರಾರಂಭವಾಗುತ್ತದೆ. ಆರಾಧನೆಯ ತರುವಾಯ ಚರ್ಚಿನವರೆಲ್ಲರೂ ಸೇರಿ ಭಜನೆಯನ್ನು ಮಾಡುತ್ತಾ ಸಮಾಧಿಗಳಿಗೆ ಹೋಗುತ್ತಾರೆ. ಅಲ್ಲಿ ಹಿಂದಿನ ದಿನವೇ ತಮ್ಮ ಹಿರಿಯ ಬಂಧುಗಳು ಸಮಾಧಿಯ ಸುತ್ತಮುತ್ತಲಿನ ಭಾಗವನ್ನು ಸ್ವಚ್ಛಗೊಳಿಸಿ ಬಂದಿರುತ್ತಾರೆ. ಎಲ್ಲರೂ ತಮ್ಮ ಬಂಧುಗಳ ಸಮಾಧಿ ಹತ್ತಿರ ಹೋಗಿ ಪುಷ್ಪ ನಮನ ಸಲ್ಲಿಸುತ್ತಾರೆ. ನಂತರ ಸಭಾಪಾಲಕರು ಆರಾಧನೆ ನಡೆಸುತ್ತಾರೆ. ಆರಾಧನೆಯ ಬಳಿಕ ಎಲ್ಲರೂ ಭಜನೆ ಮಾಡುತ್ತಾ ಚರ್ಚಗೆ ಮರಳುತ್ತಾರೆ. ಮತ್ತೇ ಚರ್ಚನಲ್ಲಿ ಸಭಾಪಾಲಕರು ಪ್ರಾರ್ಥನೆಯನ್ನು ಮಾಡಿದ ನಂತರ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಾರೆ. ಈ ಆಚರಣೆ ಯೇಸುವಿನ ಪವಿತ್ರ ಆತ್ಮ ಮತ್ತೇ ಪುನರ್ಜನ್ಮ ತಾಳುತ್ತದೆ[೧೭] ಎಂಬ ನಂಬಿಕೆಯಿಂದ ಆಚರಿಸುತ್ತಾರೆ.

## ಪ್ರಾಚೀನ ಬೈಬಲ್

ನವಲಗುಂದದ ನಾಗಲಿಂಗ ಸ್ವಾಮಿಗಳು ಒಮ್ಮೆ ಮುಷ್ಠಿಗೇರಿ ಗ್ರಾಮಕ್ಕೆ ಬಂದಾಗ ಚರ್ಚನಲ್ಲಿದ್ದ ಪುರಾತನ ಬೈಬಲ್‌ಗೆ ಅವರಿಂದ ಸಣ್ಣದೊಂದು ಅಪಚಾರವಾಗುತ್ತದೆ. ಬಳಿಕ ನಾಗಲಿಂಗ ಸ್ವಾಮಿಗಳು ಈ ಬೈಬಲ್‌ನ್ನು ತಮ್ಮೊಂದಿಗೆ ಕೊಂಡೊಯ್ದು ನವಲಗುಂದದ ನಾಗಲಿಂಗ ದೇವಸ್ಥಾನದಲ್ಲಿ ಇಟ್ಟುಕೊಂಡರು ಎಂಬ ಪ್ರತೀತಿ ಇದೆ. ಕ್ರಿ.ಶ.೧೬೦೩ರಲ್ಲಿ ಮುದ್ರಣಗೊಂಡಿರುವ ಈ ಬೈಬಲ್ ಇಂದು ನಾಗಲಿಂಗ ದೇವಸ್ಥಾನದಲ್ಲಿದೆ. ನವಲಗುಂದ ನಾಗಲಿಂಗ ದೇವಸ್ಥಾನಕ್ಕೆ ಭೇಟಿ ನೀಡಿರುವ ಮಾಜಿ ಪ್ರಧಾನಿಗಳಾದ ಜವಾಹರಲಾಲ್ ನೆಹರೂ, ಇಂದಿರಾಗಾಂಧಿ ಹಾಗೂ ಮೈಸೂರು ಮಹಾರಾಜ ಜಯಚಾಮರಾಜ ಒಡೆಯರು, ಮಾಜಿ ಮುಖ್ಯಮಂತ್ರಿ ಡಿ.ದೇವರಾಜ ಅರಸು ಹಾಗೂ ಮತ್ತಿತರ ಗಣ್ಯರ ಸಹ ಹಸ್ತಾಕ್ಷರಗಳನ್ನು ಈ ಬೈಬಲ್ ಕೃತಿಯ ಮೇಲೆ ಇಂದಿಗೂ ಸಹ ಕಾಣಬಹುದು.

## ಶಬ್ಬತ್ ಶಾಲೆ

ಶಬ್ಬತ್ ಅಥವಾ ಸಬ್ಬತ್ ಎಂದರೆ ವಿಶ್ರಾಂತಿಯ ದಿನ, ಸಾರ್ವತ್ರಿಕ ರಜಾ ದಿವಸವಾಗಿದೆ. ಯಹೂದ್ಯರ ಸಂಪ್ರದಾಯದ ಪ್ರಕಾರ ವಾರದ ಏಳನೆಯ ದಿನ ದೇವರ ದಿನ, ಅದು ಪವಿತ್ರ

ದಿನ, ಅಂದು ಎಲ್ಲ ಕೆಲಸಕಾರ್ಯಗಳನ್ನು ನಿಷೇಧಿಸಲಾಗಿತ್ತು. ಶುಕ್ರವಾರ ಸಂಜೆ ಪ್ರಾರಂಭವಾಗಿ ಶನಿವಾರ ಸಂಜೆಗೆ ಸಬ್ಬತ್ ದಿನ ಅಂತ್ಯಗೊಳ್ಳುತ್ತಿತ್ತು.[೧೮] ಆದರೆ ಇದು ಕಾಲಾನುಕ್ರಮದಲ್ಲಿ ಕ್ರೈಸ್ತರು ಅಗತ್ಯಕ್ಕೆ ತಕ್ಕಂತೆ ಬದಲಾವಣೆ ಮಾಡಿಕೊಂಡು ಭಾನುವಾರ ಸಬ್ಬತ್ ದಿನವಾಗಿಸಿ ಕೊಂಡರು. ಯೇಸುಸ್ವಾಮಿ ಪುನರುತ್ಥಾನದ ದಿನವನ್ನು ಅದರ ಸ್ಮರಣಾರ್ಥ ಭಕ್ತರು ಸೇರಿ ಪ್ರಾರ್ಥನೆ ಮಾಡುವ ಭಾನುವಾರ ದಿನವನ್ನು ಪ್ರಭುವಿನ ದಿನ ಎಂದು ಕರೆದರು.[೧೯] ಮುಷ್ಠಿಗೇರಿ ಗ್ರಾಮದಲ್ಲಿ ಚರ್ಚನ ಆರಂಭದ ದಿನಗಳಲ್ಲಿ ಶಬ್ಬತ್ ಶಾಲೆಯನ್ನು ಕ್ರಿ.ಶ.೧೮೮೮ರಲ್ಲಿ ಪ್ರಾರಂಭಿಸಲಾಯಿತು. ನಂತರ ಸರಕಾರವೇ ಈ ಶಾಲೆಯನ್ನು ಮುನ್ನೆಡೆಸಿಕೊಂಡು ಬರುತ್ತಿದೆ. ಇಂದಿಗೂ ಚರ್ಚನಲ್ಲಿ ಪ್ರತಿ ಭಾನುವಾರ 'ಶಬ್ಬತ್ ಶಾಲೆ' ನಡೆಸಿಕೊಂಡು ಬರಲಾಗುತ್ತಿದೆ. ಮಕ್ಕಳಿಗೆ ಬೈಬಲ್‌ನಲ್ಲಿ ಬರುವ ಕಥೆಗಳನ್ನು ಹೇಳಿಕೊಡಲಾಗುತ್ತಿದೆ. 'ಶಬ್ಬತ್ ಶಾಲೆಗೆ' ಸುಮಾರು ಒಂದು ನೂರಕ್ಕೂ ಹೆಚ್ಚು ಮಕ್ಕಳು ಪ್ರತಿ ಭಾನುವಾರ ಚರ್ಚನಲ್ಲಿ ಒಂದು ಸೇರುತ್ತಾರೆ.

**ಸಂತ ಪೌಲನ ಚರ್ಚ(ದೇವಾಲಯ) ಬಾಗಲಕೋಟೆ**

ಬಾಗಲಕೋಟೆ ಮಧ್ಯಭಾಗದಲ್ಲಿ ಸಂತಪೌಲನ ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. REV. L.BIERರ ನೇತೃತ್ವದಲ್ಲಿ ೨೯-೧೧-೧೯೬೬ರಂದು ಈ ಚರ್ಚ ಸ್ಥಾಪಿಸಲಾಗಿದೆ ಎಂಬ ಫಲಕ ಚರ್ಚನ ಮೇಲ್ಭಾಗದಲ್ಲಿದೆ. ಈ ಚರ್ಚನ ಮೂಲ ಕಟ್ಟಡವು ಜೀರ್ಣೋದ್ಧಾರ ಗೊಂಡು, ಮರು ಫಲಕವನ್ನು ಇಲ್ಲಿ ಹಾಕಿಸಲಾಗಿದೆ. ಬ್ರಿಟಿಷರ ಆಡಳಿತದಲ್ಲಿ ಹಳೆಯ ಚರ್ಚನ ಮೂಲ ಕಟ್ಟಡದಲ್ಲಿ ಹೊಸ ಚರ್ಚು ನಿರ್ಮಾಣಗೊಂಡಿದೆ. ತಾಲೂಕು ಕಾರ್ಯಾಲಯ, ತಹಶೀಲ್ದಾರ ಕಾರ್ಯಾಲಯ, ನಿರೀಕ್ಷಣಾ ಮಂದಿರ, ಆಸ್ಪತ್ರೆ, ಟೆನೆಸ್ ಕೋರ್ಟ್, ರೇಡಿಯೋ ಹೌಸ್ ಇತ್ಯಾದಿಗಳೆಲ್ಲವೂ ಬ್ರಿಟಿಷ್ ಅಧಿಕಾರಿಗಳಿಗೆ ಅನುಕೂಲಕ್ಕೋಸ್ಕರವಾಗಿ ಎಲ್ಲಾ ಸ್ಮಾರಕಗಳು ೧ ಕಿ.ಮೀ. ಅಂತರದಲ್ಲಿ ನಿರ್ಮಿಸಿದ್ದಾರೆ. ಸಂತಪೌಲನ ಚರ್ಚ ಗೋಥಿಕ್ ಶೈಲಿಯಿಂದ ಕೂಡಿದ್ದೆ. ಚರ್ಚ ಮುಂಭಾಗ ಮುಖ್ಯದ್ವಾರವಿದ್ದು, ಚರ್ಚ ಗೋಥಿಕ್ ಶೈಲಿಯಿಂದ ಕೂಡಿದೆ. ಚರ್ಚ ಮುಂಭಾಗ ಮುಖ್ಯದ್ವಾರವಿದ್ದು, ಚರ್ಚಸುತ್ತಲೂ ವ್ಯವಸ್ಥಿತವಾದ ಕಾಂಪೌಂಡ ನಿಂದ ಸಂರಕ್ಷಿಸಲಾಗಿದೆ. ಈ ಚರ್ಚನಲ್ಲಿ ಸುಮಾರು ೮೦ ರಿಂದ ೧೦೦ ಜನರು ಏಕಕಾಲದಲ್ಲಿ ಪ್ರಾರ್ಥನೆಯನ್ನು ಮಾಡಲು ಸ್ಥಳಾವಕಾಶವಿದೆ. ಮುಖ್ಯವಾಗಿ ಬಲಿಪೀಠ, ಪ್ರಾಂಗಣ, ಚರ್ಚಗೆ ವ್ಯವಸ್ಥಿತ ಗಾಳಿ, ಬೆಳಕು ಪ್ರವೇಶಿಸಲು ಕಿಟಕಿ, ಬಾಗಿಲು, ಮೇಲು ಹೊದಿಕೆಗೆ ಮಂಗಳೂರು ಹೆಂಚು, ಸ್ಥಳೀಯವಾಗಿ ದೊರೆಯುವ ಕೆಂಪು ಶಿಲೆ, ಗಾರೆಗಚ್ಚನ್ನು ಉಪಯೋಗಿಸಿ ವ್ಯವಸ್ಥಿತವಾಗಿ ಸಂತ ಪೌಲನ ಚರ್ಚನ್ನು ಬ್ರಿಟಿಷರು ಕಟ್ಟಿದ್ದಾರೆ. ಮುಖ್ಯದ್ವಾರದ ಮೇಲುಗಡೆ ದೊಡ್ಡವಾದ ಶಿಲುಬೆ. ಚರ್ಚನ ಆಕರ್ಷಣೆಯಾಗಿದೆ. ಚರ್ಚನ ಹಿಂಭಾಗದಲ್ಲಿ ಫಾಧರಗಳ ವಸತಿಗಳಿವೆ.

ಇಂದಿಗೂ ಚರ್ಚನಲ್ಲಿ ಪ್ರಾರ್ಥನೆ, ಕ್ರಿಸ್‌ಮಸ್, ನಿಶ್ಚಿತಾರ್ಥ, ಮದುವೆ, ಇತ್ಯಾದಿ, ಕ್ರಿಸ್ತಮತದ ಧಾರ್ಮಿಕ ಕಾರ್ಯಕ್ರಮಗಳು ಜರುತ್ತಿರುವುದು ವಿಶೇಷವಾಗಿದೆ. ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಚರ್ಚ ಇದಾಗಿದೆ. ಚರ್ಚನ ಸುತ್ತಲೂ ಹರಿಣಶಿಕಾರಿ ಸಮುದಾಯದವರು ಹೆಚ್ಚಾಗಿ ವಾಸಿಸುತ್ತಾರೆ. ಹಾಗಾಗಿ ತಳಸಮುದಾಯದವರು ಹೆಚ್ಚಾಗಿ ಕ್ರೈಸ್ತ ಮತದ ಅನುಯಾಯಿಗಳಾಗಿದ್ದಾರೆ. ಇದು ಸಿ.ಎಸ್.ಐ.ಪ್ರಾಂತ್ಯಕ್ಕೆ ಸೇರಿದ ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಚರ್ಚ ಇದಾಗಿದೆ.

### ಸೆಂಟ್ ಮೇರಿಸ್ ಚರ್ಚ ನವನಗರ

ಬಾಗಲಕೋಟೆ ನಗರಕ್ಕೆ ಹೊಂದಿಕೊಂಡಿರುವ ಘಟಪ್ರಭಾ ನದಿಯ ಬಲದಂಡೆಗೆ ಹೊಂದಿಕೊಂಡಿರುವ ಪ್ರದೇಶದಲ್ಲಿ ಸೆಂಟ್ ಮೇರಿಸ್ ಚರ್ಚನ್ನು ಕಟ್ಟಲಾಗಿತ್ತಂತೆ. ಆದರೆ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಆಲಮಟ್ಟಿಯಲ್ಲಿ ಅಣೆಕಟ್ಟು ನಿರ್ಮಾಣವಾದುದರಿಂದ ಬಾಗಲಕೋಟೆ ಅರ್ಧಕ್ಕೂ ಹೆಚ್ಚು ವ್ಯಾಪ್ತಿಯನ್ನು ಹೊಂದಿದ ಪ್ರದೇಶ ಮುಳುಗಡೆಯಾಯಿತು. ಆ ಸಮಯದಲ್ಲಿ ಈ ಚರ್ಚವು ಸಹ ಮುಳುಗಡೆಯಾಯಿತು. ಈ ಚರ್ಚನ ಅವಶೇಷಗಳು ದೊರೆಯುವುದು ತುಂಬಾ ವಿರಳ. ಮುಳುಗಡೆಯಾದ ಚರ್ಚಗಾಗಿ ನವನಗರದಲ್ಲಿ ನಿವೇಶನ ನೀಡಿದ ನಂತರ ಸೆಂಟ್ ಮೇರಿಸ್ ಚರ್ಚ ನವನಗರದಲ್ಲಿ ನಿರ್ಮಾಣಗೊಂಡಿದೆ. ಈ ಚರ್ಚ ಎತ್ತರದ ಜಗತಿಯ ಮೇಲೆ ಚತುಷ್ಕಾಕಾರದಲ್ಲಿ ಕಟ್ಟಿದ್ದಾರೆ. ಕೆಂಪು ಕಲ್ಲು, ಇಟ್ಟಿಗೆ, ಕಟ್ಟಿಗೆ, ಸಿಮೆಂಟ್ ಕಾಂಕ್ರೀಟ್ ಉಪಯೋಗಿಸಿಕೊಂಡು ಅತ್ಯಂತ ವ್ಯವಸ್ಥಿತವಾಗಿ ಚರ್ಚನ್ನು ನಿರ್ಮಿಸಿದ್ದಾರೆ. ಚರ್ಚನ ಮಧ್ಯಭಾಗದಲ್ಲಿ ಅಂದರೆ ಗೋಪುರವು ಮೊನಚಾ(ಆರ್ಚ)ಕಾರದ ಏಸುವಿನ ಶಿಲುಬೆಯು ಮುಗಿಲು ಮಟ್ಟುವಂತೆ ಅತ್ಯಂತ ಸುಂದರವಾಗಿ ನಿರ್ಮಿಸಿದ್ದಾರೆ. ಬಲಿಪೀಠ ಸಭಾಂಗಣ, ಪೂಜಾ ವೇದಿಕೆ, ಸುಮಾರು ೧೦೦ ರಿಂದ ೧೫೦ ಜನರು ಪ್ರಾರ್ಥನೆ ಮಾಡಲು ವಿಶಾಲ ಪ್ರಾಂಗಣ, ಹೊಂದಿದ್ದು, ಚರ್ಚ ವಿಶಾಲವಾದ ಉದ್ಯಾನವನದ ಮಧ್ಯದಲ್ಲಿ ನಿರ್ಮಿಸಿರುವುದು ಆಕರ್ಷಣೀಯವಾಗಿದೆ. ಚರ್ಚನ ಸುತ್ತಲೂ ವ್ಯವಸ್ಥಿತ ಕಾಂಪೌಂಡನ್ನು ಸಹ ಕಟ್ಟಿದ್ದಾರೆ. ಈ ಚರ್ಚ ಕ್ಯಾಥೋಲಿಕ ಪಂಗಡಕ್ಕೆ ಸೇರಿದೆ. ಈ ಚರ್ಚನ ಬಾಗಿಲು, ಕಿಟಕಿ ಚೌಕಾಕಾರವಿದ್ದು, ಆಧುನಿಕ ಶೈಲಿಯ ಹೂವು ಬಳ್ಳಿಯಾಕಾರದ ಚಿತ್ರಗಳನ್ನು ಬಿಡಿಸಿದ್ದಾರೆ. ಒಟ್ಟಿನಲ್ಲಿ ಈ ಚರ್ಚ ಆಧುನಿಕ ವಾಸ್ತುಶೈಲಿಯನ್ನು ಒಳಗೊಂಡು ನಿರ್ಮಾಣವಾಗಿದೆ.

### ವೈಗ್ಲೆ ಸ್ಮಾರಕ ಚರ್ಚ(ದೇವಾಲಯ)ಗುಳೇದಗುಡ್ಡ

ಗುಳೇದಗಡ್ಡ ಬಾದಾಮಿಯಿಂದ ಈಶಾನ್ಯಕ್ಕೆ ೨೨ ಕಿ.ಮೀ. ದೂರದಲ್ಲಿರುವ ಬಾಗಲಕೋಟೆ ಜಿಲ್ಲೆಯ ಪ್ರಮುಖ ವ್ಯಾಪಾರ ಕೇಂದ್ರ. ಕ್ರಿ.ಶ.೧೮೮೧ರಲ್ಲಿ ಬ್ರಿಟಿಷ್ ಸೈನ್ಯಾಧಿಕಾರಿ ಸರ್

ಥಾಮಸ್ ಮನ್ರೋ ಬೃಹತ್ತಾದ ಸೈನ್ಯದೊಂದಿಗೆ ಬಾದಾಮಿಗೆ ಮುತ್ತಿಗೆ ಹಾಕಿ ಬಾದಾಮಿ, ಗುಳೇದಗುಡ್ಡ ಹಾಗೂ ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡನು. ನಂತರ ಬಾಗಲಕೋಟೆ, ಹವೇಲಿ, ಮುರನಾಳ, ಕಲಾದಗಿ ಇತ್ಯಾದಿ ಪ್ರದೇಶಗಳು ಸಂಪೂರ್ಣವಾಗಿ ಕ್ರಿ.ಶ.೧೮೧೮ ಮೇ ೧೭ರಂದು ಬ್ರಿಟಿಷರು ಕೈವಶವಾದವು. ಗುಳೇದಗುಡ್ಡ ಪ್ರದೇಶವು ಸಂಪತ್ಭರಿತವಾಗಿದ್ದುದರಿಂದ ಬ್ರಿಟಿಷರು ಇಲ್ಲಿ ವಾಸ್ತವ್ಯ ಹೂಡಿ, ಚರ್ಚ, ಶಾಲೆ, ನೇಕಾರಿಕೆಗಾಗಿ ಕೈಮಗ್ಗ ಕೊಠಡಿ, ವಾಸಿಸಲು ಬಂಗಲೆ ಅನಾಥಾಶ್ರಮ ಹಾಗೂ ಸುಗಮ ರಸ್ತೆ ಸಂಚಾರಕ್ಕಾಗಿ ಸೇತುವೆಗಳನ್ನು ನಿರ್ಮಿಸಿದರು. ವಸಾಹತು ಕಾಲದಲ್ಲಿ ಅಂದರೆ ಬ್ರಿಟಿಷರ ಆಡಳಿತದ ಅವಧಿಯಲ್ಲಿ ನಿರ್ಮಾಣಗೊಂಡಂತಹ ಚರ್ಚಗಳು ಹಾಗೂ ಮೂಲ ಸ್ವರೂಪದಿಂದ ಜೀರ್ಣೋದ್ಧಾರಗೊಂಡ ಚರ್ಚಗಳ ಕುರಿತು ಐತಿಹಾಸಿಕವಾಗಿ ಚರ್ಚಿಸಿ ದಾಖಲಿಸಲಾಗಿದೆ.

ಕ್ರೈಸ್ತ ಮಿಶನರಿಯಾಗಿದ್ದ ರೆವರೆಂಡ್ ಜಿ.ಕೀಜ ಅವರು ಗುಳೇದಗುಡ್ಡ ಸಮೀಪ ೨ ಕಿ.ಮೀ. ದೂರವಿರುವ ಸುಮಡ್ಡಿ ಎಂಬ ಸ್ಥಳದಲ್ಲಿ ವಾಸವ್ಯ ಮಾಡಿ ಕ್ರಿ.ಶ.೧೮೪೯ ಜುಲೈ ೨೨ ರಿಂದ ಆಗಸ್ಟ್ ೯ರ ವರೆಗೆ ಇದ್ದು ಬೈಬಲ್ಲಿನ ಮಥಾಯ್‌ನ ಸುವಾರ್ತೆ ಎಂಬ ಭಾಗದಿಂದ ಗುಳೇದಗುಡ್ಡದಲ್ಲಿ ಕ್ರೈಸ್ತ ಮತದ ಬೋಧನೆ ನೀಡಿದರು. ಕೀಜರ್ ಜೊತೆಗೆ ಜೆ.ಜೆ.ಥೂಮ್ ಮತ್ತು ಕ್ರಿಸ್ಟನ್ ವೈಗ್ಲೆ ಸಹಪಾಠಿಗಳಿದ್ದರು. ಇಲ್ಲಿ ಒಬ್ಬ ಮಿಷನರಿಯು ಬಂದು ವಾಸ ಮಾಡುವುದಾದರೆ ನಾವು ಕ್ರೈಸ್ತರಾಗುತ್ತೇವೆ ಎಂದು ಗುಳೇದಗುಡ್ಡದ ಐದು ಜನರು ರೆವರೆಂಡ್ ಜಿ.ಕೀಜರಲ್ಲಿ ಮನವಿ ಮಾಡಿಕೊಳ್ಳುತ್ತಾರೆ. ಇದರ ತತ್ಪರಿಣಾಮವಾಗಿ ಕ್ರಿ.ಶ.೧೮೫೧ರಲ್ಲಿ ಗುಳೇದಗುಡ್ಡದಲ್ಲಿ ಐದು ಜನರಿಂದ ಸಭಾ ಸೇವೆ ಪ್ರಾರಂಭವಾಗಿ ಗುಳೇದಗುಡ್ಡ ಬಾಸೆಲ್ ಮಿಶಲ್ ಸಭೆಗೆ ೧೦ ಜನರು ಹಾಗೂ ಇಬ್ಬರು ಮಕ್ಕಳು ಪ್ರಥಮ ಸದಸ್ಯರಾದರು.

ರೆವೆರೆಂಡ್ ಜಿ.ಕೀಜ ಹಾಗೂ ಥೂಮ್ ಗುಳೇದಗುಡ್ಡದಲ್ಲಿ ಸೇವೆ ಸಲ್ಲಿಸಿ ಕ್ರಿ.ಶ.೧೮೬೦ರಲ್ಲಿ ಮರಳಿ ಯುರೋಪ್‌ಗೆ ಹೋದರು. ಕ್ರಿ.ಶ.೧೮೨೧ರಲ್ಲಿ ರೆವೆರೆಂಡ್ ಸಿ.ವೈಗ್ಲೆ ಗುಳೇದಗುಡ್ಡಕ್ಕೆ ಬಂದು ಕ್ರೈಸ್ತಮತದ ಬೋಧನೆ ಆರಂಭಿಸಿದನು. ಬರಗಾಲದ ಸಮಯದಲ್ಲಿ ಸತತ ಬಿಡುವಿಲ್ಲದ ಸೇವೆಯಲ್ಲಿ ನಿರತರಾಗಿದ್ದರಿಂದ ವೈಗ್ಲೆ ತುಂಬಾ ಜ್ವರದಿಂದ ಬಳಲಿ ಕ್ರಿ.ಶ.೧೮೭೬ ಡಿಸೆಂಬರ್ ೨೧ರಲ್ಲಿ ನಿಧನ ಹೊಂದಿದನು. ವೈಗ್ಲೆ ಸಮಾಧಿ ಚರ್ಚನ ಎಡಭಾಗದಲ್ಲಿ ನಿರ್ಮಿಸಿ, ಈ ಚರ್ಚಗೆ ವೈಗ್ಲೆ ಸ್ಮಾರಕ ಚರ್ಚ(ದೇವಾಲಯ) ಎಂದು ಕರೆಯಲಾಯಿತು. ಬಾಗಲಕೋಟೆ ಜಿಲ್ಲೆಯಲ್ಲಿಯೇ ೧೮೪೯ರಲ್ಲಿ ಬ್ರಿಟಿಷರು ನಿರ್ಮಿಸಿದ ಪ್ರಥಮ ಚರ್ಚ ಇದಾಗಿದೆ. ಬೃಹತ್ತಾಕಾರದ ಎಂಟು ಕಂಬಗಳನ್ನು ಕೆಂಪು ಮಿಶ್ರಿತ ಕಲ್ಲಿನಿಂದ ನಿರ್ಮಿಸಿದ್ದಾರೆ. ಪ್ರಾರ್ಥನೆಗಾಗಿ ವಿಶಾಲ ಪ್ರಾಂಗಣ, ಬಲಿಪೀಠ, ವೇದಿಕೆ ಎಲ್ಲವೂ ಕಟ್ಟಿಗೆ ಮತ್ತು ಕಲ್ಲಿನಿಂದ ನಿರ್ಮಿಸಿದ್ದಾರೆ. ಬಾಗಿಲು, ಕಿಟಕಿ, ಗಾಜಿನ ಬಳ್ಳಿಯಾಕಾರದಿಂದ ಅಲಂಕೃತಗೊಂಡಿದೆ. ಮೇಲ್ಛಾವಣಿಗೆ

ಮೊದಲು ಮಂಗಳೂರು ಹೆಂಚು ಉಪಯೋಗಿಸಿದ್ದರು. ಕಲ್ಲಿನ ಕಂಬದಲ್ಲಿರುವ ವೇದಿಕೆ ನಿರ್ಮಿಸಿರುವುದು ಇಲ್ಲಿ ವಿಸ್ಮಯಕಾರಿಯಾಗಿದೆ. ಚರ್ಚ ಸುತ್ತಲೂ ಕಾಂಪೌಂಡ್ ನಿರ್ಮಿಸಿ ಇತ್ತೀಚೆಗೆ ೨೦೧೦-೧೧ರಲ್ಲಿ ಜೀರ್ಣೋದ್ಧಾರಗೊಂಡು ವೈಗ್ಲೆ ಚರ್ಚ ಹೊಸ ರೂಪವನ್ನು ಪಡೆದುಕೊಂಡು ಕಂಗೊಳಿಸುತ್ತಿದೆ. ವೈಗ್ಲೆ ಸ್ಮಾರಕ ಚರ್ಚನ ಹತ್ತಿರದಲ್ಲಿ ೦೧-೦೨-೧೮೫೮ರಲ್ಲಿ ಬಾಸೆಲ್ ಮಿಶನ್ ಶಾಲೆಯನ್ನು ಸಹ ಬ್ರಿಟಿಷರು ಪ್ರಾರಂಭಿಸಿದರು. ಬಾಸೆಲ್ ಮಿಶನ್ ಶಾಲೆ ಕಟ್ಟಡ ಇಂದಿಗೂ ಸುವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಇಂದಿಗೂ ಸಹ ವಿದೇಶಿ ಕ್ರೈಸ್ತರು ಈ ಚರ್ಚಗೆ ಬಂದು ಭೇಟಿ ನೀಡಿ ಪ್ರಾರ್ಥನೆ ಸಲ್ಲಿಸುವ ಸಂಪ್ರದಾಯ ಮುಂದುವರೆದಿದೆ. ಇಲ್ಲಿರುವಂತಹ ಕ್ರೈಸ್ತರು ಎರಡು ಮೂರು ತಲೆಮಾರಿನಿಂದಿಚೆ ಕ್ರೈಸ್ತಮತದ ಅನುಯಾಯಿಗಳಾಗಿದ್ದಾರೆ, ಯಾರೂ ಸಹ ಮೂಲ ಕ್ರೈಸ್ತರಲ್ಲ.

## ಸೆಂಟ್ ಝೇವಿಯರ್ಸ್ ಚರ್ಚ ಗುಳೇದಗುಡ್ಡ

ಗುಳೇದಗುಡ್ಡದಿಂದ ೬ ಮೈಲು(೯.೬ ಕಿ.ಮೀ) ದೂರದ ಕಟಗಿನಹಳ್ಳಿ(ಆಸಂಗಿ)ಯಲ್ಲಿ ಕ್ರಿ.ಶ.೧೮೬೩ರಲ್ಲಿ ಸೆಂಟ್ ಝೇವಿಯರ್ಸ್ ಚರ್ಚ ಸ್ಥಾಪಿಸಲಾಯಿತು. ಇದಕ್ಕೂ ಮೊದಲೇ ಗುಳೇದ ಗುಡ್ಡದಲ್ಲಿ ಒಂದು ಉಪಠಾಣ್ಯ ಸ್ಥಾಪಿಸಿಕೊಂಡು, ಸೆಂಟ್ ಝೇವಿಯರ್ಸ್ ಚರ್ಚನ್ನು ಸ್ಥಾಪಿಸಲಾಗಿತ್ತು. ಕಟಗಿನಹಳ್ಳಿಯ ಚರ್ಚನ್ನು ಗುಳೇದಗುಡ್ಡ ಉಪಠಾಣ್ಯಕ್ಕೆ ಸೇರಿಸಲಾಯಿತು. ಸೆಂಟ್ ಝೇವಿಯರ್ಸ್ ಚರ್ಚ ಕ್ಯಾಥೋಲಿಕ್ ಪಂಗಡಕ್ಕೆ ಸೇರಿದೆ. ಕ್ರಿ.ಶ.೧೯೧೩ರಲ್ಲಿ ಫಾ.ಫ್ರಾಂಕನ್ ಕ್ಯಾಥೋಲಿಕ್ ಸಭೆಗೆ ಬುನಾದಿ ಹಾಕಿದ ನಂತರ ಫಾ.ಜಾರ್ಜ್ ಡೇಸಾರವರು ಹಳ್ಳಿಗಳಿಗೆ ಹೋಗಿ ವಿದ್ಯೆ ಹೇಳಿ ಬಡವರ ಸೇವೆ ಮಾಡುತ್ತಾ ಆರೋಗ್ಯ ಕೇಂದ್ರ ನಿರ್ಮಾಣ, ಶಾಲೆಗಳ ಆರಂಭ ಇತ್ಯಾದಿ ಸಮಾಜ ಸೇವೆಯ ಕಾರ್ಯದಲ್ಲಿ ತೊಡಗಿದರು. ಇದರ ತತ್ಪರಿಣಾಮವಾಗಿ ವ್ಯವಸ್ಥಿತವಾದ ಚರ್ಚನ್ನು ಸ್ಥಾಪಿಸಿ ಜನರನ್ನು ಕೈಸ್ತಮತದ ಕಡೆಗೆ ಸೆಳೆಯಲು ಉದ್ದೇಶ ಹೊಂದಿದ ಬ್ರಿಟಿಷರು ಚರ್ಚಗಳ ಮೂಲಕ, ಧರ್ಮಪ್ರಸಾರ, ಶಿಕ್ಷಣ, ಆರೋಗ್ಯ ಸೇವೆಯನ್ನು ಮುಂದುವರೆಸಿದರು.

ಕೆಂಪು ಮತ್ತು ಕಪ್ಪು ಕಲ್ಲಿನಿಂದ ನಿರ್ಮಿಸಿದ ಸೆಂಟ್ ಝೇವಿಯರ್ಸ್ ಚರ್ಚ ಇಂದು ಜೀರ್ಣೋದ್ಧಾರಗೊಂಡು ಹೊಸ ಶೈಲಿಯಿಂದ ಕಂಗೊಳಿಸುತ್ತಿದೆ. ಚರ್ಚನ ಬಲಿಪೀಠವು ಅಲಂಕೃತಗೊಂಡಿದ್ದು, ಹಿಂದುಗಡೆ ಶಿಲುಬೆ ಇದೆ. ವೇದಿಕೆಯ ಎಡಬಲಕ್ಕೆ ಮೂರ್ತಿಶಿಲ್ಪಗಳಿವೆ. ಸಾಮೂಹಿಕ ಪ್ರಾರ್ಥನೆಗಾಗಿ ವಿಶಾಲ ಸಭಾಂಗಣ ಸುವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ. ಗೋಡೆ, ಕಿಟಕಿ, ಬಾಗಿಲು ಹಾಗೂ ಮೇಲ್ಛಾವಣಿ ಎಲ್ಲವೂ ಆಧುನಿಕ ಶೈಲಿಗೊಳಪಟ್ಟ ಅಲಂಕೃತಗೊಂಡಿವೆ. ಮೋಸಾಯಿಕ್ ಕಲಾಶೈಲಿಯಲ್ಲಿ ಈ ಚರ್ಚ ನಿರ್ಮಾಣಗೊಂಡಿರುವುದು ವಿಶೇಷವಾಗಿದೆ.

ಸೆಂಟ್ ಝೇವಿಯಸ್ಸ್ ಶಾಲೆಯು ಸಹ ಈ ಚರ್ಚನ ಆವರಣದಲ್ಲಿದೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸೆಂಟ್ ಝೇವಿಯರ್ಸ್ ಶಾಲೆ ಸಣ್ಣ ಕಟ್ಟಡದಲ್ಲಿ ಶಿಕ್ಷಣ ಸೇವೆಯನ್ನು ಪ್ರಾರಂಭಿಸಿ, ಇಂದು ವಿಶಾಲ ಕಟ್ಟಡವನ್ನು ಹೊಂದಿ ಹಲವಾರು ವಿದ್ಯಾರ್ಥಿಗಳಿಗೆ ಜ್ಞಾನರ್ಜನೆಯನ್ನು ಮಾಡುತ್ತಿದೆ. ಕ್ರೈಸ್ತಮತದ ಪ್ರೋಟೆಸ್ಟೆಂಟ್ ಮತ್ತು ಕ್ಯಾಥೋಲಿಕ್ ಎರಡು ಪಂಗಡಕ್ಕೆ ಸೇರಿದ ಚರ್ಚಗಳು ಗುಳೇಗುಡ್ಡದಲ್ಲಿ ನಿರ್ಮಾಣಗೊಳ್ಳಲು ಕಾರಣಗಳು ಏನಿರಬಹುದು? ಎಂಬ ಪ್ರಶ್ನೆ ಕಾಡದೇ ಇರಲಾರದು. ವಸಾಹತು ಕಾಲಘಟ್ಟದಲ್ಲಿ ಈ ಎರಡು ಪಂಗಡಗಳು ಜನರನ್ನು ತಮ್ಮತ್ತ ಸೆಳೆಯಲು ಸ್ಪರ್ಧೆಗಿಳಿದುದ್ದು ಮೇಲ್ನೋಟಕ್ಕೆ ಕಂಡುಬರುತ್ತದೆ. ಎರಡು ಪಂಗಡಗಳಲ್ಲಿ ನಂಬಿಕೆ ಮತ್ತು ಆಚರಣೆಗಳು ವಿಭಿನ್ನವಾಗಿವೆ. ಹಾಗಾಗಿ ಜನರ ತಮ್ಮ ಇಚ್ಛಾನುಸಾರ ಇಲ್ಲಿ ಕ್ರೈಸ್ತಮರದ ಅನುಯಾಯಿಗಳಾದರು.

ಬಾಗಲಕೋಟೆ ಜಿಲ್ಲೆಯಲ್ಲಿ ಹೆಚ್ಚಾಗಿ ಬಾದಾಮಿ, ತಾಲೂಕಿನ ಹಳ್ಳಿಗಳಾದ ಮುಷ್ಠಿಗೇರಿ, ಆಡಗಲ, ಪಟ್ಟದಕಲ್ಲು, ಕಟಗಿನಹಳ್ಳಿ(ಆಸಂಗಿ), ಮೇಲಿನ ಹಲಕುರ್ಕಿ, ಸುಮಡ್ಡಿ, ಗುಳೇದಗುಡ್ಡ, ಚಿಕನಾಳ ಈ ಎಲ್ಲ ಸ್ಥಳಗಳಲ್ಲಿ ಮಾತ್ರ ಚರ್ಚಗಳಿವೆ. ಆದರೆ ಮುಧೋಳ, ಜಮಖಂಡಿ, ಬೀಳಗಿ, ತಾಲೂಕಿನಲ್ಲಿ ಒಂದು ಚರ್ಚನ್ನು ಸಹ ಬ್ರಿಟಿಷರು ನಿರ್ಮಿಸಲಿಲ್ಲ. ಅದರಂತೆ ಬಾಗಲಕೋಟೆಯಲ್ಲಿ ಎರಡು ಚರ್ಚಗಳು, ಹುನಗುಂದ ತಾಲೂಕಿನ ಕರಡಿ ಗ್ರಾಮದಲ್ಲಿ ಒಂದು ಚಿಕನಾಳದಲ್ಲಿ ಒಂದು ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಬ್ರಿಟಿಷರ ಪ್ರಭುತ್ವ ಬಾಗಲಕೋಟೆ, ಹುನಗುಂದ, ಬಾದಾಮಿ ತಾಲೂಕಿನಲ್ಲಿ ಹೆಚ್ಚಾಗಿದ್ದು, ಮುಧೋಳ ಘೋರ್ಪಡೆ ಸಂಸ್ಥಾನಿಕರು ಹಾಗೂ ಜಮಖಂಡಿ ಪಟವರ್ಧನ ಸಂಸ್ಥಾನಿಕರ ಆಡಳಿತ ಈ ಭಾಗದಲ್ಲಿದ್ದು, ಬ್ರಿಟಿಷರ ಪರವಾಗಿದ್ದುದರಿಂದ ಮುಧೋಳ, ಜಮಖಂಡಿ, ಬೀಳಗಿ ತಾಲೂಕಿನಲ್ಲಿ ಚರ್ಚಗಳನ್ನು ನಿರ್ಮಾಣ ಮಾಡಲು ಅಸಾಧ್ಯವಾಗಿರಬಹುದು. ಈ ಎರಡು ಸಂಸ್ಥಾನಿಕರು ಅಪ್ಪಟ ಮರಾಠ ಆಡಳಿತ ವೈಖರ್ಯದಿಂದ ಕೂಡಿದ್ದು ಹಿಂದುತ್ವ ವಾದಿಗಳಾಗಿರುವುದರಿಂದ ಚರ್ಚಗಳನ್ನು ಸ್ಥಾಪಿಸಲು ಬ್ರಿಟಿಷರಿಗೆ ಅವಕಾಶ ನೀಡದೆ ಇದ್ದಿರಬಹುದು ಎಂದು ಗ್ರಹಿಸಬಹುದು. ಹಾಗೇಯೇ ಸಂಸ್ಥಾನಿಕರೊಂದಿಗೆ ಬ್ರಿಟಿಷರು ಒಪ್ಪಂದವನ್ನು ಮಾಡಿಕೊಂಡ ತತ್ವಪರಿಣಾಮವಾಗಿ ಬ್ರಿಟಿಷರಿಗೆ ಕಾಲಕಾಲಕ್ಕೆ ಕಪ್ಪ ಕಾಣಿಕೆಯನ್ನು ಸಲ್ಲಿಸಿ ಸಂಸ್ಥಾನಿಕರು ತಮ್ಮ ಸ್ಥಾನ, ಅಧಿಕಾರವನ್ನು ಭದ್ರಪಡಿಸಿಕೊಳ್ಳುತ್ತಿದ್ದರು. ಹಾಗಾಗಿ ಬ್ರಿಟಿಷರು ಈ ಸ್ಥಳಗಳಲ್ಲಿ ಚರ್ಚಗಳನ್ನು ಸ್ಥಾಪಿಸದಿರಲು ಕಾರಣವಾಗಿದೆ. ಕ್ರೈಸ್ತಮತದ ಪ್ರಚಾರ ಮಾಡಲು, ಸ್ಥಳೀಯ ಬ್ರಿಟಿಷ್ ಅಧಿಕಾರಿಗಳ ಪ್ರಾರ್ಥನೆ ಗಾಗಿ, ಸಾಮಾಜಿಕ ಕಳಕಳಿ, ಸಮಾನತೆ ತತ್ವ ಪಾಲಿಸಲು ಚರ್ಚಗಳನ್ನು ಇಲ್ಲಿ ನಿರ್ಮಿಸಲು ಮೂಲ ಉದ್ದೇಶಗಳನ್ನು ಇಟ್ಟುಕೊಂಡು ಬ್ರಿಟಿಷರು ಕಾರ್ಯಪ್ರವೃತ್ತರಾದರು.

ಬಾದಾಮಿಯಲ್ಲಿ ನೀಲಕಂಠ ಸುಬೇದಾರ ಮೇಲೆ ಬ್ರಿಟಿಷರು ದಾಳಿ ಮಾಡಿ ಸುತ್ತಮುತ್ತಲಿನ ಪ್ರದೇಶ ಗಳೆಲ್ಲವನ್ನು ವಶಪಡಿಸಿಕೊಂಡರು. ಪುನಃ ಸುಬೇದಾರ ಬಂಡೇಳಬಾರದು ಎಂದು ದೂರದೃಷ್ಟಿ ಇಟ್ಟುಕೊಂಡು ಗುಳೇದಗುಡ್ಡ ಬಾದಾಮಿ ಪ್ರದೇಶಗಳಲ್ಲಿ ಸಮಾಜ ಸೇವೆಗೆ ಬ್ರಿಟಿಷರು ಮುಂದಾದರು. ಈ ಸಮಯದಲ್ಲಿ ಅನೇಕ ದಲಿತರು, ಅಂದರೆ ತಳಸಮುದಾಯದ ಜನರು ಕ್ರೈಸ್ತಧರ್ಮದ ಅನುಯಾಯಿಗಳಾದರು. ಗುಳೇದಗುಡ್ಡ ಹಾಗೂ ಮುಷ್ಠಿಗೇರಿ ಪ್ರದೇಶಗಳಲ್ಲಿ ಇರುವಂತಹ ಕ್ರೈಸ್ತರು ಯಾರು ಸಹ ಮೂಲ ಕ್ರೈಸ್ತರಲ್ಲ. ಆದರೆ ಮೂರ್‍ನಾಲ್ಕು ತಲೆಮಾರಿನಿಂದಿಚೆ ಕ್ರೈಸ್ತಧರ್ಮದ ಅನುಯಾಯಿಗಳಾಗಿದ್ದಾರೆ. ಇಂದಿಗೂ ಸಹ ಇವರ ಧಾರ್ಮಿಕ ಆಚರಣೆಗಳು ಕ್ರೈಸ್ತಧರ್ಮಕ್ಕನು ಸಾರವಾಗಿಯೇ ನೆರವೇರುತ್ತವೆ. ಪ್ರಸ್ತುತ ದಿನಗಳಲ್ಲಿ ಸಾಮೂಹಿಕ ವಿವಾಹ, ಆರೋಗ್ಯ, ಶಿಬಿರಗಳನ್ನು ಏರ್ಪಡಿಸುವುದು. ಬಡಮಕ್ಕಳಿಗೆ ಶಿಕ್ಷಣ ಇತ್ಯಾದಿ ಸಮಾಜ ಸೇವೆಯ ಕಾರ್ಯಕ್ರಮಗಳನ್ನು ಈ ಚರ್ಚಗಳು ಹಮ್ಮಿಕೊಂಡು ಇಂದಿಗೂ ಸಹ ಯಶಸ್ವಿ ಗೊಳಿಸುತ್ತಿರುವುದು ತುಂಬಾ ಪ್ರಶಂಸನೀಯವಾದ ಸತ್ಕಾರ್ಯವಾಗಿದೆ.

**ಐಸ್ಟೆಲ್ಡರ್ ಸ್ಮಾರಕ ಚರ್ಚ(ದೇವಾಲಯ) ಸುಮಡ್ಡಿ**

ಗುಳೇದಗುಡ್ಡದಿಂದ ೩ ಕಿ.ಮೀ. ದೂರದ ಸುಮಡ್ಡಿ ಪ್ರದೇಶದಲ್ಲಿ ಕ್ರಿ.ಶ.೧೯೦೩ರಲ್ಲಿ ಬಾಸೆಲ್ ಬಾಲಕಿಯರ ವಸತಿಶಾಲೆ ಹಾಗೂ ಐಸ್ಟೆಲ್ಡರ್ ಸ್ಮಾರಕ ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಸುಮಡ್ಡಿ ಸುಂದರ ಪರಿಸರವನ್ನು ಒಳಗೊಂಡ ಎತ್ತರದ ಪ್ರದೇಶವಾಗಿರುವುದರಿಂದ ಬ್ರಿಟಿಷ್ ಅಧಿಕಾರಿಗಳು ಇಲ್ಲಿ ಬಂಗಲೆ, ಚರ್ಚ, ಶಾಲೆ, ಅಂಚೆ ಕಚೇರಿ, ಅನಾಥಾಶ್ರಮ, ವಸತಿ ನಿಲಯ ಇತ್ಯಾದಿಗಳನ್ನು ಇಲ್ಲಿ ನಿರ್ಮಿಸಿದ್ದಾರೆ. ಐಸ್ಟೆಲ್ಡರ್ ಸ್ಮಾರಕ ಚರ್ಚ ಇಂದು ಜೀರ್ಣೋದ್ಧಾರಗೊಂಡು ಮೂಲಸ್ವರೂಪವನ್ನು ಕಳೆದುಕೊಂಡಿದೆ. ಸಾಮೂಹಿಕ ಪ್ರಾರ್ಥನೆಗಾಗಿ ಬೃಹತ್ತಾದ ಪ್ರಾಂಗಣ, ಬಲಿಪೀಠ, ವೇದಿಕೆ, ಶಿಲುಬೆ, ಎಲ್ಲವನ್ನು ಒಳಗೊಂಡಿದ್ದು, ಚರ್ಚ ಸುತ್ತಲೂ ಕಾಂಪೌಂಡ್ ನಿರ್ಮಿಸಲಾಗಿದೆ. ಬ್ರಿಟಿಷ್ ಬಂಗಲೆ ಅವಸಾನದಂಚಿನಲ್ಲಿದೆ. ವಸತಿ ಶಾಲೆಯು ಅತ್ಯಂತ ತ್ವರಿತಗತಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯನ್ನು ನೀಡುವ ಮೂಲಕ ಚರ್ಚು ಸಮಾಜ ಸೇವೆಯಲ್ಲಿ ನಿರತವಾಗಿದೆ. ಗುಳೇದಗುಡ್ಡ ವೈಗ್ಲೆ ಸ್ಮಾರಕ ಹಾಗೂ ಸುಮಡ್ಡಿಯ ಐಸ್ಟೆಲ್ಡರ್ ಚರ್ಚ ಈ ಎರಡು ಚರ್ಚಗಳು ದಕ್ಷಿಣ ಭಾರತ ಕ್ರೈಸ್ತ ಸಭೆ(ಸಿ.ಎಸ್.ಐ) ಹಾಗೂ ಉತ್ತರ ಕರ್ನಾಟಕ ಕ್ರೈಸ್ತ ಸಭಾ ಪ್ರಾಂತ್ಯ(ಕೆ.ಎನ್.ಡಿ)ಕ್ಕೆ ಸೇರಿದ ಪ್ರೋಟೆಸ್ಟೆಂಟ್ ಪಂಗಡಕ್ಕೆ ಸಂಬಂಧಿಸಿವೆ. ಬ್ರಿಟಿಷರು ಸುಮಡ್ಡಿಯ ಎತ್ತರದ ಪ್ರದೇಶದಲ್ಲಿ ಚರ್ಚ, ಶಾಲೆ, ಬಂಗಲೆಯನ್ನು ನಿರ್ಮಿಸಿರುವುದನ್ನು ಗಮನಿಸಿದಾಗ ಬ್ರಿಟಿಷ್ ಅಧಿಕಾರಿಗಳು ಪರಿಸರ ಪ್ರೇಮಿಗಳಾಗಿದ್ದರು ಎಂಬ ಅಂಶ ತಿಳಿಯುತ್ತದೆ. ಬ್ರಿಟಿಷರು ಊರ ಹೊರಗೆ,

ಎತ್ತರವಾದ ಪ್ರಶಾಂತ ಸ್ಥಳ, ನದಿಗೆ ಹತ್ತಿರವಾಗುವ ಸ್ಥಳಗಳಲ್ಲಿ ನಿರೀಕ್ಷಣಾ ಮಂದಿರ, ಬಂಗಲೆ, ಚರ್ಚ, ಶಾಲೆಯನ್ನು ನಿರ್ಮಿಸುವ ಮೂಲ ಉದ್ದೇಶ ಏನಾಗಿತ್ತು? ಎಂಬುದು ಇಲ್ಲಿ ವಿವೇಚಿಸಬೇಕಿದೆ. ಅಂದರೆ ಬ್ರಿಟಿಷರು ತಮ್ಮ ಅಧಿಕಾರ ಪ್ರಭುತ್ವದ ಯೋಜನೆಗಳು, ಸ್ಥಳೀಯರಿಗೆ ಗೊತ್ತಾಗದ ರೀತಿಯಲ್ಲಿ ಗುಪ್ತವಾಗಿ ರೂಪಿಸುವ ಉದ್ದೇಶವಿರಬಹುದು. ಸುಮಡ್ಡಿಯಲ್ಲಿ ನೀರು ಸರಬರಾಜಿಗಾಗಿ ಎರಡು ಭಾವಿಗಳನ್ನು ಸಹ ಬ್ರಿಟಿಷರು ನಿರ್ಮಿಸಿದ್ದಾರೆ.

**ಸೆಂಟ್ ಝೇವಿಯರ್ಸ್ ಚರ್ಚ ಕಟಗಿನಹಳ್ಳಿ(ಆಸಂಗಿ)**

ಗುಳೇದಗುಡ್ಡದಿಂದ ೬ ಮೈಲು (೯.೬ ಕಿ.ಮೀ) ದೂರದ ಕಟಗಿನಹಳ್ಳಿ(ಆಸಂಗಿ)ಯಲ್ಲಿ ಕ್ರಿ.ಶ.೧೮೬೩ರಲ್ಲಿ ಸೆಂಟ್ ಝೇವಿಯರ್ಸ್ ಚರ್ಚ ಸ್ಥಾಪಿಸಲಾಯಿತು. ನಂತರದಲ್ಲಿ ಗುಳೇದಗುಡ್ಡ ಉಪಠಾಣ್ಯಕ್ಕೆ ಈ ಚರ್ಚನ್ನು ಸೇರಿಸಲಾಯಿತು. ಇದು ಕ್ಯಾಥೋಲಿಕ್ ಪಂಗಡಕ್ಕೆ ಸೇರಿದೆ. ಕ್ರಿ.ಶ.೧೯೧೫ ರಲ್ಲಿ ಫಾ॥ಫ್ರಾಂಕನ್ ಕ್ಯಾಥೋಲಿಕ್ ಸಭೆಗೆ ಬುನಾದಿ ಹಾಕಿದ ನಂತರ ಫಾ॥ಜಾರ್ಜ್ ಡೇಸಾರವರು ಹಳ್ಳಿಗಳಿಗೆ ಹೋಗಿ ವಿದ್ಯೆ ಹೇಳಿ ಬಡವರ ಸೇವೆ ಮಾಡುತ್ತಾ ಆರೋಗ್ಯ ಕೇಂದ್ರ ನಿರ್ಮಾಣ, ಶಾಲೆಗಳ ಆರಂಭ ಇತ್ಯಾದಿ ಸಮಾಜ ಸೇವೆಯ ಕಾರ್ಯದಲ್ಲಿ ತೊಡಗಿದರು. ಕೆಂಪು, ಕಪ್ಪು ಕಲ್ಲಿನಿಂದ ನಿರ್ಮಿಸಿದ ಸೇಂಟ್ ಝೇವಿಯರ್ಸ್ ಚರ್ಚ ಇಂದು ಜೀರ್ಣೋದ್ಧಾರಗೊಂಡು ಹೊಸ ಶೈಲಿಯಿಂದ ಕಂಗೊಳಿಸುತ್ತಿದೆ. ಈ ಹಳೆಯ ಚರ್ಚನ ಎಡಗಡೆ ಬೃಹತ್ತಾದ ಚರ್ಚನ್ನು ನಿರ್ಮಿಸಿದ್ದಾರೆ. ಬಲಿಪೀಠ ಅಲಂಕೃತಗೊಂಡಿದ್ದು ಶಿಲುಬೆ ಇದೆ. ವೇದಿಕೆಯ ಎಡಬಲಕ್ಕೆ ಮೂರ್ತಿಶಿಲ್ಪಗಳು ಸಾಮೂಹಿಕ ಪ್ರಾರ್ಥನೆಗೆ ವಿಶಾಲ ಸಭಾಂಗಣ ಸುವ್ಯವಸ್ಥಿತವಾಗಿ ನಿರ್ಮಿಸಿದ್ದಾರೆ. ಗೋಡೆ, ಕಿಟಕಿ, ಬಾಗಿಲು, ಮೇಲ್ಛಾವಣೆ ಎಲ್ಲವೂ ಆಧುನಿಕ ಶೈಲಿಗಳೊಳಪಟ್ಟು ಅಲಂಕೃತಗೊಂಡಿವೆ.

ಬಾದಾಮಿ ತಾಲೂಕಿನ ಕಟಗಿನಹಳ್ಳಿ ಬ್ರಿಟಿಷರ ಆಡಳಿತದ ಕಾಲಾವಧಿಯಲ್ಲಿ ಕ್ರೈಸ್ತರಿಗೆ ಸುಭದ್ರ ನೆಲೆಯಾಗಿತ್ತು. ಕಟಗಿನಹಳ್ಳಿಗೆ, ಆಸಂಗಿ, ಕರೇನಹಳ್ಳಿ ಎಂತಲೂ ಕರೆಯುತ್ತಾರೆ. ಗುಳೇದಗುಡ್ಡದಿಂದ ಪಟ್ಟದಕಲ್ಲು ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಆಸಂಗಿ ಗ್ರಾಮವಿದೆ. ಮುಂಬಯಿ ಪ್ರಾಂತದ ಕ್ರೈಸ್ತ ಮಿಶನರಿಯಾದ ಪಾದ್ರಿ ರೆವರೆಂಡ್ ಜಿ.ಕೀಜ ಅವರು ಗುಳೇದಗುಡ್ಡದಲ್ಲಿ ಕ್ರಿ.ಶ.೧೮೪೫ ಜುಲೈ ೨೨ ರಿಂದ ಆಗಸ್ಟ್ ೯ ರವರೆಗೆ ಇಲ್ಲಿ ಇದ್ದು ಬೈಬಲ್‌ನ ಮಥಾಯನ್ ಸುವಾತ್ತೆ ಎಂಬ ಭಾಗದಿಂದ ಕ್ರೈಸ್ತಮತದ ಬಗ್ಗೆ ಇನ್ನಷ್ಟು ವಿಚಾರಗಳನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯಂತೆ ಗುಳೇದಗುಡ್ಡದಲ್ಲಿ ಒಂದು ಮಿಶನ್ ಠಾಣ್ಯವನ್ನು ಪ್ರಾರಂಭಿಸಿದರು. ಕೀಜ ಅವರು ಸೇವೆಯ ಜೊತೆಗೆ ಕ್ರೈಸ್ತಮತದ ಬೋಧನೆ, ಧರ್ಮಪ್ರಸಾರ ಕೈಗೊಳ್ಳುವ ಉದ್ದೇಶದಿಂದ ಕಟಗಿನಹಳ್ಳಿಯಲ್ಲಿ ವಸತಿ ಮಾಡಿಕೊಂಡರು.

ಗುಳೇದಗುಡ್ಡ ಸುತ್ತಮುತ್ತಲಿನ ಜನರಲ್ಲಿ ಕ್ರೈಸ್ತಮತದ ಬೋಧನೆಯನ್ನು ಆಸಕ್ತಿಯಿಂದ ಆಲಿಸುವ ಪ್ರಕ್ರಿಯೆ ದಿನದಿಂದ ದಿನಕ್ಕೆ ಹೆಚ್ಚಾಗತೊಡಗಿತು. ಕ್ರಿ.ಶ.೧೮೬೩ರಲ್ಲಿ ಕಟಗಿನಹಳ್ಳಿ (ಆಸಂಗಿ)ಯಲ್ಲಿ ಚರ್ಚ ಸ್ಥಾಪಿಸಿ ಇಲ್ಲಿಯೇ ಪ್ರಾರ್ಥನೆ ಮಾಡಲು ಆರಂಭಿಸಿದರು. ಕಟಗಿನಹಳ್ಳಿಯ ಚರ್ಚಉಪಠಾಣ್ಯವಾಗಿ ಗುಳೇದಗುಡ್ಡ ಸಭೆಯ ಅಧೀನದಲ್ಲಿ ಕಾರ್ಯನಿರ್ವಹಿಸತೊಡಗಿದರು. ನಂತರದಲ್ಲಿ ಕ್ರೈಸ್ತಮತದ ಕಾರ್ಯಚಟುವಟಿಕೆಗಳು ಪ್ರಬಲಗೊಂಡು ವಿಸ್ತಾರವಾಗಿ ಬೆಳೆಯಲಾರಂಭಿಸಿದ ತತ್ಪರಿಣಾಮವಾಗಿ ಕ್ರಿ.ಶ.೧೮೬೩ರಲ್ಲಿ ಗುಳೇದಗುಡ್ಡದಲ್ಲಿ, ಕ್ರಿ.ಶ.೧೮೭೮ರಲ್ಲಿ ಮುಷ್ಠಿಗೇರಿಯಲ್ಲಿ ಮತ್ತು ಕ್ರಿ.ಶ.೧೮೮೪ರಲ್ಲಿ ಹಲಕುರ್ಕಿಯಲ್ಲಿ ಪ್ರಾರ್ಥನಾ ಮಂದಿರ(ಚರ್ಚ)ಗಳು ಸ್ಥಾಪನೆಗೊಂಡು ಕಾರ್ಯಾರಂಭ ಮಾಡಿದವು. ಕಟಗಿನಹಳ್ಳಿಯ ಹಳೆಯ ಚರ್ಚ ಈಗ ಕಾರ್ಯವನ್ನು ಸ್ಥಗಿತಗೊಳಿಸಿದೆ. ಕಟ್ಟಡದಲ್ಲಿ ಬಿರುಕು ಉಂಟಾಗಿ, ಮೆಲ್ಛಾವಣಿಯ ಹೆಂಚು ಇಲ್ಲದೇ ಶಿಥಿಲಾವಸ್ಥೆಯಿಂದ ಕೂಡಿದೆ. ಆದರೂ ಸಹ ಮೂಲ ಚರ್ಚ ಕಟ್ಟಡದಲ್ಲಿ ಹಲವಾರು ರೀತಿಯ ಜೀರ್ಣೋದ್ಧಾರ ಕೆಲಸ ಕಾರ್ಯಗಳನ್ನು ಕೈಗೊಂಡು ಬಣ್ಣ, ಸಿಮೆಂಟ್ ಪ್ಲಾಸ್ಟರದಿಂದ ಆವೃತ್ತಗೊಂಡಿದೆ. ಈ ಚರ್ಚನ ಎಡಗಡೆಯಲ್ಲಿ ಸಂತ ಫ್ರಾನ್ಸಿಸ್ ಝೇವಿಯರ್ ಚರ್ಚ ೨೦೦೯ರಲ್ಲಿ ಆಧುನಿಕ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಈ ಚರ್ಚನಲ್ಲಿ ಪ್ರಾರ್ಥನಾ ಗೃಹದಲ್ಲಿ ಹೆಚ್ಚಿಗೆ ಜನರು ಕುಳಿತು ಪ್ರಾರ್ಥನೆ ಮಾಡಲು ಸ್ಥಳಾವಕಾಶವಿದೆ. ಈ ಭಾಗದಲ್ಲಿ ಕ್ರೈಸ್ತ ಧರ್ಮದ ಅನುಯಾಯಿಗಳ ಸಂಖ್ಯೆ ಅಷ್ಟೇನು ಇಲ್ಲದಿದ್ದರೂ ಸಹ ಇಲ್ಲಿ ಹೆಚ್ಚಾಗಿ ಜನರು ಪ್ರಾರ್ಥನೆಯನ್ನು ಮಾಡಲು ಚರ್ಚಗೆ ಹೋಗುತ್ತಾರೆ. ಸಂತ್ ಫ್ರಾನ್ಸಿಸ್ ಝೇವಿಯರ್ ಚರ್ಚ ಕ್ಯಾಥೋಲಿಕ್ ಪಂಗಡಕ್ಕೆ ಸೇರಿದೆ.

**ಸಿ.ಎಸ್.ಐ. ಚರ್ಚ ಕಟಗಿನಹಳ್ಳಿ(ಆಸಂಗಿ)**

ಸಿ.ಎಸ್.ಐ ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ ಚರ್ಚ ಕಟಗಿನಹಳ್ಳಿಯಲ್ಲಿದೆ. ಈ ಚರ್ಚ ಸಹ ಮೂಲ ಕಟ್ಟಡದ ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದಿ ಆಧುನಿಕ ಶೈಲಿಯಿಂದ ಮಾರ್ಪಾಡು ಹೊಂದಿದೆ. ಚರ್ಚನ ಮೂಲ ಕಟ್ಟಡವನ್ನು ಕೆಂಪು ಶಿಲೆ, ಗಾರೆಗಚ್ಚು, ಸೀಮೇ ಸುಣ್ಣವನ್ನು ಉಪಯೋಗಿಸಿ ನಿರ್ಮಿಸಿದ್ದಾರೆ. ಆದರೆ ಇತ್ತೀಚಿನ ಕೆಲವು ವರ್ಷಗಳಲ್ಲಿ ಜೀರ್ಣೋದ್ಧಾರ ಕಾರ್ಯ ಕೈಗೊಂಡು ಸಂಪೂರ್ಣವಾಗಿ ಸಿಮೆಂಟ್ ಪ್ಲಾಸ್ಟರ್, ಕಾಂಕ್ರಿಟ್, ಇಟ್ಟಿಗೆ, ಆಧುನಿಕ ಬಣ್ಣದಿಂದ ಅಲಂಕೃತಗೊಂಡಿದೆ. ಕಿಟಕಿ ಬಾಗಿಲು ಚೌಕಟ್ಟು ಸಹ ಇತ್ತೀಚಿನ ವರ್ಷಗಳಲ್ಲಿ ಅಳವಡಿಸಿದ್ದಾರೆ. ಚರ್ಚ ಮೇಲ್ಛಾವಣೆಗೆ ಮಂಗಳೂರು ಕೆಂಪು ಹೆಂಚು ಇಳಿಜಾರಿನಾನುಕ್ರಮದಲ್ಲಿ ಜೋಡಿಸಿ ಅಳವಡಿಸಲಾಗಿದೆ. ಚರ್ಚ ಬಲಿಪೀಠ, ವೇದಿಕೆ, ಸಭಾಂಗಣ, ಪ್ರಾರ್ಥನೆಗೆ ವಿಶಾಲ ಪ್ರಾಂಗಣ, ಹೊರಗಡೆ ಮುಖ್ಯ ದ್ವಾರದ ಮೇಲುಗಡೆ

ಸಿಮೆಂಟಿನ ಶಿಲುಬೆ ಆಕೃತಿಯಿಂದ ಚರ್ಚ ಕಂಗೊಳಿಸುತ್ತಿದೆ. ಕಟಗಿನಹಳ್ಳಿಯಲ್ಲಿ ಕ್ರೈಸ್ತ ಮತದ ಎರಡು ಪಂಗಡಕ್ಕೆ ಸೇರಿದ ಚರ್ಚಗಳು ಕ್ರಿ.ಶ.೧೮೯೩-೯೫ರಲ್ಲಿ ಅತ್ಯಂತ ತ್ವರಿತಗತಿಯಲ್ಲಿ ಜನರ ಸೇವೆಯನ್ನು ಮಾಡಲು ಉತ್ಸುಕವಾಗಿ ಕಾರ್ಯನಿರ್ವಹಿಸಿವೆ. ಕಟಗಿನಹಳ್ಳಿಯಲ್ಲಿ ಮೂಲ ಕ್ರೈಸ್ತರ ಸಂಖ್ಯೆಯು ಕಡಿಮೆ ಪ್ರಮಾಣದಲ್ಲಿದ್ದು, ಕ್ರೈಸ್ತ ಧರ್ಮದ ಅನುಯಾಯಿಗಳು ಹೆಚ್ಚಿನ ಸಂಖ್ಯೆಯಲ್ಲಿ ಆಗಾಗ ಚರ್ಚಗೆ ಭೇಟಿ ಕೊಡುತ್ತಾರೆ. ಕಟಗಿನಹಳ್ಳಿಯಲ್ಲಿ ಇಂದಿಗೂ ಹಳೇಯ ಚರ್ಚಗಳ ಕಟ್ಟಡಗಳನ್ನು ನೋಡಬಹುದು. ಆದರೆ ಆಗಾಗ ಜೀರ್ಣೋದ್ಧಾರಗೊಂಡು ನವನವೀನತೆಯಿಂದ ಚರ್ಚಗಳು ಕಂಗೊಳಿಸುತ್ತಿವೆ.

**ಕರಡಿ**

ಹುನಗುಂದದ ಪೂರ್ವಕ್ಕೆ ೨೦ ಕಿ.ಮೀ.ದೂರದಲ್ಲಿದೆ. ಹುನಗುಂದ ತಾಲೂಕಿನ ನಾಲ್ಕು ಹೋಬಳಿಗಳಲ್ಲಿ ಕರಡಿ ಹೋಬಳಿ ಕೂಡಾ ಒಂದಾಗಿದೆ. ಕರಡಿಯಲ್ಲಿ ಲಭಿಸಿದ ಶಾಸನವೊಂದರಲ್ಲಿ ಕರವಿಡಿ ೨೦ ಎಂದಿದೆ. ಕ್ರಿ.ಶ.೧೪೭೫ರಲ್ಲಿ ವಿಜಯನಗರದ ಅರಸ ಸದಾಶಿವರಾಯನ ರಾಜಪ್ರತಿನಿಧಿ ರಾಮರಾಯನು ಮುದಗಲ್ ಸೀಮೆ 'ಕರಡಿ' ಸಮಿತಿಗೆ ಸೇರಿದ ನಾವಿದರಿಗೆ ಕರವನ್ನು ರದ್ದು(ತೆರಿಗೆ ರದ್ದು)ಪಡಿಸಿದ್ದನ್ನು ತಿಳಿಸುತ್ತದೆ. ಈ ಕರಡಾ ಸಮಿತಿಯ ಪರಿಣಾಮವೇ ಕರವಿಡಿ>ಕರಂಡಾ>ಕರಡಿ ಎಂದು ರೂಪಾಂತರ ಹೊಂದಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಬ್ರಿಟಿಷರು ನಿರ್ಮಿಸಿದ ಕ್ಯಾಥೋಲಿಕ್ ಪಂಗಡದ ಚರ್ಚ ಕರಡಿಯಲ್ಲಿದೆ. ಇಂದಿಗೂ ಈ ಚರ್ಚನಲ್ಲಿ ಪ್ರತಿ ಭಾನುವಾರ ಪ್ರಾರ್ಥನೆ, ಪ್ರತಿವರ್ಷ ಕ್ರಿಸ್‌ಮಸ್ ಹಬ್ಬವನ್ನು ವೈಶಿಷ್ಟ್ಯತೆಯಿಂದ ಆಚರಿಸುತ್ತಾರೆ. ಈ ಚರ್ಚನಲ್ಲಿ ವೇದಿಕೆ, ಶಿಲುಬೆ, ಪ್ರಾಂಗಣವನ್ನು ಹೊಂದಿದ್ದು, ಅಲ್ಲಲ್ಲಿ ಮೂಲ ಸ್ವರೂಪವು ಜೀರ್ಣೋದ್ಧಾರ ಹೊಂದಿದೆ. ಕರಡಿಯಲ್ಲಿ ಬ್ರಿಟಿಷರು ಶಾಲೆಯನ್ನು ಸಹ ಪ್ರಾರಂಭಿಸಿದ್ದಾರೆ. ಶಾಲೆ ಇಂದು ಬಡಮಕ್ಕಳಿಗೆ ಅಕ್ಷರಜ್ಞಾನವನ್ನು ಬಿತ್ತರಿಸುವ ಕಾರ್ಯದಲ್ಲಿ ನಿರತವಾಗಿದೆ. ಹುನಗುಂದ ತಾಲೂಕಿನಲ್ಲಿ ಕಂಡುಬರುವ ಎರಡು ಚರ್ಚಗಳಲ್ಲಿ ಒಂದು ಚಿಕನಾಳ, ಮತ್ತೊಂದು ಕರಡಿ ಗ್ರಾಮದಲ್ಲಿದೆ.

**ಮೇಲಿನ ಹಲಕುರ್ಕಿ**

ಹಲಕುರ್ಕಿ ಗ್ರಾಮವು ಬಾದಾಮಿ ತಾಲೂಕಿನ ಕೆರೂರ ಹೋಬಳಿಗೆ ಸೇರಿದ್ದು, ತಾಲೂಕು ಕೇಂದ್ರದಿಂದ ಉತ್ತರ ದಿಕ್ಕಿಗೆ ೧೧ ಕಿ.ಮೀ. ಅಂತರದಲ್ಲಿದೆ. ಹಲಕುರ್ಕಿ ಎಂಬುದು 'ಭೂಸ್ವರೂಪ ವಾಚಕ' ಮತ್ತು 'ಪಕ್ಷಿವಾಚಕ' ಪದವಾಗಿದೆ.ಇಲ್ಲಿ ಹಲ=ಫಲ ಎಂದು, ಕುರ್ಕು=ಕುಕ್ಕು ಎಂಬ ಅರ್ಥವನ್ನು ಕೊಡುತ್ತವೆ. ಫಲ/ಹಣ್ಣನ್ನು ಕುಕ್ಕಿ ತಿನ್ನುವಂತಹ

ಪಕ್ಷಿಗಳು ವಾಸಿಸುವ ಸ್ಥಳವೇ ಹಲಕುರ್ಕಿ ಎಂದು ಕರೆಯಲಾಗಿದೆ. ಮತ್ತೊಂದು ಅರ್ಥದಲ್ಲಿ ಹೇಳುವುದಾದರೆ, ಹಲ=ಸಾಗುವಳಿ ಎಂದು, ಕುರ್ಕಿ=ಗುಡ್ಡದ ಮೇಲಿರುವ ಎಂದರ್ಥ ಕೊಡುತ್ತವೆ. ಗುಡ್ಡದ ಮೇಲಿನ ಪ್ರದೇಶದಲ್ಲಿ ಬೇಸಾಯ ಮಾಡಿಕೊಂಡಿರುವ ಜನವಸತಿಯೇ ಹಲಕುರ್ಕಿ ಎಂದು ಗ್ರಾಮನಾಮದ ಪದನಿಷ್ಪತ್ತಿ ಯನ್ನು ಕಂಡುಕೊಳ್ಳಲಾಗಿದೆ.[೨೦] ಪ್ರಕೃತಿ ದತ್ತವಾಗಿ ಬಂದಿರುವ ಸ್ಥಳನಾಮಗಳು ಜಿಲ್ಲೆಯಲ್ಲಿ ಇಂದಿಗೂ ಕಂಡುಬರುತ್ತಿವೆ.

ಹಲಕುರ್ಕಿ ಗ್ರಾಮದಲ್ಲಿ ಕ್ರಿ.ಶ.೧೮೮೪ರಲ್ಲಿ ಪ್ರಾರ್ಥನಾ ಮಂದಿರ(ಚರ್ಚ) ಸ್ಥಾಪನೆಗೊಂಡಿತು. ಬಾದಾಮಿ, ಕೆರೂರು, ರಸ್ತೆ ಮಾರ್ಗದಿಂದ ಎಡಗಡೆ ೨ ಕಿ.ಮೀ. ದೂರದಲ್ಲಿರುವ ಗ್ರಾಮ ಮೇಲಿನ ಹಲಕುರ್ಕಿಯಾಗಿದೆ. ಕೆಳಗಿನ ಹಲಕುರ್ಕಿ ಬಾದಾಮಿ–ಕೆರೂರು ಹೆದ್ದಾರಿಗೆ ಹೊಂದಿಕೊಂಡಿದ್ದು, ಚರ್ಚನ್ನು ಗಾರೆಗಚ್ಚು, ಕಲ್ಲು, ಸೀಮೆ ಸುಣ್ಣದಿಂದ ಕಟ್ಟಲಾಗಿದೆ. ಈ ಪ್ರಾರ್ಥನಾ ಮಂದಿರಕ್ಕಾಗಿ ಉಪಯೋಗಿಸಿದ ಕಟ್ಟಿಗೆ, ಕಟ್ಟಿಗೆಯ ಕೆಲಸಕ್ಕಾಗಿಯೂ ಒಬ್ಬ ಹಿಂದೂ ಸಹೋದರನು ಯಾವುದೇ ರೀತಿಯ ಹಣ ತೆಗೆದುಕೊಳ್ಳದೇ ಉಚಿತವಾಗಿ ತನ್ನ ಕೊಡುಗೆಯನ್ನು ನೀಡಿದನು. ಮುಂಭಾಗದ ಮೇಲ್ಭಾಗದಲ್ಲಿ ಶಿಲುಬೆ, ಒಳಗಡೆ, ಸಭಾಂಗಣ, ವೇದಿಕೆ, ಬಲಿಪೀಠ ಒಳಗೊಂಡಿದೆ. ಚಿಕ್ಕದಾದ ಗ್ರಾಮ ಇದಾಗಿರುವುದರಿಂದ ಸುಮಾರು ೧೦ ರಿಂದ ೨೦ ಕುಟುಂಬಗಳು ಮಾತ್ರ ಕ್ರೈಸ್ತರಾಗಿದ್ದಾರೆ. ಈ ಚರ್ಚ ಸಹ ಪ್ರೊಟೆಸ್ಟೆಂಟ್ ಪಂಗಡಕ್ಕೆ ಸೇರಿದ್ದು, ಇತ್ತೀಚೆಗೆ ಚರ್ಚ ಜೀರ್ಣೋದ್ಧಾರಗೊಂಡಿದೆ. ಕೆಳಗಿನ ಹಲಕುರ್ಕಿಯಲ್ಲಿ ಬ್ರಿಟಿಷರು ನಿರ್ಮಿಸಿದ ಸ್ಮಾರಕಗಳು ಕಂಡುಬರುವುದಿಲ್ಲ. ಬಾದಾಮಿ ತಾಲೂಕಿನ ಹಳ್ಳಿಗಳಾದ ಹಲಕುರ್ಕಿ, ಮುಷ್ಠಿಗೇರಿ, ಆಡಗಲ, ಪಟ್ಟದಕಲ್ಲು ಈ ಸ್ಥಳಗಳಲ್ಲಿಯೇ ಚರ್ಚಗಳು ಯಾಕೆ ನಿರ್ಮಾಣವಾದವು? ಎಂಬ ಪ್ರಶ್ನೆ ಕಾಡದೇ ಇರಲಾರದು. ಅಂದರೆ ಇಲ್ಲಿ ಬ್ರಿಟಿಷರ ಔಷಧೋಪಚಾರ, ಯೇಸು ಕುರುಬ ಸಮುದಾಯದವನು ಎಂದು ಬ್ರಿಟಿಷರ ಬಣ್ಣನೆ ಮಾತಿಗೆ ಮರುಳಾದ ಮೂಢನಂಬಿಕಸ್ಥರು ಕ್ರೈಸ್ತಧರ್ಮದ ಅನುಯಾಯಿಗಳಾಗಲು ಕಾರಣ ವಿರಬಹುದು. ಈ ಭಾಗದಲ್ಲಿ ಕುರುಬ, ಬೇಡ(ವಾಲ್ಮೀಕಿ) ಸಮುದಾಯದವರು ಕ್ರೈಸ್ತ ಮತದ ಅನುಯಾಯಿಗಳಿದ್ದಾರೆ. ಇತ್ತೀಚೆಗೆ ಲಂಬಾಣಿ, ಮಾದಿಗ ಸಮುದಾಯದವರು ಕ್ರೈಸ್ತ ಮತದ ಅನುಯಾಯಿಗಳಾಗುತ್ತಿದ್ದಾರೆ.

**ಚಿಕನಾಳ**

ಹುನಗುಂದ ತಾಲೂಕಿನ ಅಮೀನಗಡ ಹೋಬಳಿಯ ಕಂದಾಯ ಗ್ರಾಮವೇ ಚಿಕನಾಳ. ಪ್ರಾಚೀನ ಕಾಲದಲ್ಲಿ ಚಿಕ್ಕಣ್ಣ ಎಂಬ ಬಲಶಾಲಿ ಬುದ್ಧಿವಂತ ಮತ್ತು ಪ್ರಭಾವಿ ವ್ಯಕ್ತಿಯಿಂದಾಗಿ ಈ ಗ್ರಾಮ ಪ್ರಸಿದ್ಧಿ ಹೊಂದಿದ್ದರಿಂದ ಆ ಚಿಕ್ಕನ ಊರು ಎಂದು ಹೆಸರು ಬಂದಿದೆ

ಎಂಬುದು ಪ್ರತೀತಿ. ಚಿಕ್ಕನ+ಹಾಳು=ಚಿಕ್ಕನಹಾಳ>ಚಿಕನಾಳ ಎಂದು ಕರೆಯಲಾಗಿದೆ. ಇದು ವ್ಯಕ್ತಿ ವಾಚಕವಾಗಿದೆ.[೨೧] ಈ ವ್ಯಕ್ತಿಯ ಸಾಂಸ್ಕೃತಿಕ ಚಹರೆಗಳು ಇಲ್ಲಿ ಕಾಣಿಸಿವುದಿಲ್ಲ.

ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಗೂಡೂರದಿಂದ ೨ ಕಿ.ಮೀ. ಅಂತರದಲ್ಲಿ ಚಿಕನಾಳ ಗ್ರಾಮವಿದೆ. ಅಡಗಲ್, ಹಲಕುರ್ಕಿ ಮತ್ತು ಚಿಕನಾಳದಲ್ಲಿ ಮೂರುನಾಲ್ಕು ವರ್ಷಗಳ ಅಂತರದಲ್ಲಿ ಚರ್ಚಗಳು ನಿರ್ಮಾಣಗೊಂಡಿವೆ. ಚಿಕನಾಳದಲ್ಲಿ ಕ್ರಿ.ಶ.೧೮೬೩ರಲ್ಲಿ ಏಸು ದೇವಾಲಯವನ್ನು ಸ್ಥಾಪಿಸಿ ಪ್ರಾರ್ಥನೆಯನ್ನು ಪ್ರಾರಂಭಿಸಲಾಯಿತು. ಸ್ಥಳೀಯವಾಗಿ ದೊರೆಯುವ ಕೆಂಪು ಮಿಶ್ರಿತ ಕಲ್ಲು, ಗಾರೆಗಚ್ಚು, ಸೀಮೆಸುಣ್ಣ ಉಪಯೋಗಿಸಿ ಚರ್ಚನ್ನು ಕಟ್ಟಲಾಗಿದೆ. ದೊಡ್ಡ ಕಲ್ಲುಗಳನ್ನು ಜೋಡಿಸಿ ಮೆಟ್ಟಿಲನ್ನು ನಿರ್ಮಿಸಲಾಗಿದೆ. ಈ ಚರ್ಚ ಮಹಡಿ ಮನೆಯ ವಿನ್ಯಾಸದಲ್ಲಿದ್ದು, ಕರಿಮತ್ತಿ, ಸಾಗವಾನಿ ಕಟ್ಟಿಗೆಯನ್ನು ಮೇಲ್ಛಾವಣಿಗೆ ಉಪಯೋಗಿಸಿದ್ದಾರೆ. ಪ್ರಸ್ತುತ ಇಂದು ಚರ್ಚ ಮುಂಭಾಗ ಮಂಗಳೂರಿನ ಹಂಚಿನ್ನು ಒಳಗೊಂಡ ಮೇಲ್ಛಾವಣಿ ತೆಗೆದು ಸಿಮೆಂಟ್ ಕಾಂಕ್ರೆಟ್, ಇಟ್ಟಿಗೆಯಿಂದ ಚರ್ಚನ ಹೊರಾಂಡ ವಿಸ್ತರಿಸುವ ಜೀರ್ಣೋದ್ಧಾರ ಕೆಲಸ ನಡೆಯುತ್ತಾ ಇದೆ. ಪ್ರೋಟೆಸ್ಟೆಂಟ್ ಪಂಗಡದ ಚರ್ಚ ಇದಾಗಿದ್ದು, ಮೂಲ ಹಾಲುಮತ (ಕುರುಬ) ಸಮುದಾಯದವರು ಇಂದು ಕ್ರೈಸ್ತ ಅನುಯಾಯಿಗಳಾಗಿದ್ದಾರೆ. ೧೦ ರಿಂದ ೨೦ ಕುಟುಂಬಗಳು ಕ್ರೈಸ್ತರಾಗಿದ್ದು, ಕ್ರೈಸ್ತಧರ್ಮದ ಎಲ್ಲ ರೀತಿಯ ನಂಬಿಕೆ, ಆಚರಣೆಗಳನ್ನು ಮುಂದುವರೆಸಿಕೊಂಡು, ಪ್ರತಿವರ್ಷ ವಿಜೃಂಭಣೆಯಿಂದ ಕ್ರಿಸ್‌ಮಸ್ ಹಬ್ಬವನ್ನು ಆಚರಿಸುತ್ತಿದ್ದಾರೆ.

**ಪಟ್ಟದಕಲ್ಲು**

ಪಟ್ಟದಕಲ್ಲು ಬಾದಾಮಿ ಹೋಬಳಿಗೆ ಸೇರಿದ್ದು. ತಾಲೂಕು ಕೇಂದ್ರದಿಂದ ಪೂರ್ವಕ್ಕೆ ೨೨ ಕಿ.ಮೀ. ದೂರದಲ್ಲಿದೆ. ಸುಮಾರು ಕ್ರಿ.ಶ.೭–೮ನೇ ಶತಮಾನದ ಪಾಪನಾಥ ದೇವಾಲಯದ ಸಮೀಪದ ಹೊಲದಲ್ಲಿ ನೆಟ್ಟಿರುವ ಶಾಸನದಲ್ಲಿ 'ಕಿಸವೊಳಲ್' ಎಂದಿದೆ. ಕ್ರಿ.ಶ.೧೧೬೩ರ ಸಂಗಮೇಶ್ವರ ದೇವಾಲಯದ ಮಂಟಪದ ಗೋಡೆಗೆ ಒರಗಿಸಿರುವ ಶಾಸನದಲ್ಲಿ "ಪಟ್ಟದ ಕಿಸುವೊಳಲ್" ಎಂದಿದೆ. ರಕ್ತಪುರ, ಕೆಂಪು ಪಟ್ಟಣ, ಶಿಲಾಪೂರ, ಪಟ್ಟದ ಶಿಲಾಪುರ, ಪಟ್ಟಬಂಧ ಮುಂತಾದ ಹೆಸರುಗಳು ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಕಂಡುಬರುತ್ತವೆ. ಪಾಪನಾಥ ದೇವಾಲಯದ ಸಮೀಪದಲ್ಲಿರುವ ಶಾಸನವು ಚಾಲುಕ್ಯ ಅರಸರ ಪಟ್ಟ ಬಂದೋತ್ಸವ ನಡೆಯುವ ಸ್ಥಳವು ಈ ಗ್ರಾಮವಾಗಿತ್ತೆಂದು ತಿಳಿಸುತ್ತದೆ. ಈ ಕಾರಣದಿಂದ ಪಟ್ಟ ಕಟ್ಟುವಕಲ್ಲು 'ಪಟ್ಟದಕಲ್ಲು' ಎಂದಾಗಿರ ಬಹುದು. ಕ್ರಿ.ಪೂ.೨ನೇ ಶತಮಾನದಲ್ಲಿ ಭಾರತಕ್ಕೆ ಬಂದಿದ್ದ ಗ್ರೀಕ್ ದೇಶದ ಭೂಗೋಳ ತಜ್ಞ ಚಾಲೆಮಿ ತನ್ನ ಕೃತಿಯಲ್ಲಿ ಈ ಗ್ರಾಮವನ್ನು 'ಪಟ್ನಗಲ್'

ಎಂದು ಕರೆದಿದ್ದಾನೆ. ಪಟ್ಟ ಕಟ್ಟುವುದು ಸಾಂಸ್ಕೃತಿಕ ವಾಚಕ, ಕಲ್ಲು ಪ್ರಕೃತಿವಾಚಕವಾಗಿದೆ.[೨೨] ಪಟ್ಟದಕಲ್ಲು ಸ್ಥಳನಾಮ ವೈಶಿಷ್ಟತೆಯಿಂದ ಕೂಡಿದೆ.

ಬಾದಾಮಿ ಚಾಲುಕ್ಯರ ಇತಿಹಾಸ ಪ್ರಸಿದ್ಧ ಗ್ರಾಮ ಪಟ್ಟದಕಲ್ಲಿನಲ್ಲಿ ಕ್ಯಾಥೋಲಿಕ್ ಪಂಗಡಕ್ಕೆ ಸೇರಿದ ಚರ್ಚನ್ನು ಕ್ರಿ.ಶ.೧೮೬೮ರಲ್ಲಿ ಬ್ರಿಟಿಷರು ನಿರ್ಮಿಸಿದ್ದಾರೆ. ಚರ್ಚನ ಮುಂಭಾಗ ವಿಶಾಲ ಪ್ರಾಂಗಣದಲ್ಲಿ ಮೇರಿಯ ದೇವಾಲಯವಿದ್ದು, ಸುತ್ತಲೂ ಮುಂಭಾಗ ವಿಶಾಲ ಪ್ರಾಂಗಣದಲ್ಲಿ ಮೇರಿಯ ದೇವಾಲಯವಿದ್ದು, ಸುತ್ತಲೂ ಹೂತೋಟವಿದ್ದು, ಕಾಂಪೌಂಡಿನಿಂದ ಸಂರಕ್ಷಿಸಲ್ಪಟ್ಟಿದೆ. ಚರ್ಚನ ಹತ್ತಿರದಲ್ಲಿ ಬ್ರಿಟಿಷರ ಕಾಲದಲ್ಲಿ ನಿರ್ಮಾಣ ಗೊಂಡಂತಹ ಆಸ್ಪತ್ರೆ, ಅಧಿಕಾರಿಗಳ ಮನೆಗಳಿವೆ. ಇವೆಲ್ಲವೂ ಬ್ರಿಟಿಷ್ ವಸಾಹು ಶೈಲಿ ಅಂದರೆ ಯುರೋಪ್ ವಾಸ್ತುಶೈಲಿಯಲ್ಲಿವೆ. ೨೦೦೩ರಲ್ಲಿ ಈ ಚರ್ಚ ಸಂಪೂರ್ಣ ಜೀರ್ಣೋದ್ಧಾರಗೊಂಡಿದೆ. ಪ್ರಾರ್ಥನೆ ಮಾಡಲು ಸಭಾಂಗಣ ಚಿಕ್ಕದಿದ್ದು, ವೇದಿಕೆ, ಬಲಿಪೀಠ, ವೇದಿಕೆಯ ಎಡಗಡೆ ಮತ್ತು ಬಲಗಡೆ ಮೂರ್ತಿಶಿಲ್ಪಗಳಿವೆ. ಇವೆಲ್ಲವೂ ಇತ್ತೀಚಿನ ದಿನಗಳಲ್ಲಿ ನಿರ್ಮಿಸಿದವುಗಳಾಗಿವೆ. ಪಟ್ಟದಕಲ್ಲಿನಿಂದ ೧೫ ಕಿ.ಮೀ. ಅಂತರದಲ್ಲಿ ಕಟಗಿನಹಳ್ಳಿ(ಆಸಂಗಿ)ಯಲ್ಲಿ ಬ್ರಿಟಿಷರು ನಿರ್ಮಿಸಿದ ಕ್ಯಾಥೋಲಿಕ್ ಚರ್ಚ ಮತ್ತು ಪ್ರೊಟೆಸ್ಟೆಂಟ್ ಚರ್ಚ ಎರಡೂ ಇವೆ.

**ಆಡಗಲ್**

ಆಡಗಲ್ ಗ್ರಾಮವು ತಾಲೂಕು ಕೇಂದ್ರ ಬಾದಾಮಿಯಿಂದ ಉತ್ತರಕ್ಕೆ ೫ ಕಿ.ಮೀ. ದೂರದಲ್ಲಿದ್ದು, ಬಾದಾಮಿ ಹೋಬಳಿಗೆ ಸೇರಿದೆ. ಈ ಊರು ಗುಡ್ಡದ ಮೇಲೆ ರಚನೆಯಾಗಿದೆ. ಇಲ್ಲಿಯ ಕಲ್ಲು ಬೃಹದಾಕಾರವಾಗಿದ್ದು ಮನೆ ಕಟ್ಟಲು(ಅಡ್ಡಿಯಾದುದರಿಂದ) ಅಡ್ಡವಾದುದರಿಂದ ಅಡ್ಡಕಲ್ಲು ಎಂಬುದು ಆಡಗಲ್ಲ ಆಗಿರಬಹುದು. ಇನ್ನೊಂದು ಅರ್ಥದಲ್ಲಿ ಇಲ್ಲಿರುವ ಕಲ್ಲನ್ನು ಕುಲುಮೆಯಲ್ಲಿ ಕಾದ ಕಬ್ಬಿಣವನ್ನು ಮಣಿಸಲು ಬಳಸುವ ಅಡಿಗಲ್ಲು ಎಂಬುದು ಆಡಗಲ್ಲು ಎಂದಾಗಿರಬಹುದು. ಇದು ಪ್ರಕೃತಿವಾಚಕ ಗ್ರಾಮನಾಮವಾಗಿದೆ.[೨೩] ಬಾದಾಮಿ ಪರಿಸರದಲ್ಲಿ ಹೆಚ್ಚಾಗಿ ಪ್ರಕೃತಿವಾಚಕ ಸ್ಥಳನಾಮಗಳು ಕಂಡುಬರುತ್ತವೆ.

ಆಡಗಲ್ಲ ಗ್ರಾಮದಲ್ಲಿ ಬ್ರಿಟಿಷರು ಒಂದು ಚರ್ಚಕಟ್ಟಿಸಿದ್ದಾರೆ. ಹುಬ್ಬಳ್ಳಿ ರೈಲ್ವೆ ನಿಲ್ದಾಣದಿಂದ ಗದಗ ಮಾರ್ಗವಾಗಿ ಬಾದಾಮಿಗೆ ಬ್ರಿಟಿಷ್ ಅಧಿಕಾರಿಗಳು ಬರುತ್ತಿದ್ದರು. ೧೮೮೬ರಲ್ಲಿ ಆಡಗಲ್ ಎಂಬುದು ಗುಳೇದಗುಡ್ಡ ಸಭೆಯ ಉಪಠಾಣ್ಯವಾಗಿ ಸ್ವೀಕರಿಸಲ್ಪಟ್ಟಿತು. ಈ ಸಭೆಯ ಬೆಳವಣಿಗೆಯು ತೀವ್ರಗತಿಯಲ್ಲಿರಲಿಲ್ಲ. ಇದಕ್ಕೆ ೧೯೬೪ರಲ್ಲಿ ಒಂದು ಸುಂದರವಾದ ಚಿಕ್ಕ ಚರ್ಚನ್ನು ನಿರ್ಮಿಸಲಾಯಿತು. ಇಲ್ಲಿಯೇ ಬ್ರಿಟಿಷ್ ಅಧಿಕಾರಿಗಳು ತಂಗಲು ಬಾದಾಮಿ ರೈಲ್ವೆ ನಿಲ್ದಾಣದ ಪಕ್ಕದಲ್ಲಿ ನಿರೀಕ್ಷಣಾ ಮಂದಿರವನ್ನು ನಿರ್ಮಿಸಿದ್ದಾರೆ. ಬ್ರಿಟಿಷ್ ಅಧಿಕಾರಿಗಳು

ತಂಗಲು ನಿರೀಕ್ಷಣಾ ಮಂದಿರ, ಆಡಗಲ್ ಚರ್ಚ, ಬಾದಾಮಿ ರೈಲ್ವೆ ನಿಲ್ದಾಣ ಎಲ್ಲವೂ ೧ ಕಿ.ಮೀ. ದೂರ ಅಂತರದಲ್ಲಿವೆ. ನಿರೀಕ್ಷಣಾ ಮಂದಿರದಲ್ಲಿ ವಸತಿ ಮಾಡಿದ ಅಧಿಕಾರಿಗಳಿಗೆ ಮತ್ತು ಇಲ್ಲಿಯ ಬ್ರಿಟಿಷ್ ಅಧಿಕಾರಿಗಳು ಪ್ರಾರ್ಥನೆಯನ್ನು ಮಾಡುವ ಸದುದ್ದೇಶ ಮತ್ತು ಮುಂದಾಲೋಚನೆಯಿಂದ ಬ್ರಿಟಿಷರು ಆಡಗಲ ಗ್ರಾಮದಲ್ಲಿ ಚರ್ಚ ನಿರ್ಮಿಸಿದ್ದಾರೆ. ಆದರೆ ಚರ್ಚ ಇಂದು ಹೊಸ ರೂಪ ಪಡೆದುಕೊಂಡು ಜೀರ್ಣೋದ್ಧಾರ ಗೊಂಡಿದೆ. ಸಣ್ಣ ಪುಟ್ಟ ದುರಸ್ತಿ ಕಾರ್ಯಗಳು ಆಗಾಗ ನಡೆದುದರಿಂದ ಚರ್ಚ ಸುವ್ಯವಸ್ಥಿತೆಯಿಂದ ಕೂಡಿದೆ. ಬಲಿಪೀಠ, ವೇದಿಕೆ, ಪ್ರಾರ್ಥನಾ ಸಭಾಂಗಣ, ಚರ್ಚನ ಮುಂಭಾಗ ಶಿಲುಬೆ ಆಕೃತಿ, ವಿಶಾಲ ಮೈದಾನ ಹೊಂದಿ ಕಾಂಪೌಂಡದಿಂದ ಸಂರಕ್ಷಿಸಲ್ಪಟ್ಟಿದೆ. ಇದು ಪ್ರೋಟೆಸ್ಟೆಂಟ್ ಪಂಗಡಕ್ಕೆ ಸೇರಿದ್ದು, ಸುಮಡ್ಡಿಯ ಫಾದರ್ ಅವರು ಈ ಚರ್ಚನ ಮೇಲುಸ್ತುವಾರಿ ನೋಡಿಕೊಂಡು ಬರುತ್ತಿದ್ದಾರೆ.

## ೪.೨. ಶಿಕ್ಷಣ ಸಂಸ್ಥೆಗಳು ಹಾಗೂ ಕಟ್ಟಡಗಳು

### ಶಾಲೆಗಳು

### ನಾಗರಾಳ: ಸರಕಾರಿ ಹಿರಿಯ ಪ್ರಾಥಮಿಕ ಶಾಲೆ

ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲೂಕಿನ ನಾಗರಾಳ ಗ್ರಾಮವು ತಾಲೂಕು ಕೇಂದ್ರ ಬಿಳಗಿಯಿಂದ ಪಶ್ಚಿಮಕ್ಕೆ ೫ ಕಿ.ಮೀ. ಅಂತರದಲ್ಲಿದೆ. ಕ್ರಿ.ಶ.೧೮೮೮ರಲ್ಲಿ ಬ್ರಿಟಿಷರು ಸ್ಥಾಪಿಸಿದ ವಸತಿಯ ಸಮುಚ್ಚಯವಿದೆ. ಇದುವೇ ಇಂದು ಸರಕಾರಿ ಪ್ರಾಥಮಿಕ ಶಾಲೆಯಾಗಿ ಕಾರ್ಯವನ್ನು ನಿರ್ವಹಿಸುತ್ತಿದೆ. ಚಿಕ್ಕದಾದ ಒಂದು ಕಟ್ಟಡವಿದ್ದು, ಮೇಲ್ಛಾವಣಿಗೆ ಮಂಗಳೂರು ಹೆಂಚು ಉಪಯೋಗಿಸಲಾಗಿದೆ. ಸ್ಥಳೀಯವಾಗಿ ದೊರೆಯುವ ಕೆಂಪು ಮತ್ತು ಕಪ್ಪು ಕಲ್ಲು, ಗಾರೆಗಚ್ಚು ಉಪಯೋಗಿಸಿ ಈ ಕಟ್ಟಡವನ್ನು ನಿರ್ಮಿಸಿದ್ದಾರೆ. ಈಸ್ಟ್ ಇಂಡಿಯಾ ಕಂಪನಿ ಅಧಿಕಾರಿಗಳು ತಮ್ಮ ಮಕ್ಕಳಿಗೆ ಇಂಗ್ಲಿಷ್ ಶಿಕ್ಷಣವನ್ನು ನೀಡುವ ಸಲುವಾಗಿ ೧೮೧೫ರಲ್ಲಿ ಬಾಂಬೆ ಎಜುಕೇಶನ್ ಸೊಸೈಟಿಯನ್ನು ಸ್ಥಾಪಿಸಿದರು. ಇದರ ವ್ಯಾಪ್ತಿಯು ಮುಂಬೈ ಪ್ರಾಂತ್ಯಕ್ಕೆ ಒಳಪಟ್ಟು ೧೮೪೦ರಲ್ಲಿ ದಿ ಬಾಂಬೆ ಬೋರ್ಡ್ ಆಫ್ ಎಜುಕೇಶನ್ ರಚಿಸಲ್ಪಟ್ಟಿತ್ತು. ವಿಜಾಪುರದಲ್ಲಿ ೧೮೫೨ರಲ್ಲಿ ಸರಕಾರದಿಂದ ಪ್ರಾರಂಭವಾದ ಜಿಲ್ಲೆಯ ಪ್ರಥಮ ಆಂಗ್ಲೋ ವರ್ನ್ಯಾಕ್ಯುಲರ(ಎ.ವಿ) ಶಾಲೆಯಲ್ಲಿ ಮೂರು ವರ್ಗಗಳವರೆಗೆ ಇಂಗ್ಲಿಷನ್ನು ಕಲಿಸಲಾಗುತ್ತಿತ್ತು. ೧೮೬೪ರಲ್ಲಿ ಕಲಾದಗಿ ಜಿಲ್ಲೆಯು ರಚನೆಯಾಗಿ ೧೮೬೬ರ ವೇಳೆಗೆ ಒಟ್ಟು ೪೬ ಪ್ರಾಥಮಿಕ ಶಾಲೆಗಳಿದ್ದವು. ೧೮೮೫ರ ವೇಳೆಗೆ ಒಟ್ಟು ಶಾಲೆಗಳ ಸಂಖ್ಯೆಯು ೧೫೬ ಆಯಿತು. ಮುಂದೆ ಪ್ರತಿ ಹಳ್ಳಿಗಳಿಗೂ ಶಾಲೆಯನ್ನು ತೆರೆಯುವ ಉದ್ದೇಶದಿಂದ ಬ್ರಿಟಿಷರು ೧೮೮೮ರಲ್ಲಿ ನಾಗರಾಳ

ಗ್ರಾಮದಲ್ಲಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಇದರಿಂದ ನಾಗರಾಳ ಹಾಗೂ ಸುತ್ತಮುತ್ತಲಿನ ಜನರಿಗೆ ಅಕ್ಷರ ಕಲಿಯುವಂತಾಯಿತು.

**ಗುಳೇದಗುಡ್ಡ: ಬಾಸೆಲ್ ಮಿಶನ್ ಕನ್ನಡ ಗಂಡು ಮಕ್ಕಳ ಶಾಲೆ**

ಗುಳೇದಗುಡ್ಡದಲ್ಲಿ ವೈಗ್ಲೆ ಸ್ಮಾರಕ ಚರ್ಚನ ಹತ್ತಿರದಲ್ಲಿ ಬಾಸೆಲ್ ಮಿಶನ್ ಕನ್ನಡ ಗಂಡು ಮಕ್ಕಳ ಶಾಲೆಯು ಇಂದಿಗೂ ಸುವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಕ್ರಿ.ಶ.೧೮೪೯ ರಲ್ಲಿ ರೆವರೆಂಡ್ ಜಿ.ಕೀಜರು ಬಾಸೆಲ್ ಮಿಶನರಿಗಳ ಮೂಲಕ ಸೇವೆ ಮಾಡಲು ಗುಳೇದಗುಡ್ಡಕ್ಕೆ ಆಗಮಿಸಿದಾಗ ಜನರು ಅವರ ಸೇವೆಯನ್ನು ಸ್ವೀಕರಿಸಲು ಮುಂದಾದರು. ಕ್ರಿ.ಶ.೧೮೫೦-೧೮೫೧ರಲ್ಲಿ ಕೀಜರ ಸೇವೆ ಅಧಿಕೃತವಾಗಿ ಪ್ರಾರಂಭವಾಯಿತು. ಇವರ ಪ್ರಯತ್ನದ ಫಲವಾಗಿ ಮಾರ್ಚ್ ೧, ೧೮೫೫ರಲ್ಲಿ ಬಾಸೆಲ್ ಮಿಶನ್ ಶಾಲೆಯನ್ನು ಕೀಜರು ಪ್ರಥಮವಾಗಿ ಪ್ರಾರಂಭಿಸಿದರು. ಶಿಕ್ಷಕ ಜಾನ್ ಪ್ರಭಾಕರ ಹಾಗೂ ಪ್ರಿಸ್ಕಿಲಾ ರಂಗರೇಜ ಶಿಕ್ಷಕಿಯಿಂದ ಶಿಕ್ಷಣ ಸೇವೆಯು ಬಾಸೆಲ್ ಮಿಶನ್ ಶಾಲೆಯಲ್ಲಿ ಆರಂಭವಾಯಿತು. ರೆವರೆಂಡ್ ಸೊಲೊಮನ್ ಭಾಸ್ಕರ ಶಿಕ್ಷಕರಾಗಿ ೧೦ ವರ್ಷ ಇಲ್ಲಿ ಸೇವೆ ಸಲ್ಲಿಸಿದರು. ರೆವರೆಂಡ್ ಸೊಲೊಮನ್ ದೇವಧರ ೧೮೭೭ ರಿಂದ ೧೮೮೨ ರವರೆಗೆ ಶಿಕ್ಷಕರಾಗಿ, ರೆವರೆಂಡ್ ನೊವೆರಾಜ, ರೆವರೆಂಡ್ ಫಿಲ್ಡರ್, ಸ್ಥಿಯಡ್ ಮಿಶನರಿಗಳಾಗಿದ್ದಾಗ ನಿಧಾನಪ್ಪ ರಾಮಥಾಳ ಕ್ರಿ.ಶ.೧೮೯೦ರಲ್ಲಿ ಯೋಸೇಫ್, ಧಲಭಂಜನ ಇವರೆಲ್ಲರೂ ಸೇವೆಯನ್ನು ಸಲ್ಲಿದ್ದಾರೆ. ಬಾಸೆಲ್ ಮಿಶನ್ ಶಾಲೆಯಲ್ಲಿ ಮುಖ್ಯೋಪಾಧ್ಯಾಯರು ಮತ್ತು ಸಿಬ್ಬಂದಿಗಳ ಸೇವೆಯು ನಿಜವಾಗಲೂ ಅವಿಸ್ಮರಣೀಯವಾದದ್ದು. ಚರ್ಚ ಹತ್ತಿರದಲ್ಲಿ ಶಾಲೆ ಇರುವುದರಿಂದ ಬ್ರಿಟಿಷರು ತಮ್ಮ ಮಕ್ಕಳಿಗಾಗಿ ಹಾಗೂ ಸ್ಥಳೀಯರಿಗೆ ಶಿಕ್ಷಣವನ್ನು ನೀಡಲು ಉದ್ದೇಶ ಹೊಂದಿರಬಹುದು.

**ಗುಳೇದಗುಡ್ಡ: ಸೆಂಟ್ ಝೇವಿಯರ್ಸ್ ಶಾಲೆ**

ಗುಳೇದಗುಡ್ಡದಿಂದ ೬ ಮೈಲು(೯.೬ ಕಿ.ಮೀ) ಅಂತರದಲ್ಲಿರುವ ಕಟಗಿನಹಳ್ಳಿ(ಆಸಂಗಿ) ಯಲ್ಲಿ ಕ್ರಿ.ಶ.೧೮೬೩ರಲ್ಲಿ ಸೆಂಟ್ ಝೇವಿಯರ್ಸ್ ಚರ್ಚ ಸ್ಥಾಪಿಸಲಾಯಿತು. ನಂತರದಲ್ಲಿ ಗುಳೇದಗುಡ್ಡ ಉಪಠಾಣ್ಯಕ್ಕೆ ಈ ಚರ್ಚ್‌ನ್ನು ಸೇರಿಸಲಾಯಿತು. ಇದು ಕ್ಯಾಥೋಲಿಕ್ ಪಂಗಡಕ್ಕೆ ಸೇರಿದೆ. ಕ್ರಿ.ಶ.೧೯೧೫ರಲ್ಲಿ ಫಾ॥ ಫ್ರಾಂಕನ್ ಕ್ಯಾಥೋಲಿಕ್ ಸಭೆಗೆ ಬುನಾದಿಯನ್ನು ಹಾಕಿದ ನಂತರ ಫಾ॥ ಜಾರ್ಜ್ ಡೇಸಾರವರು ಹಳ್ಳಿಗಳಿಗೆ ಹೋಗಿ ವಿದ್ಯೆ ಹೇಳಿ ಬಡವರ ಸೇವೆ ಯನ್ನು ಮಾಡುತ್ತಾ ಆರೋಗ್ಯ ಕೇಂದ್ರ ನಿರ್ಮಾಣ,ಶಾಲೆಗಳ ಆರಂಭ ಇತ್ಯಾದಿ ಸಮಾಜ ಸೇವೆಯ ಕಾರ್ಯದಲ್ಲಿ ತೊಡಗಿದರು. ಸೆಂಟ್ ಝುವಿಯರ್ಸ್ ಚರ್ಚನ ಆವರಣದಲ್ಲಿಯೇ

ಶಾಲೆಯು ಇರುವುದು ವಿಶೇಷವಾಗಿದೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸೆಂಟ್ ಝೇವಿಯರ್ಸ್ ಶಾಲೆಯು ಸಣ್ಣ ಕಟ್ಟಡದಲ್ಲಿ ಶಿಕ್ಷಣ ಸೇವೆಯನ್ನು ಪ್ರಾರಂಭಿಸಿ ಇಂದು ವಿಶಾಲ ಕಟ್ಟಡವನ್ನು ಹೊಂದಿ ಹಲವಾರು ವಿದ್ಯಾರ್ಥಿಗಳಿಗೆ ಜ್ಞಾನಾರ್ಜನೆಯನ್ನು ಮಾಡುತ್ತಿದೆ. ಮೂಲ ಸ್ವರೂಪದ ಶಾಲೆಯ ಕಟ್ಟಡ ಇಂದು ಸಂಪೂರ್ಣವಾಗಿ ಅಗತ್ಯಕ್ಕೆ ತಕ್ಕಂತೆ ಮಾರ್ಪಾಡು ಮಾಡಿ ಜೀರ್ಣೋದ್ಧಾರ ಮಾಡಲಾಗಿದೆ.

**ಸುಮಡ್ಡಿ: ಬಾಸೆಲ್ ಮಿಶನ್ ಶಾಲೆ**

ಗುಳೇದಗುಡ್ಡದಿಂದ ೩ ಕಿ.ಮೀ. ದೂರದ ಸುಮಡ್ಡಿಯಲ್ಲಿ ಕ್ರಿ.ಶ.೧೯೦೩ರಲ್ಲಿ ಬಾಸೆಲ್ ಮಿಶನ್ ಬಾಲಕಿಯರ ವಸತಿ ಶಾಲೆ ಹಾಗೂ ಐಸ್ಲೆಲ್ಡರ್ ಸ್ಮಾರಕ್ ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಸುಮಡ್ಡಿ ಸುಂದರ ಪರಿಸರವನ್ನು ಒಳಗೊಂಡ ಎತ್ತರದ ಪ್ರದೇಶವಾಗಿರುವುದರಿಂದ ಬ್ರಿಟಿಷ್ ಅಧಿಕಾರಿಗಳು ಇಲ್ಲಿ ಬಂಗಲೆ, ಚರ್ಚ, ಶಾಲೆ, ವಸತಿ ನಿಲಯಗಳನ್ನು ನಿರ್ಮಿಸಿದ್ದಾರೆ. ಇವತ್ತಿಗೂ ಸಹ ವಸತಿ ಶಾಲೆಯು ಅತ್ಯಂತ ತ್ವರಿತಗತಿಯಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯನ್ನು ನೀಡುವ ಮೂಲಕ ಸಮಾಜ ಸೇವೆಯಲ್ಲಿ ನಿರತವಾಗಿದೆ. ಬಾಸೆಲ್ ಮಿಶನ್ ಶಾಲೆಯು 'ಯು' ವಿನ್ಯಾಸದಲ್ಲಿದ್ದು, ವಸತಿ ಸಹಿತ ಬಾಲಕಿಯರ ಶಾಲೆ ಸುಮಡ್ಡಿಯಲ್ಲಿರುವುದರಿಂದ ಬಡ ಹೆಣ್ಣು ಮಕ್ಕಳ ವಿದ್ಯಾರ್ಜನೆಗೆ ತುಂಬಾ ಸಹಾಯಕಾರಿಯಾಗಿದೆ. ಬ್ರಿಟಿಷರು ಸುಮಡ್ಡಿಯ ಎತ್ತರದ ಪ್ರದೇಶದಲ್ಲಿ ಚರ್ಚ, ಶಾಲೆ, ಬಂಗಲೆಯನ್ನು ನಿರ್ಮಿಸಿರುವುದನ್ನು ಗಮನಿಸಿದಾಗ ಬ್ರಿಟಿಶ್ ಅಧಿಕಾರಿಗಳು ಪರಿಸರ ಪ್ರೇಮಿಗಳಾಗಿದ್ದರು ಎಂಬ ಮಹತ್ವದ ವಿಚಾರ ತಿಳಿಯುತ್ತದೆ. ಇದರ ಜೊತೆಗೆ ಇನ್ನೊಂದು ಹೊಸ ವಿಚಾರವೆಂದರೆ, ಬ್ರಿಟಿಷರು ತಮ್ಮ ಅಧಿಕಾರ ಪ್ರಭುತ್ವ ಯೋಜನೆಗಳು, ಸ್ಥಳೀಯರಿಗೆ ಗೊತ್ತಾಗದ ರೀತಿಯಲ್ಲಿ ಗುಪ್ತವಾಗಿ ರೂಪಿಸುವಂತಹ ಹಲವಾರು ವಿಚಾರಗಳು, ಚರ್ಚೆ, ಹೊಸ ತಂತ್ರಗಳ ಕುರಿತು ರೂಪರೇಶೆಗಳು ಇಲ್ಲಿ ರಚಿಸಿ ಸಾರ್ವಜನಿಕರಿಗೆ ಜಾರಿ ಗೊಳಿಸುತ್ತಿದ್ದರು. ಕಟ್ಟಡ ನಿರ್ಮಿಸಲು ಬ್ರಿಟಿಷರು ಮಹತ್ವದ ಸ್ಥಳಗಳನ್ನು ಆಯ್ಕೆ ಮಾಡಿರುವ ಮುಖ್ಯ ಉದ್ದೇಶ ತಮ್ಮ ಲಾಭ, ಸಕಲ ಸೌಕರ್ಯಗಳು ಕೈಗೆಟುಕುವಂತಿರಬೇಕು ಎಂಬುದಾಗಿದೆ.

ಬ್ರಿಟಿಷರ ಆಡಳಿತದ ಅವಧಿಯಲ್ಲಿ ಅನಾಥಾಶ್ರಮ ಕೂಡಾ ಇದೇ ಶಾಲೆಯಲ್ಲಿ ಆರಂಭವಾಗಿದೆ ಎಂಬುದಕ್ಕೆ ಶಾಲೆಯ ಅವರಣದಲ್ಲಿ ಫಲಕದಲ್ಲಿಯ ಈಸ್ವಿ ನೋಡಿದಾಗ ಗೊತ್ತಾಗುತ್ತಿದೆ. ಇಂದಿಗೂ ಅನಾಥರಿಗೆ ಆಶ್ರಯ ನೀಡಿ ಅನ್ನ, ಅಕ್ಷರ, ಆಶ್ರಯವನ್ನು ನೀಡುತ್ತಾ ಸಮಾಜ ಕಾರ್ಯದಲ್ಲಿ ತೊಡಗಿಸಿಕೊಂಡಿದೆ.

**ಕಲಾದಗಿ: ಸರಕಾರಿ ಕನ್ನಡ ಗಂಡು ಮಕ್ಕಳ ಮಾದರಿ ಪ್ರಾಥಮಿಕ ಶಾಲೆ**

ಬ್ರಿಟಿಷರು ಕಲಾದಗಿಯಲ್ಲಿ ನೆಲೆ ನಿಂತು ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡು ಸೈನಿಕ ನೆಲೆಯನ್ನು ಸ್ಥಾಪಿಸಿದರು. ದಂಗೆಗಳನ್ನು ಸೆದೆ ಬಡಿದು ಬ್ರಿಟಿಷ್ ಸರಕಾರದ ವಿರೋಧಿಗಳನ್ನು ವಿಚಾರಣೆಗೊಳಪಡಿಸಲು ಕಲಾದಗಿಯಲ್ಲಿ ಕ್ರಿ.ಶ.೧೮೬೦ರಲ್ಲಿ ನ್ಯಾಯಾಲಯದ ಕಟ್ಟಡ ನಿರ್ಮಿಸಿದರು. ಇದು ವಿಶಾಲವಾದ ಕಟ್ಟಡವಾಗಿದ್ದು, ಗೋಡೆ, ಮೇಲ್ಛಾವಣೆ, ಕಂಬ ಎಲ್ಲವೂ ಆಧುನಿಕ ಕಟ್ಟಡದ ಸ್ಪರ್ಶಕ್ಕೆ ಒಳಗಾಗಿವೆ. ಇಲ್ಲಿ ಅಪರಾಧಿಗಳನ್ನು ವಿಚಾರಣೆಗೊಳಪಡಿಸಿ ತಪ್ಪಿತಸ್ಥರಿಗೆ ಬಾಗಲಕೋಟೆಯ ನೆರೆಮನೆ(ಜೈಲು)ಗೆ ಕಳುಹಿಸಲಾಗುತ್ತಿತ್ತು. ಈ ಕಟ್ಟಡ ಇಂದು ಸರಕಾರಿ ಮಾದರಿ ಪ್ರಾಥಮಿಕ ಶಾಲೆಯಾಗಿ ಕಾರ್ಯವನ್ನು ನಿರ್ವಹಿಸುತ್ತಾ ನೂರಾರು ವಿದ್ಯಾರ್ಥಿಗಳಿಗೆ ಸಹಾಯಕಾರಿಯಾಗಿದೆ. ಬೆಳಗಾವಿಯಿಂದ ನ್ಯಾಯಾಧೀಶರು ಕಲಾದಗಿಗೆ ಬಂದು ತೀರ್ಪನ್ನು ಕೊಡುತ್ತಿದ್ದರು. ಬ್ರಿಟಿಷ ಅಧಿಕಾರಿಗಳಿಗೆ ವಸತಿ ಗೃಹಗಳು, ಉನ್ನತ ಅಧಿಕಾರಿಗಳು ತಂಗಲು ನಿರೀಕ್ಷಣಾ ಮಂದಿರ(ಬಂಗಲೆ) ಸಹ ಇಲ್ಲಿ ಸುವ್ಯವಸ್ಥಿತವಾಗಿ ನಿರ್ಮಿಸಲಾಗಿದೆ. ಕ್ರಿ.ಶ.೧೮೫೭ರಲ್ಲಿ ನಡೆದ ಹಲಗಲಿ ಬಂಡಾಯದಲ್ಲಿ ಸೆರೆಸಿಕ್ಕ ಬೇಡ ಬಂಟರನ್ನು ಇದೇ ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸಿ ಪ್ರಮುಖರನ್ನು ಮುಧೋಳ ಮತ್ತು ಹಲಗಲಿಯಲ್ಲಿ ಗಲ್ಲಿಗೇರಿಸಿ, ಉಳಿದವರನ್ನು ಬಾಗಲಕೋಟೆಯ ಸೆರೆಮನೆಗೆ ಕಳುಹಿಸ ಲಾಯಿತು. ಇವತ್ತಿನ ಶಾಲೆ ಬ್ರಿಟಿಷರ ಆಡಳಿತದಲ್ಲಿ ಕೆಲವು ಬಾರಿ ತಾತ್ಕಾಲಿಕ ನ್ಯಾಯಾಲಯವಾಗಿ ಕಾರ್ಯ ನಿರ್ವಹಿಸುತ್ತಿತ್ತು ಎಂಬುದು ಸ್ಥಳೀಯರ ಅಭಿಪ್ರಾಯವಾಗಿದೆ.

**ಹುಲ್ಯಾಳ: ಸರಕಾರಿ ಹಿರಿಯ ಪ್ರಾಥಮಿಕ ಶಾಲೆ**

ಜಮಖಂಡಿ ತಾಲೂಕಿನ ಹುಲ್ಯಾಳ ಗ್ರಾಮದಲ್ಲಿ ಶಾಲೆಯನ್ನು ಬ್ರಿಟಿಷರು ಪ್ರಾರಂಭಿಸಿದಾಗ ವ್ಯವಸ್ಥಿತವಾದ ಕಟ್ಟಡವನ್ನು ನಿರ್ಮಿಸಿದ್ದಾರೆ. ಇತ್ತೀಚೆಗೆ ಈ ಶಾಲೆಯ ಕಟ್ಟಡ ಶತಮಾನೋತ್ಸವ ಸಂಭ್ರಮಾಚರಣೆಯನ್ನು ಯಶಸ್ವಿಗೊಳಿಸಿತು. ಜಮಖಂಡಿ ಪಟವರ್ಧನ ರಾಜರ ಸಹಾಯ ಸಹಕಾರದೊಂದಿಗೆ ಬ್ರಿಟಿಷರು ಹಲವಾರು ರೀತಿಯಾಗಿ ಜನಮುಖಿ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ. ಜಮಖಂಡಿ ಪರಿಸರದಲ್ಲಿ ನಿರ್ಮಾಣಗೊಂಡಂತಹ ಬಹುತೇಕ ಸ್ಮಾರಕಗಳನ್ನು ಪಟವರ್ಧನ ರಾಜರು ನಿರ್ಮಿಸಿದ್ದಾರೆ. ಆದರೆ ಎಲ್ಲಾ ಸ್ಮಾರಕಗಳ ರಚನೆ, ವಿನ್ಯಾಸ, ವಾಸ್ತು ಶೈಲಿಗಳೆಲ್ಲಾ ಲಕ್ಷಣಗಳನ್ನು ಗಮನಿಸಿದಾಗ ವಸಾಹತು ಶೈಲಿಯಲ್ಲಿವೆ. ಬ್ರಿಟಿಷ್ ವಾಸ್ತುತಜ್ಞರು, ಇಂಜಿನಿಯರ್‌ಗಳ ತಾಂತ್ರಿಕತೆಯ ಮೂಲಕ ಸ್ಮಾರಕಗಳು ರಚನೆಯನ್ನೊಳಗೊಂಡು ಬ್ರಿಟಿಷರು ನಿರ್ಮಿಸಿದ್ದಾರೆ. ಇಂತಹ ವಸಾಹತು ಶೈಲಿಯ ಸ್ಮಾರಕಗಳು ಇಂದಿಗೂ ಜಮಖಂಡಿ ಪರಿಸರ ದಲ್ಲಿರುವುದನ್ನು ಗುರುತಿಸಲಾಗಿದೆ. ಹುಲ್ಯಾಳ ಶಾಲೆಯ ಕಟ್ಟಡ ಕೆಂಪು ಕಲ್ಲು, ಸೀಮೆಸುಣ್ಣ,

ಗಾರೆಗಚ್ಚು, ಕಟ್ಟಿಗೆಯನ್ನು ಬಳಸಿ ಕಟ್ಟಲಾಗಿದೆ. ಮೇಲ್ಛಾವಣಿಗೆ ಮಂಗಳೂರು ಹೆಂಚು ಉಪಯೋಗಿಸಲಾಗಿದೆ. ಅಲ್ಲಲ್ಲ ಸಣ್ಣಪುಟ್ಟ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡಿದ್ದುದರಿಂದ ಶಾಲೆಯ ಕಟ್ಟಡ ನವನವೀನವಾಗಿ ಕಂಗೊಳಿಸುತ್ತಿದೆ.

**ಮುಷ್ಠಿಗೇರಿ: ಶಬ್ಬತ್ ಶಾಲೆ**

ಶಬ್ಬತ್ ಅಥವಾ ಸಬ್ಬತ್ ಎಂದರೆ ವಿಶ್ರಾಂತಿಯ ದಿನ, ಸಾರ್ವತ್ರಿಕ ರಜಾ ದಿವಸವಾಗಿದೆ. ಕ್ರೈಸ್ತರ ಸಂಪ್ರದಾಯದಲ್ಲಿ ಶುಕ್ರವಾರ ಸಂಜೆ ಪ್ರಾರಂಭವಾಗಿ ಶನಿವಾರ ಸಂಜೆಗೆ ಸಬ್ಬತ್ ದಿನ ಅಂತ್ಯಗೊಳ್ಳುತ್ತದೆ. ಇದು ಪವಿತ್ರ ದಿನ, ವಾರದ ಏಳನೇ ದಿನ, ದೇವರ ದಿನ ಎಂದು ಭಾವಿಸಲಾಗುತ್ತದೆ. ಕ್ರೈಸ್ತರು ಯೇಸು ಸ್ವಾಮಿಯ ಪುನರುತ್ಥಾನ ದಿನವನ್ನು ಯೇಸು ಸ್ಮರಣಾರ್ಥ ಭಕ್ತರು ಸಭೆ ಸೇರಿ ಪ್ರಾರ್ಥನೆ ಮಾಡುವ ದಿನವನ್ನು ಪ್ರಭುವಿನ ದಿನ ಭಾನುವಾರ ಎಂದು ಕರೆದುಕೊಂಡರು. ಮುಷ್ಠಿಗೇರಿ ಗ್ರಾಮದಲ್ಲಿ ಚರ್ಚ ಪ್ರಾರಂಭಗೊಂಡ ನಂತರ ಕ್ರಿ.ಶ.೧೮೮೮ರಲ್ಲಿ ಶಬ್ಬತ್ ಶಾಲೆಯನ್ನು ಪ್ರಾರಂಭಿಸಲಾಯಿತು. ಇಂದಿಗೂ ಸಹ ಸಬ್ಬತ್ ಶಾಲೆಯಲ್ಲಿ ಪ್ರತಿ ಭಾನುವಾರ ನೂರಕ್ಕೂ ಹೆಚ್ಚು ಮಕ್ಕಳು ಚರ್ಚಿನ ಪಕ್ಕದಲ್ಲಿರುವ ಶಾಲೆಯಲ್ಲಿ ಸೇರುತ್ತಾರೆ. ಮಕ್ಕಳಿಗೆ ಬೈಬಲ್‌ನಲ್ಲಿ ಬರುವ ಕಥೆಗಳನ್ನು ಹೇಳಿಕೊಡಲಾಗುತ್ತಿದೆ.

ಮುಷ್ಠಿಗೇರಿ ಗ್ರಾಮದಲ್ಲಿ ಗ್ರೂಸ್‌ಮನ್ ಚರ್ಚ ಎದುರಿಗೆ ಕ್ರಿ.ಶ.೧೮೪೯ರಲ್ಲಿ ಸ್ಥಾಪಿಸಿರುವ ಸರಕಾರಿ ಪ್ರಾಥಮಿಕ ಶಾಲೆಯು ಸಹವಿದೆ. ಇದು ಕೂಡಾ ವಸಾಹತು ಶೈಲಿಯ ಲಕ್ಷಣಗಳನ್ನು ಹೊಂದಿದ ಸ್ಮಾರಕವಾಗಿತ್ತು. ಆದರೆ ಇಂದು ಹೆಚ್ಚಿನ ವಿದ್ಯಾರ್ಥಿಗಳ ಹಾಜರಾತಿಗನುಗುಣವಾಗಿ ಶಾಲೆಯ ಕಟ್ಟಡ ವಿಸ್ತರಿಸಲಾಗಿದೆ. ಮೂಲ ಸ್ವರೂಪದ ಜೀರ್ಣೋದ್ಧಾರಗೊಂಡು ಇಂದು ಅಕ್ಷರ ಜ್ಞಾನ ಬಿತ್ತರಿಸುವ ಕಾಯಕದಲ್ಲಿ ಈ ಶಾಲೆ ನಿರಂತರವಾಗಿ ತೊಡಗಿಸಿಕೊಂಡಿದೆ ಎಂದು ಹೇಳಬಹುದು. ಈ ಪ್ರದೇಶದಲ್ಲಿ ಇದು ದೊಡ್ಡ ಶಾಲೆಯಾಗಿದೆ.

**ತೇರದಾಳ**

ತೇರದಾಳದಲ್ಲಿ ಬ್ರಿಟೀಷರು, ಅಂಚೆ ಕಚೇರಿ, ಉಪ ತಹಸೀಲ್ದಾರ ನಾಡ ಕಾರ್ಯಾಲಯ, ಸರಕಾರಿ ಕನ್ನಡ ಗಂಡು ಮಕ್ಕಳ ಮಾದರಿ ಪ್ರಾಥಮಿಕ ಶಾಲೆ ಇತ್ಯಾದಿಗಳನ್ನು ನಿರ್ಮಿಸಿದ್ದಾರೆ. ಶಾಲೆಯ ಕಟ್ಟಡಕ್ಕೆ ಸ್ಥಳೀಯವಾಗಿ ದೊರೆಯುವ ಕಪ್ಪು, ಕೆಂಪು, ಗಾರೆ ಗಚ್ಚು, ಸೀಮೆಸುಣ್ಣ, ಕಟ್ಟಿಗೆಯನ್ನು ಉಪಯೋಗಿಸಿ ಕಟ್ಟಲಾಗಿದೆ. ಮೇಲು ಹೊದಿಕೆಗೆ ಮಂಗಳೂರು ಹೆಂಚು ಹಾಕಲಾಗಿದ್ದು, ಕಲ್ಲಿನ ಕಂಬಗಳನ್ನೊಳಗೊಂಡ ವಿಶಾಲ ಪ್ರಾಂಗಣ, ಕಮಾನುಗಳನ್ನು ಹೊಂದಿದೆ. ವಾತಾವರಣಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಈ ಸ್ಮಾರಕವನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಕೆಳಮಹಡಿ, ಮೇಲಮಹಡಿಯು ವ್ಯವಸ್ಥಿತ ಕಟ್ಟಡ ಇದಾಗಿದ್ದು, ಈಗಲು ಸಾರ್ವಜನಿಕ

ಸೇವೆಗೆ ಸೂಕ್ತವಾದ ಸ್ಮಾರಕವಾಗಿದೆ. ಬ್ರಿಟಿಷರು ನಿರ್ಮಿಸಿದ ಸ್ಮಾರಕಗಳು ಕೇವಲ ತಮ್ಮ ಸ್ವಂತಕ್ಕೆ ಅಷ್ಟೇ ಅಲ್ಲದೇ ಸಾರ್ವಜನಿಕರ ಹಿತಾಸಕ್ತಿಗಾಗಿ ಸೇವೆ ಸಲ್ಲಿಸಲು ಆಸ್ಪತ್ರೆ, ಶಾಲೆ, ನಾಡ ಕಚೇರಿ, ಸೇತುವೆ ಮುಂತಾದ ಸ್ಮಾರಕಗಳನ್ನು ನಿರ್ಮಿಸಿದ್ದಕ್ಕೆ ರಬಕವಿ-ಬನಹಟ್ಟಿ, ತೇರದಾಳ ಸುತ್ತಮುತ್ತಲಿನ ಪರಿಸರದಲ್ಲಿ ವಸಾಹತು ಕಾಲದ ಸ್ಮಾರಕಗಳು ಸಾಕ್ಷಿಯಂತಿವೆ. ವಸಾಹತು ಕಾಲದ ಸ್ಮಾರಕಗಳು ಕೆಲವೊಂದು ಅವಸಾನದಂಚಿನಲ್ಲಿವೆ. ಹಾಗಾಗಿ ಅವುಗಳನ್ನು ರಕ್ಷಿಸುವ ಹೊಣೆ ಎಲ್ಲರ ಮೇಲಿದೆ ಎಂಬ ಜಾಗೃತಿಯುಂಟಾಗ ಬೇಕಾಗಿದೆ. ತೇರದಾಳ, ರಬಕವಿ-ಬನಹಟ್ಟಿ ಸಂಪದ್ಭರಿತ ಪ್ರದೇಶಗಳಾಗಿರುವುದರಿಂದ ಬ್ರಿಟಿಷರಿಗೆ ಹೆಚ್ಚಿನ ಪ್ರಮಾಣದಲ್ಲಿ ಆದಾಯ ಅಂದರೆ ಆರ್ಥಿಕ ಮೂಲ ಶೇಖರಣೆಗೊಳ್ಳುತ್ತಿತ್ತು.

### ೪.೩. ಆಡಳಿತ ಕಟ್ಟಡಗಳು

**ಬಾಗಲಕೋಟೆ: ತಾಲೂಕು ಪಂಚಾಯತಿ ಕಾರ್ಯಾಲಯ**

ಬ್ರಿಟಿಷರು ತಮ್ಮ ಆಡಳಿತದ ಅವಧಿಯಲ್ಲಿ ವಸಾಹತು ಕಾಲದ ಸ್ಮಾರಕಗಳಾದ ಚರ್ಚ, ನಿರೀಕ್ಷಣಾ ಮಂದಿರ, ಸೇತುವೆ, ಆಸ್ಪತ್ರೆ, ಶಾಲೆ, ಸೆರೆಮನೆ(ಜೈಲು) ಆಡಳಿತ ಕಚೇರಿಗಳನ್ನು ತಮ್ಮ ಅನುಕೂಲಕ್ಕಾಗಿ ಹಾಗೂ ಸಾರ್ವಜನಿಕರೂ ಅನುಕೂಲವಾಗುವ ದೃಷ್ಟಿಯನ್ನು ಇಟ್ಟುಕೊಂಡು ನಿರ್ಮಿಸಿದ್ದಾರೆ. ಬಾಗಲಕೋಟೆಯ ನಗರದ ಮಧ್ಯಭಾಗದಲ್ಲಿ ತಾಲೂಕು ಪಂಚಾಯತಿ ಕಾರ್ಯಾಲಯವಿದೆ. ಕಪ್ಪು ಮತ್ತು ಕೆಂಪು ಕಲ್ಲು, ಗಾರೇಗಚ್ಚು, ಸೀಮೆಸುಣ್ಣವನ್ನು ಉಪಯೋಗಿಸಿ ಸ್ಮಾರಕ ನಿರ್ಮಿಸಿದ್ದಾರೆ. ಮಂಗಳೂರು ಹೆಂಚು ಈ ಕಟ್ಟಡದ ಮೇಲ್ಹಾವಣಿಗೆ ಹಾಕಲಾಗಿದೆ. ಹೆಂಚಿನ ಕೆಳಭಾಗಕ್ಕೆ ದಪ್ಪನಾದ ಕಟ್ಟಿಗೆಯನ್ನು ಹಾಕಲಾಗಿದೆ. ಕಟ್ಟಡದ ಮಧ್ಯಭಾಗದಲ್ಲಿ ಎತ್ತರವಾಗಿದ್ದು, ಕಟ್ಟಿಗೆಯಿಂದ ನಾಲ್ಕು ಕಡೆಗೆ ಇಳಿಜಾರು ಮಾಡಲಾಗಿದೆ. ಈ ಕಟ್ಟಿಗೆಯ ಜಾಡಿನ ಮೇಲೆ ಇಳಿಜಾರಿನನುಕ್ರಮವಾಗಿ ಮಂಗಳೂರು ಹೆಂಚು ಹಾಕಲಾಗಿದೆ. ಮಳೆಯ ನೀರು ಸರಾಗವಾಗಿ ಹೋಗಲು ಮತ್ತು ಬೇಸಿಗೆಯ ಸಮಯದಲ್ಲಿ ಗಾಳಿ, ಬೆಳಕು, ಅಡೆತಡೆಯಿಲ್ಲದೇ ಒಳಗಡೆ ಬರುವಂತೆ ಬ್ರಿಟಿಷರು ಈ ಕಟ್ಟಡ ನಿರ್ಮಿಸಿದ್ದಾರೆ. ಈ ಸ್ಮಾರಕ ಇಂದಿಗೂ ಸಹ ಸುವ್ಯವಸ್ಥೆಯಿಂದ ಕೂಡಿದೆ. ಇಡೀ ಜಿಲ್ಲೆಗೆ ಹೃದಯ ಭಾಗದಂತೆ ಈ ಕಟ್ಟಡ ಕಾರ್ಯಾಚರಣೆಯಲ್ಲಿದ್ದಿತು. ಬಾಗಲಕೋಟೆ ಮುಳುಗಡೆ ನೀರಿನಲ್ಲಿ ಎಷ್ಟೋ ವಸಾಹತು ಕಾಲದ ಸ್ಮಾರಕಗಳು ಆಹುತಿಯಾಗಿವೆ. ಈ ತಾಲೂಕು ಪಂಚಾಯತಿ ಕಾರ್ಯಾಲಯ ಸುರಕ್ಷತೆಯಿರುವುದರಿಂದ ಇಂದಿಗೂ ಈ ಸ್ಮಾರಕ ಕಾರ್ಯಚರಿಸುತ್ತದೆ.

### ಬಾಗಲಕೋಟೆ: ತಹಶೀಲ್ದಾರ ಕಾರ್ಯಾಲಯ

ಬಾಗಲಕೋಟೆಯ ಇಂದಿನ ತಹಶೀಲ್ದಾರ ಕಾರ್ಯಾಲಯವನ್ನು ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸೆರೆಮನೆಯಾಗಿತ್ತು. ಮುಖ್ಯ ದ್ವಾರದಲ್ಲಿ ಒಂದು ಮಾರ್ಗಸೂಚಿ ಕಲ್ಲನ್ನು ನಿಲ್ಲಿಸಲಾಗಿದೆ. ಅದರಲ್ಲಿ ಬಾಗಲಕೋಟೆ–೧೬, ಬೆಳಗಾವಿ–೭೧, ಹುನಗುಂದ–೪೪ ಎಂದು ಕಲ್ಲಿನಲ್ಲಿ ಕೆತ್ತಲಾಗಿದೆ. ಬಾಗಲಕೋಟೆಯಿಂದ ಇತರ ಊರುಗಳಿಗೆ ಇರುವ ಅಂತರದ ಮಾರ್ಗಸೂಚಿಯಾಗಿ ದಿಕ್ಕನ್ನು ತೋರಿಸುವ ಪ್ರತೀಕ ಈ ಕಲ್ಲನ್ನು ನೆಡಲಾಗಿದೆ. ಇವುಗಳಿಗೆ ಮೈಲುಗಲ್ಲುಗಳೆಂದು ಕರೆಯಲಾಗುತ್ತಿತ್ತು. ಸೆರೆಮನೆಯ ಪ್ರತಿಯೊಂದು ಕೋಣೆಗಳು ಅತ್ಯಂತ ಗಟ್ಟಿಮುಟ್ಟಾಗಿವೆ. ಒಟ್ಟು ೪೦ ರಿಂದ ೫೦ ಕೋಣೆಗಳ ಕಾರ್ಯಗೃಹ ಇದಾಗಿತ್ತು. ಆಂಗ್ಲಭಾಷೆಯ U ಆಕಾರದಲ್ಲಿ ಕಟ್ಟಡವನ್ನು ನಿರ್ಮಿಸಿದ್ದಾರೆ. ಮುಂದುಗಡೆ ವಿಶಾಲವಾದ ಪ್ರಾಂಗಣವಿದೆ. ಹತ್ತಿರದಲ್ಲಿಯೇ ಧ್ವಜಸ್ತಂಭವು ಸಹವಿದೆ. ಇಂದು ಈ ಎಲ್ಲಾ ಕೋಣೆಗಳನ್ನು ಅಧಿಕಾರಿಗಳು ಅಗತ್ಯಕ್ಕೆ ತಕ್ಕಂತೆ ಮಾರ್ಪಾಡು ಮಾಡಿದ್ದಾರೆ. ಈ ದೊಡ್ಡ ಕಾರ್ಯಾಲಯಕ್ಕೆ ಪ್ರವೇಶಿಸಲು ಒಂದೇ ಮುಖ್ಯ ದ್ವಾರವಿದೆ. ಒಳಗಡೆ ಹೋದಂತೆಲ್ಲಾ ಎತ್ತರದ ಗೋಡೆಗಳಿಂದ ಪ್ರತ್ಯೇಕ ಕೊಠಡಿಗಳನ್ನು ನಿರ್ಮಿಸಲಾಗಿದೆ. ಕಮಾನುಗಳು ಅತ್ಯಂತ ಸುಂದರವಾಗಿ ನಿರ್ಮಾಣ ವಾಗಿರುವುದು ಇಲ್ಲಿ ತುಂಬಾ ವಿಶೇಷವೆನಿಸುತ್ತದೆ. ಬೆಳಗಾವಿಯಿಂದ ಬ್ರಿಟಿಷರು ಬಾಗಲಕೋಟೆಗೆ ಬಂದು ಹಲವಾರು ಪ್ರದೇಶಗಳಿಗೆ ಸಾಗಲು ಇಲ್ಲಿ ಮುಖ್ಯ ದ್ವಾರದಲ್ಲಿ ಕಿ.ಮೀ. ಸಂಕೇತ ಸೂಚಿಸುವ ನೆಡುಗಲ್ಲು ನಿಲ್ಲಿಸಲಾಗಿದೆ.

### ಸರ್ವೋದಯ ವಾಚನಾಲಯ

ಕ್ರಿ.ಶ.೧೮೬೮ರಲ್ಲಿ ಸಾರ್ವಜನಿಕ ಗ್ರಂಥಾಲಯವು "ಸರ್ವೋದಯ ವಾಚನಾಲಯವೆಂದು" ನಿರ್ಮಾಣವಾಗಿದೆ. ಈ ವಾಚನಾಲಯ ಎಡಗಡೆ ನಾಲ್ಕು ಕಮಾನು, ಬಲಗಡೆ ನಾಲ್ಕು ಕಮಾನು, ಮುಂಭಾಗದಲ್ಲಿ ಮೂರು ಕಮಾನು, ಮೇಲ್ಗಡೆ ಮಹಡಿಯನ್ನು ಹೊಂದಿದ್ದು ಬ್ರಿಟಿಷರು ಶೈಲಿ ತಂತ್ರಜ್ಞಾನ ಅಳವಡಿಸಿ ನಿರ್ಮಿಸಿದ ಸ್ಮಾರಕ ಇದಾಗಿದೆ. ಈ ವಾಚನಾಲಯದ ಬಲಗಡೆ ಬಾಲಕೃಷ್ಣದಾಸ ಟೇನಿಸ್ ಕೋರ್ಟು ಕ್ರಿ.ಶ.೧೯೨೫ರಲ್ಲಿ ಆರಂಭವಾಗಿದೆ. ಓದು ಮತ್ತು ಕ್ರೀಡೆ ಎರಡು ಒಂದೇ ಸ್ಥಳದಲ್ಲಿ ನಡೆಯಬೇಕೆಂಬ ಮೂಲ ಉದ್ದೇಶದಿಂದ ವಾಚನಾಲಯ ಮತ್ತು ಟೆನಿಸ್ ಕೋರ್ಟ್ ನಿರ್ಮಿಸಲಾಗಿದೆ. ಪ್ರಸ್ತುತ ಇಂದು ಈ ವಾಚನಾಲಯ ವ್ಯಾಯಾಮ ಶಾಲೆಯಾಗಿ ಕಾರ್ಯನಿರ್ವಹಿಸುತ್ತಿದೆ. ವಾಚನಾಲಯಕ್ಕೆ ಸ್ವಲ್ಪ ದೂರದಲ್ಲಿ ನಿರೀಕ್ಷಣಾ ಮಂದಿರ, ಚರ್ಚ, ಆಸ್ಪತ್ರೆ, ಆಡಳಿತ ಕಚೇರಿ, ನಿರ್ಮಾಣವಾಗಿರುವುದರಿಂದ ಬ್ರಿಟಿಷರು ಆಡಳಿತದ ಅನುಕೂಲದ ಜೊತೆಗೆ ಸಮಾಜ ಸೇವೆ ಕಾರ್ಯಗಳು, ಕ್ರೈಸ್ತ ಧರ್ಮ

ಪ್ರಸಾರ ಮಾಡಲು ಅನುಕೂಲವಾಯಿತು. ಕ್ಷಣಾರ್ಧದಲ್ಲಿ ಬ್ರಿಟಿಷರು ತಲುಪಲು ಈ ರೀತಿಯಾಗಿ ತಮಗೆ ಯೋಗ್ಯ ರೀತಿಯಲ್ಲಿ ಸ್ಮಾರಕಗಳನ್ನು ನಿರ್ಮಿಸಿದ್ದಾರೆ.

**ಕಲಾದಗಿ: ನ್ಯಾಯಾಲಯ**

ಬ್ರಿಟಿಷರು ಕಲಾದಗಿಯಲ್ಲಿ ನೆಲೆ ನಿಂತು ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡು ಸೈನಿಕ ನೆಲೆಯನ್ನು ಸ್ಥಾಪಿಸಿದರು. ದಂಗೆಗಳನ್ನು ಸೆದೆ ಬಡಿದು ಬ್ರಿಟಿಷ್ ಸರಕಾರದ ವಿರೋಧಿಗಳನ್ನು ವಿಚಾರಣೆಗೊಳಪಡಿಸಲು ಕಲಾದಗಿಯಲ್ಲಿ ತಾತ್ಕಾಲಿಕವಾಗಿ ೧೮೬೦ರಲ್ಲಿ ನ್ಯಾಯಾಲಯದ ಕಟ್ಟಡವನ್ನು ನಿರ್ಮಿಸಿದ್ದರು. ಇದು ವಿಶಾಲವಾದ ಕಟ್ಟಡವಾಗಿದ್ದು, ಗೋಡೆ, ಮೇಲ್ಛಾವಣೆ ಕಂಬ, ಎಲ್ಲವೂ ಆಧುನಿಕ ಕಟ್ಟಡದ ಸ್ಪರ್ಶಕ್ಕೆ ಒಳಗಾಗಿದೆ. ಇಲ್ಲಿ ಅಪರಾಧಿಗಳನ್ನು ವಿಚಾರಣೆ ಗೊಳಪಡಿಸಿ ತಪ್ಪಿತಸ್ಥರಿಗೆ ಬಾಗಲಕೋಟೆ ಸೆರೆಮನೆ(ಜೈಲು)ಗೆ ಕಳುಹಿಸಲಾಗುತ್ತಿತ್ತು. ಹಲಗಲಿ ಬಂಡಾಯದಲ್ಲಿ ಸೆರೆಸಿಕ್ಕವರೆಲ್ಲರನ್ನು ಇಲ್ಲಿ ವಿಚಾರಣೆಗೊಳಪಡಿಸಿ ಮುಂದೆ ಮುಧೋಳ, ಬಾಗಲಕೋಟೆಗೆ ಕಳುಹಿಸಲಾಗಿದೆ. ಅಂದರೆ ನೂರಾರು ಜನರನ್ನು ದೂರದ ಬಾಗಲಕೋಟೆಗೆ ಕರೆದುಕೊಂಡು ಹೋಗುವುದು ಬಹುಶಃ ಬ್ರಿಟಿಷರಿಗೆ ತೊಂದರೆಯಾಗಿರಬೇಕು. ಈ ಕಟ್ಟಡ ಇಂದು ಸರಕಾರಿ ಮಾದರಿ ಪ್ರಾಥಮಿಕ ಶಾಲೆಯಾಗಿ ಬ್ರಿಟಿಷರ ಆಡಳಿತದಿಂದ ಹಿಡಿದು ಇಂದಿನ ವರೆಗೂ ಕಾರ್ಯವನ್ನು ನಿರ್ವಹಿಸುತ್ತಾ ನೂರಾರು ವಿದ್ಯಾರ್ಥಿಗಳಿಗೆ ಸಹಾಯಕಾರಿಯಾಗಿದೆ.

**ಉಪತಹಶೀಲ್ದಾರ–ನಾಡ ಕಾರ್ಯಾಲಯ**

ಬ್ರಿಟಿಷರು ತಮಗೆ ಅನುಕೂಲಕರವಾದ ಸ್ಥಳದಲ್ಲಿ ತಮಗೆ ಅವಶ್ಯಕತೆಯಿರುವ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಈ ಕಾರ್ಯಾಲಯವು ಬ್ರಿಟಿಷರ ಆಡಳಿತದ ಅವಧಿಯಲ್ಲಿ ಅಂಚೆ ಕಚೇರಿಯ ಅಧಿಕಾರಿಯು ವಾಸಿಸಲು ಉಪಯೋಗಿಸಲಾಗುತ್ತಿತ್ತು ಎಂಬುದು ಸ್ಥಳೀಯರ ಅಭಿಪ್ರಾಯ. ಈ ಕಟ್ಟಡವು ದುರಸ್ತಿ ಕಾರ್ಯಕ್ಕೆ ಒಳಗಾಗಿ ಮೂಲ ಸ್ವರೂಪವನ್ನು ಕಳೆದುಕೊಂಡು ಆಧುನಿಕ ಕಟ್ಟಡದಂತೆ ಕಂಗೊಳಿಸುತ್ತಾ ಸದಾ ಜನರ ಸೇವೆಗೆ ಮುಕ್ತವಾಗಿ ಕಾರ್ಯನಿರ್ವಹಿಸುತ್ತದೆ. ಅಂಚೆ ಕಚೇರಿ ಮತ್ತು ನಾಡಕಾರ್ಯಾಲಯ ಎದುರು ಬದುರು ಹಾಗೂ ಸರಕಾರಿ ಆಸ್ಪತ್ರೆಯ ಕಟ್ಟಡ ಹತ್ತಿರದಲ್ಲಿದೆ. ಆಡಳಿತವು ಸುಗಮವಾಗಲು ಪ್ರತ್ಯೇಕ ಇಲಾಖೆ, ಕಟ್ಟಡಗಳನ್ನು ನಿರ್ಮಿಸುತ್ತಿದ್ದರು.

**ಬಾದಾಮಿ**

ಬಾದಾಮಿ ಪಟ್ಟಣದ ಹೃದಯ ಭಾಗದಲ್ಲಿರುವ ಹಳೆಯ ಪಾರಂಪರಿಕ ಕಟ್ಟಡಗಳಾದ ತಾಲೂಕು ದಂಡಾಧಿಕಾರಿ, ಪೊಲೀಸ್ ಇಲಾಖೆ, ಖಜಾನೆ ಕಾರ್ಯಾಲಯ ಮತ್ತು ಸೆರೆಮನೆ

(ಜೈಲು) ಇವೆಲ್ಲವುಗಳನ್ನು ಬ್ರಿಟೀಷರು ಕ್ರಿ.ಶ.೧೯೦೪ರಲ್ಲಿ ನಿರ್ಮಿಸಿದ್ದಾರೆ. ಸ್ಥಳೀಯ ಬೆಟ್ಟದ ಗಟ್ಟಿಯಾದ ಕೆಂಪು ಶಿಲೆ, ಗಾರೆಗಚ್ಚು ಮತ್ತು ಮೇಲ್ಛಾವಣಿಗೆ ಕಟ್ಟಿಗೆ ಮತ್ತು ಮಂಗಳೂರು ಕೆಂಪು ಹೆಂಚನ್ನು ಬಳಸಿ ಗಾಳಿ, ಬೆಳಕು ಸಮತೋಲನದಲ್ಲಿ ಬರುವಂತೆ ಗಟ್ಟಿಯಾದ ಬಾಗಿಲು, ಕಿಟಕಿಯನ್ನು ಭದ್ರವಾಗಿ ನಿರ್ಮಿಸಿದ್ದಾರೆ. ಬ್ರಿಟಿಷರ ಆಡಳಿತಾವಧಿಯಲ್ಲಿ ಬಾದಾಮಿಯಲ್ಲಿ ಇನ್ನು ಹಲವಾರು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಅವೆಂದರೆ ಮ್ಯೂಜಿಯಂ ರಸ್ತೆಯ ಖಜಾನೆ ಕಚೇರಿ, ತಹಶೀಲ್ದಾರ ಕಚೇರಿ, ಅಂಚೆ ಕಚೇರಿ, ಸ್ಮಾರಕ ಈಗ ಪ್ರಾಥಮಿಕ ಶಾಲೆಯ ತಗಡಿನ ಶೆಡ್ ಕಟ್ಟಡವಾಗಿದೆ. ಹಳೇ ಸರ್ಕಾರಿ ಆಸ್ಪತ್ರೆ, ತಾಲೂಕು ಪಂಚಾಯಿತಿ ಕಾರ್ಯಾಲಯ ಕಟ್ಟಡಗಳು ನೆಲಸಮವಾಗಿ ಸಿಮೆಂಟ್ ಕಟ್ಟಡಗಳಾಗಿ ಪರಿವರ್ತನೆಯಾಗುವ ಮುನ್ಸೂಚನೆಯಲ್ಲಿದೆ. ಇಂದು ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣದ ಕಾರ್ಯಯೋಜನೆಯ ನೆಪದಲ್ಲಿ ಬ್ರಿಟಿಷರು ನಿರ್ಮಿಸಿದ ಹಳೆಯ ತಹಶೀಲ್ದಾರ ಕಾರ್ಯಾಲಯ, ಪೋಲೀಸ್ ಇಲಾಖೆ ಕಟ್ಟಡ ಇನ್ನೇನು ಕೆಲವೇ ತಿಂಗಳಲ್ಲಿ ಕಟ್ಟಡಗಳನ್ನು ನೆಲಸಮ ಕಾರ್ಯಾಚರಣೆ ನಡೆಯಲಿದೆ. ಆದರೆ ಇಲ್ಲಿಯ ಕಲ್ಲುಗಳನ್ನು ಉಪಯೋಗಿಸಿಕೊಂಡು ಮೂಲ ಶೈಲಿಯಲ್ಲಿ ಅದೇ ಸ್ಮಾರಕಗಳನ್ನು ಪುನರ್ ನಿರ್ಮಿಸಿದರೆ ಐತಿಹಾಸಿಕ ಬಾದಾಮಿ ಊರಿಗೆ ಇನ್ನಷ್ಟು ಸೊಬಗು ಬರುತ್ತದೆ ಎಂದು ಹೇಳಬಹುದು. ಬಾದಾಮಿ ಐತಿಹಾಸಿಕ ಸ್ಥಳವಾಗಿ ಬ್ರಿಟಿಷ ಅಧಿಕಾರಿಗಳನ್ನು ತುಂಬಾ ಆಕರ್ಷಿಸಿತ್ತು. ಹಾಗಾಗಿ ಇಲ್ಲಿ ವ್ಯವಸ್ಥಿತ ಆಡಳಿತಕ್ಕೆ ಕಟ್ಟಡಗಳ ಅವಶ್ಯಕತೆವಿದ್ದಿತು.

**ಬೀಳಗಿ**

ಬೀಳಗಿಯು ಬಾಗಲಕೋಟೆ ಜಿಲ್ಲೆಯ ಒಂದು ತಾಲೂಕಾಗಿದ್ದು, ಬಾಗಲಕೋಟೆಯಿಂದ ವಾಯುವ್ಯಕ್ಕೆ ೨೦ ಕಿ.ಮೀ.(ವಿಜಯಪುರದಿಂದ ೬೪ ಕಿ.ಮೀ) ದೂರದಲ್ಲಿದೆ. ಡಬ್ಲೂ ಹಾರ್ಟನ ಸಲಹೆಯಂತೆ ಆಡಳಿತದ ಅನುಕೂಲಕ್ಕಾಗಿ "ಕಲಾದಗಿ ಕಲೆಕ್ಟರೇಟ್" ಕ್ರಿ.ಶ.೧೮೬೪ ಡಿಸೆಂಬರ್ ೧ ರಂದು ರಚನೆ ಮಾಡಲಾಯಿತು. ಈ ಸಂದರ್ಭದಲ್ಲಿ ಬೀಳಗಿಯು ಉಪ ತಾಲೂಕಾಗಿ ಮುಂದುವರೆಯಿತು. ಬೀಳಗಿಯಲ್ಲಿ ಬ್ರಿಟಿಷರು ಆಡಳಿತ ನಡೆಸುತ್ತಿದ್ದ ಸಂದರ್ಭದಲ್ಲಿ ಶಾಲೆ, ಆಸ್ಪತ್ರೆ, ಸೆರೆಮನೆ(ಜೈಲು) ಆಡಳಿತ ಕಚೇರಿಗಳನ್ನು ಇಲ್ಲಿ ನಿರ್ಮಿಸಿದ್ದಾರೆ. ಕ್ರಿ.ಶ.೧೯೦೮ರಲ್ಲಿ ಬೀಳಗಿಯಲ್ಲಿ ಸೆರೆಮನೆ ನಿರ್ಮಿಸಲಾಗಿದೆ. ಇಲ್ಲಿ ಬ್ರಿಟಿಷರಿಗೆ ಸ್ಥಳೀಯರ ಪ್ರತಿರೋಧ ಹೆಚ್ಚಾಗಿ ಇದ್ದುದ್ದು ಕಂಡುಬರುತ್ತದೆ. ಹಲಗಲಿ ಬೇಡರ ಬಂಡಾಯಕ್ಕೆ ಬೀಳಗಿ, ತೆಗ್ಗಿ, ನಾಗರಾಳ, ಜಾನಮಟ್ಟಿ, ಭಂಟನೂರು ಗ್ರಾಮಗಳ ಬೇಡ ಸಮುದಾಯದ ಪಾತ್ರವು ಅತ್ಯಂತ ಮುಖ್ಯವಾಗಿದೆ. ನಂತರದಲ್ಲಿ ಸಿಂಧೂರ ಲಕ್ಷ್ಮಣನ ಹೋರಾಟ ಬ್ರಿಟಿಷರಿಗೆ ಸತತ ತಲೆನೋವಾಗಿ ಕಾಡುತ್ತದೆ. ಬ್ರಿಟಿಷರಿಗೂ ಮತ್ತು ಲಕ್ಷ್ಮಣನ ಸಂಘಟಕರಿಗೆ ಹೋರಾಟ ನಡೆದಾಗ ಬ್ರಿಟಿಷ ಕಮಿಷನರ್

ಮೋಹನ ಕಲಾಲನ ಹತ್ಯೆಯಾಗುತ್ತದೆ. ನಂತರದಲ್ಲಿ ಕೆರಳಿದ ಬ್ರಿಟಿಷರು ವ್ಯವಸ್ಥಿತ ಸೈನ್ಯ ಹಾಗೂ ಕುತಂತ್ರ ಬುದ್ದಿಗೆ ನಾಗರಾಳದ ಕಪ್ಪರ ಪಡಿಯವ್ವನ ಸನ್ನಿಧಿಯಲ್ಲಿ ಸಿಂಧೂರ ಲಕ್ಷ್ಮಣನು ೧೫-೭-೧೯೨೨ರಲ್ಲಿ ಬ್ರಿಟಿಷರಿಂದ ಹತನಾಗುತ್ತಾನೆ. ಸಾರ್ವಜನಿಕರ ವೀಕ್ಷಣೆಗಾಗಿ ಬೀಳಗಿಯ ಸೆರೆಮನೆಯ ಮುಂದೆ ಕಟ್ಟೆಯ ಮೇಲೆ ಲಕ್ಷ್ಮಣನ ಶವವನ್ನು ಇಡಲಾಯಿತು. ಹಾಗಾಗಿ ಈ ಕಟ್ಟೆಗೆ ಇಂದಿಗೂ "ವೀರ ಸಿಂಧೂರ ಲಕ್ಷ್ಮಣ 'ಕಟ್ಟೆ' ಎಂದು ಕರೆಯುತ್ತಾರೆ. ಬೀಳಗಿಯಲ್ಲಿಯ ಬ್ರಿಟಿಷರ ಕಾಲದ ಸೆರೆಮನೆ ಇಂದು ಸರಕಾರಿ ಪಾಲಿಟೆಕ್ನಿಕ್ ಕಾಲೇಜಾಗಿ ಕಾರ್ಯವನ್ನು ನಿರ್ವಹಿಸುತ್ತಿದೆ. ಇದರ ಪಕ್ಕದಲ್ಲಿಯೇ ಆಸ್ಪತ್ರೆ, ಶಾಲೆ, ಬ್ರಿಟಿಷರ ವಸತಿ ಗೃಹಗಳು ಇಂದಿಗೂ ಸಹ ಸುವ್ಯವಸ್ಥಿತವಾಗಿವೆ.

ಕಲಾದಗಿ ಗ್ರಾಮದಂತೆ ಬೀಳಗಿಯ ಸುತ್ತಮುತ್ತಲಿನ ಪರಿಸರ ಬ್ರಿಟಿಷರಿಗೆ ಯೋಗ್ಯವಾಗಿತ್ತು. ಅದರಂತೆ ಎಲ್ಲೆಲ್ಲಿ ಸ್ಥಳೀಯರ ಪ್ರತಿಭಟನೆಗಳು ನಡೆಯುತ್ತವೋ ಅವುಗಳನ್ನು ನಿಗ್ರಹಿಸಿ ದಮನ ಮಾಡಿ ಬ್ರಿಟಿಷರು ತಮ್ಮ ಆಡಳಿತ ಮತ್ತು ಪ್ರಭುತ್ವದ ಯಂತ್ರ ಸುಗಮವಾಗಿ ಕಾರ್ಯಾಚರಿಸಲು ಎಂಥಹ ಕಷ್ಟ ಬಂದರೂ ಸಹ ಎದುರಿಸಿ ಅಲ್ಲಿಯೇ ವಾಸ್ತವ್ಯ(ಠಿಕಾಣಿ) ಹೂಡಿ ಬ್ರಿಟಿಷರು ಮೇಲಾಧಿಕಾರಿಗಳಿಗೆ ಸುದ್ದಿಯನ್ನು ತಲುಪಿಸುತ್ತಿದ್ದರು. ಬೀಳಗಿಯು ಆರ್ಥಿಕವಾಗಿ ಸಂಪತ್ಭರಿತ ಪ್ರದೇಶವಾಗಿರುವುದರಿಂದ ಬ್ರಿಟಿಷರು ಇಲ್ಲಿ ಅಧಿಕಾರ ಚಲಾಯಿಸಿ, ಎಲ್ಲಾ ವ್ಯವಸ್ಥೆಯನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡರು. ಸ್ಥಳೀಯ ಮುಖಂಡರ ಸಹಾಯದಿಂದ ಕುತಂತ್ರ ಬುದ್ಧಿ, ಅಧಿಕಾರ, ಭೂಮಿ ಆಸೆ ಮುಂದಿಟ್ಟುಕೊಂಡು ಎಷ್ಟೋ ಬಂಟರನ್ನು ಬ್ರಿಟಿಷರು ದಮನ ಮಾಡಿದರು ಎಂಬುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ.

## ೪.೪. ರಕ್ಷಣಾ ಕಟ್ಟಡಗಳು

### ಕಲಾದಗಿ

ಬ್ರಿಟಿಷ್ ಅಧಿಕಾರಿ ಸರ್ ಥಾಮಸ್ ಮನ್ರೋ ಕ್ರಿ.ಶ.೧೮೧೮ರಲ್ಲಿ ಬಾದಾಮಿ, ಬಾಗಲ ಕೋಟೆ, ಹವೇಲಿ, ಕಲಾದಗಿ ಮುಂತಾದ ಪ್ರದೇಶಗಳನ್ನು ವಶಪಡಿಸಿಕೊಂಡನು. ಕ್ರಿ.ಶ.೧೮೧೮ ರಿಂದ ೧೮೮೫ ರವರೆಗೆ ಬ್ರಿಟಿಷರ ಆಡಳಿತದ ಅವಧಿಯಲ್ಲಿ ಕಲಾದಗಿ ಜಿಲ್ಲಾ ಕೇಂದ್ರವು ಮತ್ತು ಸೈನಿಕ ನೆಲೆಯಾ(ಕಂಟೋನ್ಮೆಂಟಾ)ಗಿತ್ತು. ಈ ಅವಧಿಯಲ್ಲಿ ಕಲಾದಗಿ ಬ್ರಿಟಿಷರು ತಮ್ಮ ಆಡಳಿತವು ಸುವ್ಯವಸ್ಥಿತವಾಗಿ ಜರುಗಲು ಅಂಚೆ ಕಚೇರಿ, ನ್ಯಾಯಾಲಯ, ಚರ್ಚ, ಧರ್ಮಶಾಲೆ, ಕಂದಾಯ ಕಾರ್ಯಾಲಯ, ಆಸ್ಪತ್ರೆ, ರಸ್ತೆ ಸೇತುವೆ ನಿರೀಕ್ಷಣಾ ಮಂದಿರ ಇತ್ಯಾದಿ ಸ್ಮಾರಕಗಳನ್ನು ಕಲಾದಗಿಯಲ್ಲಿ ನಿರ್ಮಿಸಿದ್ದಾರೆ. ಕಲಾದಗಿಯಲ್ಲಿ ಬೆಳಗಾವಿ-ಬಾಗಲಕೋಟೆ

ರಾಜ್ಯ ಹೆದ್ದಾರಿ ರಸ್ತೆಯ ಪಕ್ಕದಲ್ಲಿ ನಿರೀಕ್ಷಣಾ ಮಂದಿರವನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ವಿಶಾಲವಾದ ಕಾಂಪೌಂಡನಿಂದ ಈ ಸ್ಮಾರಕ ಸಂರಕ್ಷಿಸಲ್ಪಟ್ಟಿದೆ. ಸ್ಥಳೀಯರು ಈ ಸ್ಮಾರಕವನ್ನು "ಮುಶಾಫರ್ ಬಂಗಲೆ" ಎಂದು ಕರೆಯುತ್ತಾರೆ. ಬಂಗಲೆ ವಿಶಾಲ ಪ್ರಾಂಗಣ, ವಿಶ್ರಾಂತಿ ಕೊಠಡಿ, ಶೌಚಾಲಯ, ಅಡಿಗೆ ಕೊಠಡಿ, ಸಭೆ ಸಮಾರಂಭದ ಹಾಲ್ ಒಳಗೊಂಡಿದೆ. ಆದರೆ ಹಲವಾರು ಬಾರಿ ಜೀರ್ಣೋದ್ಧಾರ ಗೊಂಡಿದ್ದರಿಂದ ಬಂಗಲೆಯ ಮೂಲ ಸ್ವರೂಪವು ಮಾಯವಾಗಿ ಹೊಸ ರೂಪ ತಾಳಿದೆ.

ಕಲಾದಗಿ ಸುತ್ತಮುತ್ತಲೂ ದೊರೆಯುವ ಕಚ್ಚಾ ಸಾಮಗ್ರಿಗಳಾದ ಗಾರೆಗಚ್ಚು, ಸೀಮೆ ಸುಣ್ಣ, ಕಟ್ಟಿಗೆ ಉಪಯೋಗಿಸಿ ನಿರ್ಮಿಸಿದ್ದಾರೆ. ಮೇಲು ಹೊದಿಕೆಗೆ ಮಂಗಳೂರು ಕೆಂಪು ಹೆಂಚು ಹಾಕಲಾಗಿದೆ. ನಂತರದಲ್ಲಿ ಹೆಂಚಿನ ಮೇಲುಗಡೆ ತಾಡಪಾಲ ಹಾಕಿ ಮಳೆ, ಬಿಸಿಲಿನಿಂದ ರಕ್ಷಿಸಲಾಗಿದೆ. ಹೆದ್ದಾರಿಗೆ ಹೊಂದಿಕೊಂಡಿರುವ ಬಂಗಲೆ ಇದಾದುದರಿಂದ ದಿನನಿತ್ಯ ಪ್ರವಾಸಿಗರಿಗೆ, ಗಣ್ಯವ್ಯಕ್ತಿಗಳಿಗೆ, ನಿರಾಶ್ರಿತರಿಗೆ ವಾಸ್ತವ್ಯಕ್ಕಾಗಿ ಇಂದಿಗೂ ಸಹ ಬಂಗಲೆಯನ್ನು ಅವಲಂಬಿಸಿರು ವುದು ಅನಿವಾರ್ಯವಾಗಿದೆ. ಬಂಗಲೆಗೆ ಹೊಂದಿಕೊಂಡ ಶ್ರೀ ಸತ್ಯಸಾಯಿ ಬಾಬಾ ದೇವಸ್ಥಾನ ನಿರ್ಮಾಣಗೊಂಡಿದ್ದರಿಂದ ಬಂಗಲೆ ಮತ್ತಷ್ಟು ಆಕರ್ಷಣೀ ಯವಾಗಿದೆ.

ಕಲಾದಗಿಯ ಮೂಲ ವಸಾಹತು ಕಾಲದ ಆಸ್ಪತ್ರೆಯು ಇಂದು ಸಂಪೂರ್ಣವಾಗಿ ಜೀರ್ಣೋದ್ಧಾರಗೊಂಡಿದೆ. ಕಲಾದಗಿಯನ್ನು ಮಧ್ಯಭಾಗದಲ್ಲಿ ಶಾಲೆ, ನ್ಯಾಯಾಲಯ, ಆಸ್ಪತ್ರೆ, ಅಂಚೆ, ಕಚೇರಿ, ಚರ್ಚಎಲ್ಲವೂ ಹತ್ತಿರತ್ತಿರದಲ್ಲಿ ನಿರ್ಮಾಣಗೊಂಡಿದೆ. ಇದರ ಮೂಲ ಉದ್ದೇಶ ಬ್ರಿಟೀಷರಿಗೆ ಆಡಳಿತ ನಡೆಸಲು ಅತ್ಯಂತ ಸುಲಭವಾಗಲು ಎಂಬುದಾದರೆ ಮತ್ತೊಂದು ತಮ್ಮ ವೈಯಕ್ತಿಕ ಲಾಭವು ಕೂಡಾ ಇದೆ ಗುರುತಿಸಬಹುದು.

**ಬಾಗಲಕೋಟೆ: ನಿರೀಕ್ಷಣಾ ಮಂದಿರ:**

ಬಾಗಲಕೋಟೆ ನಗರದ ಮಧ್ಯಭಾಗದಲ್ಲಿ ಘಟಪ್ರಭಾ ನದಿಗೆ ಹತ್ತಿರದಲ್ಲಿ ನಿರೀಕ್ಷಣಾ ಮಂದಿರ(ಬಂಗಲೆ) ಕ್ರಿ.ಶ.೧೯೧೦ರಲ್ಲಿ ಬ್ರಿಟೀಷರು ನಿರ್ಮಿಸಿದ್ದಾರೆ. ಕೆಂಪು ಮತ್ತು ಕಪ್ಪು ಶಿಲೆ, ಸಿಸಂ. ಕರಿಮತ್ತಿ, ಹೊನ್ನೆ ಮರದ ಕಟ್ಟಿಗೆಯನ್ನು ಉಪಯೋಗಿ ಬಂಗಲೆ ನಿರ್ಮಿಸಿದ್ದಾರೆ. ಬಂಗಲೆಯು ಮುಂಭಾಗದಲ್ಲಿ ೫ ಕಮಾನುಗಳನ್ನು ಹೊಂದಿದ್ದು, ಎರಡು ಅಂತಸ್ತು, ವಿಶಾಲವಾದ ಪ್ರಾಂಗಣ, ವಿಶ್ರಾಂತಿ ಕೊಠಡಿ, ಊಟದ ಮನೆ, ಸಭಾಗೃಹ ಶೌಚಾಲಯ ಇತ್ಯಾದಿ ಕೊಠಡಿಗಳನ್ನು ಒಳಗೊಂಡಿದೆ. ಬಂಗಲೆಯು ಅಪ್ಪಟ ಬ್ರಿಟಿಷ್ ವಸಾಹತು ಶೈಲಿಯ

ಸ್ಮಾರಕವಾಗಿದೆ. ನಿರೀಕ್ಷಣಾ ಮಂದಿರದ ಎಲ್ಲಾ ಕಿಟಕಿಯ ವಿನ್ಯಾಸ ಕಮಾನುಗಳಿಂದ ರಚನೆಗೊಂಡು, ಕಟ್ಟಿಗೆ, ಅಲಂಕಾರಿಕ ಗಾಜನ್ನು ಉಪಯೋಗಿಸಿ ಬಾಗಿಲು ಕಿಟಕಿಗಳನ್ನು ಅಳವಡಿಸಲಾಗಿದೆ. ಗೋಡೆಯ ಒಳಗಿನ ಮತ್ತು ಹೊರಗಿನ ಭಾಗ ಬಿರುಕು ಬಿಡದಂತೆ ಕಬ್ಬಿಣದ ಸರಳುಗಳನ್ನು ಉಪಯೋಗಿಸಿ ಬ್ರಿಟಿಷರು ಸ್ಮಾರಕವನ್ನು ನಿರ್ಮಿಸಿದ್ದಾರೆ. ಬ್ರಿಟಿಷ್ ಅಧಿಕಾರಿಗಳು ವಾಸ್ತವ್ಯಕ್ಕಾಗಿ ಬಾಗಲಕೋಟೆಯಲ್ಲಿ ಈ ಬಂಗಲೆಯನ್ನು ನಿರ್ಮಿಸಿದ್ದಾರೆ. ಹೊರಾಂಡ ಅಂದರೆ ಬಂಗಲೆಯ ಹೊರಗಡೆ ಸ್ಥಳದಲ್ಲಿ ಸುತ್ತಲೂ ಗಿಡಮರಗಳು, ಉದ್ಯಾನವನ, ನೀರಿನ ಕಾರಂಜಿಯು ಆಕರ್ಷಿತವಾಗಿದ್ದುದರಿಂದ ನಿರೀಕ್ಷಣಾ ಮಂದಿರ ಸೌಂದರ್ಯ, ಮೆರಗು, ಇಂದಿಗೂ ನವನವೀನವಾಗಿ ಕಂಗೊಳಿಸುತ್ತಿದೆ. ಕಟ್ಟದ ಶೈಲಿ, ರಚನಾ ವಿನ್ಯಾಸ, ತಾಂತ್ರಿಕತೆ ಎಲ್ಲವೂ ವೈಶಿಷ್ಟ್ಯೆಯಿಂದ ಕೂಡಿವೆ.

ಬಾಗಲಕೋಟೆಯಲ್ಲಿ ಬ್ರಿಟಿಷರು ಬಿಡಾರು ಹೂಡಿ ಹೆಚ್ಚು ಕಡಿಮೆ ಮೂರರಿಂದ ನಾಲ್ಕು ಕಿ.ಮೀ. ಅಂತರದಲ್ಲಿ ನಿರೀಕ್ಷಣಾ ಮಂದಿರ, ಚರ್ಚ, ಆಡಳಿತ ಕಚೇರಿ, ನ್ಯಾಯಾಲಯ, ಅಧಿಕಾರಿಗಳಿಗೆ ವಾಸಿಸಲು ವಸತಿ ಗೃಹಗಳು, ಅಂಚೆ ಕಚೇರಿ, ಸೆರೆಮನೆ(ಜೈಲು) ಎಲ್ಲ ವಸಾಹತು ಕಾಲದ ಸ್ಮಾರಕಗಳನ್ನು ತಮಗೆ ಆಡಳಿತದ ಅನುಕೂಲಕ್ಕಾಗಿ ಅತ್ಯಂತ ಶ್ರಮವಹಿಸಿ ನಿರ್ಮಿಸಿದ್ದಾರೆ. ಬ್ರಿಟಿಷರು ಅಧಿಕಾರ, ಆರ್ಥಿಕ ವ್ಯಾಮೋಹದ ಜೊತೆಗೆ ಪರಿಸರ ಪ್ರೇಮಿಗಳು, ನಿಷ್ಠಾವಂತ ಅಧಿಕಾರಿಗಳು, ಕಾಯಕ ಜೀವಿಗಳಾಗಿದ್ದರು ಎಂಬುದು ಇಲ್ಲಿ ಗಮನಾರ್ಹ ವಾದುದು. ಅಂತಹ ವಸಾಹತು ಕಾಲದ ಸ್ಮಾರಕಗಳು ಇಂದಿಗೂ ಸಹ ಜನರ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡಿವೆ.

**ಲೋಕಾಪುರ**

ಚಲ್ಲಕೇತನ ಮನೆತನದ ಅರಸ ಲೋಕಾಧಿತ್ಯನು ತನ್ನ ಹೆಸರಿನಲ್ಲಿ ಲೋಕಾಪುರ ಸ್ಥಾಪಿಸಿದನು. ಇಲ್ಲಿ ಹರಿ, ಹರ, ಜಿನ, ಸುತ ದೇವಾಲಯಗಳಿದ್ದವು. ಈ ದೇವಾಲಯಗಳಲ್ಲಿ ಜೀರ್ಣೋದ್ಧಾರ ಕಾರ್ಯ ನಡೆದು ಮೂಲ ಸ್ವರೂಪ ಇಲ್ಲವಾಗಿ ಹೊಸ ರೂಪ ಪಡೆದು ಕೊಂಡಿವೆ. ಮುಧೋಳ ಘೋರ್ಪಡೆ ಮಹಾರಾಜರ ಅಧೀನದಲ್ಲಿ ಮುಧೋಳ, ಡವಳೇಶ್ವರ, ಜಂಬಗಿ, ಮಾಚಕನೂರ ಮತ್ತು ಲೋಕಾಪುರ ಎಂಬ ಪಂಚ ಮಹಲ್‌ಗಳು ಆಡಳಿತಕ್ಕೆ ಒಳಪಟ್ಟಿದ್ದವು.

ಕ್ರಿ.ಶ.೧೯೦೦ಳರಲ್ಲಿ ರಾಜಾ ಮಾಲೋಜಿ ರಾವ್ ಘೋರ್ಪಡೆ ಮುಧೋಳ ಸಂಸ್ಥಾನಕ್ಕೆ ಅಧಿಕಾರದ ಚುಕ್ಕಾಣಿ ಹಿಡಿದು ಅನೇಕ ಸಮಾಜ ಕಾರ್ಯಗಳನ್ನು ಕೈಗೊಂಡನು. ಸಂಘಸಂಸ್ಥೆಗಳಿಗೆ

ದಾನ, ನೀಡಿ, ಶಿಕ್ಷಣ ಸಂಸ್ಥೆಯನ್ನು ಆರಂಭಿಸಿದನು. ಅದಕ್ಕೆ ಉದಾಹರಣೆಯೆಂದರೆ ರಾಜಾ ಮಾಲೋಜಿರಾವ್ ಘೋರ್ಪಡೆ ಶಿಕ್ಷಣ ಮಹಾವಿದ್ಯಾಲಯ ಚಿರಸ್ಥಾಯಿಯಾಗಿದೆ. ಕ್ರಿ.ಶ. ೧೯೩೬ರಲ್ಲಿ ರಾಜಾ ಮಾಲೋಜಿರಾವ್ ನಿಧನ ಹೊಂದಿದ ನಂತರ ಯುವರಾಜ ರಾಜಾ ಭೈರವಸಿಂಗ್ ಘೋರ್ಪಡೆ ಕ್ರಿ.ಶ.೧೯೩೬ರಲ್ಲಿ ಸಿಂಹಾಸನವೇರಿದನು. ರಾಜಾ ಭೈರವಸಿಂಗ್ ಮುಧೋಳ ಘೋರ್ಪಡೆ ಸಂಸ್ಥಾನದ ಕೊನೆಯ ರಾಜನಾಗಿ ಅಕಾಲಿಕ ಮರಣಕ್ಕೆ ತುತ್ತಾದನು.

ಲೋಕಾಪುರ ಗ್ರಾಮ ಮುಧೋಳ ಸಂಸ್ಥಾನಿಕರ ಅಧೀನದಲ್ಲಿಯ ಒಂದು ಮಹಲಾಗಿದ್ದುದರಿಂದ ರಾಜಾ ಭೈರವಸಿಂಗ್ ಕ್ರಿ.ಶ.೧೯೩೮-೪೦ರಲ್ಲಿ ಒಂದು ಬಂಗಲೆಯನ್ನು ಲೋಕಾಪುರದಲ್ಲಿ ನಿರ್ಮಿಸಿದನು. ರಾಜಾ ಸ್ಥಳೀಯ ಬೇಡರ ಸಹಕಾರದಿಂದ ಬೇಟೆಯಾಡಿ ಈ ಬಂಗಲೆಯಲ್ಲಿ ಊಟ ಮಾಡಿ ವಿಶ್ರಾಂತಿಯನ್ನು ಪಡೆದುಕೊಳ್ಳುತ್ತಿದ್ದನು. ಈ ಕಟ್ಟಡಕ್ಕೆ ಹಣಕಾಸು ನೆರವನ್ನು ರಾಜರು ನೀಡಿದ್ದಾರೆ. ಈ ಬಂಗಲೆಯ ವಾಸ್ತು, ಕಟ್ಟಡದ ಯೋಜನೆ ಎಲ್ಲವು ಬ್ರಿಟೀಷ್ ಅಧಿಕಾರಿಗಳು ರೂಪಿಸಿದ್ದಾರೆ. ಈ ಶಾಲೆಯ ಬಂಗಲೆಗೆ ಮಣ್ಣಿನ ಜೊತೆಗೆ ಗೋಧಿ ಹುಲ್ಲು (ಹೊಟ್ಟು) ಮಿಶ್ರಣ ಮಾಡಿ, ಕಪ್ಪು ಕಲ್ಲು, ಸೀಸಂ, ಕಟ್ಟಿಗೆ, ಮಂಗಳೂರು ಹೆಂಚು ಉಪಯೋಗಿಸಿ ಕಟ್ಟಡವನ್ನು ನಿರ್ಮಿಸಲಾಗಿದೆ. ಮುಂದೆ ಈ ರಾಜ ಬಂಗಲೆಯು ಕ್ರಿ.ಶ. ೧೯೬೧ರಲ್ಲಿ ಶ್ರೀ ಲೋಕೇಶ್ವರ ಶಿಕ್ಷಣ ಸಮಿತಿಯ ರಾಜಾ ಭೈರವಸಿಂಗ ಘೋರ್ಪಡೆ ಪ್ರೌಢಶಾಲೆಯಾಗಿ ಸ್ಥಾಪನೆಗೊಂಡು ನಂತರದಲ್ಲಿ ಆರ್.ಬಿ.ಜಿ.ಪದವಿಪೂರ್ವ ಮಹಾವಿದ್ಯಾಲಯವಾಗಿ ಇಂದಿಗೂ ಶಿಕ್ಷಣ ಸೇವೆಯನ್ನು ಮುಂದುವರೆಸಿದೆ. ಈ ರಾಜ ಬಂಗಲೆ ನಿರ್ಮಿಸುವುದಕ್ಕಿಂತಲೂ ಮೊದಲೇ ಬ್ರಿಟಿಷರು ಕ್ರಿ.ಶ.೧೮೮೭ರಲ್ಲಿ ಬಾಗಲಕೋಟೆ-ಲೋಕಾಪುರ ಮಧ್ಯ ಅತ್ಯಂತ ಅಚ್ಚುಕಟ್ಟಿನ ಸೇತುವೆಯನ್ನು ನಿರ್ಮಿಸಿದ್ದಾರೆ. ಅಷ್ಟೇ ಅಲ್ಲದೇ ನಿರೀಕ್ಷಣಾ ಮಂದಿರ, ಸಣ್ಣ ಪುಟ್ಟ ರಸ್ತೆ ಸೇತುವೆಗಳನ್ನು ನಿರ್ಮಾಣ ಮಾಡಿ ರಸ್ತೆ ಸಂಚಾರಕ್ಕೆ ಬ್ರಿಟಿಷರು ಅನುಕೂಲ ಮಾಡಿಕೊಳ್ಳುತ್ತಿದ್ದರು. ಹಳೆಯ ನಿರೀಕ್ಷಣಾ ಮಂದಿರದ ಸ್ಥಳದಲ್ಲಿಯೇ ಕೆಲವು ವರ್ಷಗಳ ಹಿಂದೆ ಹೊಸ ನಿರೀಕ್ಷಣಾ ಮಂದಿರ ನಿರ್ಮಾಣ ಮಾಡಲಾಗಿದೆ. ಮುಧೋಳ ಸಂಸ್ಥಾನಿಕರಿಗೂ ಮತ್ತು ಬ್ರಿಟಿಷರಿಗೂ ಉತ್ತಮ ಬಾಂಧವ್ಯ ಇದ್ದುದರಿಂದ ಲೋಕಾಪುರ, ಮುಧೋಳ, ವಜ್ರಮಟ್ಟಿ, ಚಿಂಚಖಂಡಿ, ಭಂಟನೂರು ಇತ್ಯಾದಿ ಸ್ಥಳಗಳಲ್ಲಿ ಸಾಮಾಜಿಕ ಕಾರ್ಯಕೈಗೊಳ್ಳಲು ಸಹಾಯಕಾರಿಯಾಗಿದೆ.

ಲೋಕಾಪುರದಲ್ಲಿ ಹಳೇಯ ನಿರೀಕ್ಷಣಾ ಮಂದಿರ ಇದ್ದಂತಹ ಸ್ಥಳದಲ್ಲಿಯೇ ಇಂದು ನೂತನ ಕಟ್ಟಡ ನಿರ್ಮಾಣಗೊಂಡಿದೆ. ಹಳೆಯ ನಿರೀಕ್ಷಣಾ ಮಂದಿರಕ್ಕೆ ಕೆಂಪು, ಕಪ್ಪು ಕಲ್ಲು, ಗಾರೇಗಚ್ಚು, ಕಟ್ಟಿಗೆ, ಮಂಗಳೂರು ಹೆಂಚು ಉಪಯೋಗಿಸಿ ನಿರ್ಮಿಸಿದ್ದರು.

ಬೆಳಗಾವಿಯಿಂದ ಕಲಾದಗಿ ಜಿಲ್ಲೆಗೆ ಬ್ರಿಟಿಷರು ರಸ್ತೆ ಮೂಲಕ ಹೋಗುವಾಗ ಲೋಕಾಪುರ ಹತ್ತಿರದಲ್ಲಿ ಹಳ್ಳ(ನೀರು) ಬಂದು ಸಂಪರ್ಕ ಕಡಿತಗೊಳ್ಳುತ್ತಿತ್ತು. ಹಾಗಾಗಿ ಲೋಕಾಪುರದಲ್ಲಿ ಬ್ರಿಟಿಷ ಅಧಿಕಾರಿಗಳ ವಾಸ್ತವ್ಯಕ್ಕಾಗಿ ನಿರೀಕ್ಷಣಾ ಮಂದಿರವನ್ನು ನಿರ್ಮಿಸಿದರು. ಮುಂದೆ ಕ್ರಿ.ಶ.೧೮೮೨ರಲ್ಲಿ ಬೃಹತಾದ ಸೇತುವೆಯನ್ನು ಸಹ ಲೋಕಾಪುರ ಹಳ್ಳಕ್ಕೆ ನಿರ್ಮಿಸಿ ರಸ್ತೆ ಸಂಚಾರ ಸುಗಮಗೊಳಿಸಿದರು. ಈ ಸೇತುವೆ ಕೂಡಾ ನೆಲಸಮಗೊಂಡು ಬೃಹತಾದ ಕಾಂಕ್ರೀಟ್ ಸೇತುವೆ ನಿರ್ಮಾಣಗೊಂಡಿದೆ. ಈ ಸೇತುವೆಯನ್ನು ನೆಲಸಮ ಮಾಡುವಾಗ ಜೆ.ಸಿ.ಬಿ ಮತ್ತು ಹಿಟಾಚಿ ಯಂತ್ರಗಳು ನೆಲಕ್ಕುರಿಳಿ ಬಿದ್ದವು. ಇದರಿಂದ ಸೇತುವೆಯ ಗಟ್ಟಿತನವನ್ನು ಗುರುತಿಸಬಹುದು.

### ಕುಳಗೇರಿ ಕ್ರಾಸ್

ಬಾದಾಮಿಯಿಂದ ರಾಮದುರ್ಗಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೧೮ ಕಿ.ಮೀ. ಅಂತರದಲ್ಲಿ ಕುಳಗೇರಿ ಕ್ರಾಸ್ ಎಂಬ ಗ್ರಾಮವಿದೆ. ನಿರೀಕ್ಷಣಾ ಮಂದಿರ ಮುಂಭಾಗದ ಬಾಗಿಲು ಮೇಲೆ ೧೯೧೫ ಮತ್ತು ೧೯೪೯ ಎಂದು ಸಂಕೇತ ಸೂಚಿಸುವ ಕಲ್ಲಿನ ಫಲಕವಿದೆ. ಅಂದರೆ ಮೊದಲು ಕುಳಗೇರಿ ಕ್ರಾಸ್‌ನಲ್ಲಿ ಕ್ರಿ.ಶ.೧೯೧೫ರಲ್ಲಿ ಬಂಗಲೆ ನಿರ್ಮಿಸಿದ್ದಾರೆ. ನಂತರದಲ್ಲಿ ೧೯೪೯ರಲ್ಲಿ ಮತ್ತು ಜೀರ್ಣೋದ್ಧಾರ ಕೈಗೊಳ್ಳಲಾಗಿದೆ. ಹುಬ್ಬಳ್ಳಿಗೆ ನೇರ ರಸ್ತೆ ಮಾರ್ಗ ಕಲ್ಪಿಸುವ ಸ್ಥಳ ಇದಾಗಿದ್ದುದರಿಂದ ಬ್ರಿಟಿಷರು ಇಲ್ಲಿ ನಿರೀಕ್ಷಣಾ ಮಂದಿರವನ್ನು ನಿರ್ಮಿಸಿದ್ದಾರೆ. ಕಟ್ಟಡ ಸುವ್ಯವಸ್ಥಿತವಾಗಿದ್ದು, ಸ್ಥಳೀಯವಾಗಿ ದೊರೆಯುವ ಕಲ್ಲು, ಗಾರೆಗಚ್ಚು, ಸೀಮೆಸುಣ್ಣ, ಮಂಗಳೂರು ಹೆಂಚು ಉಪಯೋಗಿಸಿ ಬಂಗಲೆಯನ್ನು ಬ್ರಿಟೀಷರು ನಿರ್ಮಿಸಿದ್ದಾರೆ. ವಿಶಾಲ ಪ್ರಾಂಗಣ ಹೊಂದಿದ್ದು, ಮರಗಳಿಂದ ಆವೃತಗೊಂಡು, ಕಾಂಪೌಂಡನಿಂದ ಬಂಗಲೆಯನ್ನು ಸಂರಕ್ಷಿಸಲಾಗಿದೆ. ಬ್ರಿಟೀಷ್ ಅಧಿಕಾರಿಗಳು ರಸ್ತೆ ಮಾರ್ಗದ ಮೂಲಕ ಕುಳಗೇರಿ ಕ್ರಾಸ್‌ನಿಂದ ಬಾದಾಮಿ, ಕೆರೂರು, ಮುಷ್ಠಿಗೇರಿ ಇತ್ಯಾದಿ ಸ್ಥಳಗಳಿಗೆ ಹೋಗಲು, ಹಾಗೇನೇ ವಿಶ್ರಾಂತಿ ಮಾಡಿ ಬೇರೆ ಬೇರೆ ಯೋಜನೆಗಳನ್ನು ರೂಪಿಸಲು, ಹಲವಾರು ಊರುಗಳಿಗೆ ಸಂಪರ್ಕವನ್ನು ಕಲ್ಪಿಸಿ ತಮ್ಮ ಅನುಕೂಲಕ್ಕಾಗಿ ಬ್ರಿಟಿಷರು ಕುಳಗೇರಿ ಕ್ರಾಸ್‌ನಲ್ಲಿ ನಿರೀಕ್ಷಣಾ ಮಂದಿರವನ್ನು ನಿರ್ಮಿಸಿದ್ದಾರೆ.

ಬ್ರಿಟಿಷರು ತಾವು ಅಧಿಕಾರ ಪ್ರಭುತ್ವವನ್ನು ನೆಲೆಗೊಳಿಸುವ ಸಲುವಾಗಿ ತಮಗೆ ಅನುಕೂಲಕ್ಕೆ ತಕ್ಕಂತೆ ಅಲ್ಲಿಯ ವಾಯುಗುಣ, ಹವಾಗುಣ, ನಿಸರ್ಗ, ಫಲವತ್ತತೆ, ಜಲಸಂಪತ್ತು, ಆರ್ಥಿಕ ಕ್ರೋಢೀಕರಣ, ಸಂಪತ್ತು ಸರಬರಾಜು ಮಾಡಲು ಅನುಕೂಲಕರ ಸಾರಿಗೆ ಸಂಪರ್ಕ ಇತ್ಯಾದಿ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಮಗೆ ಯೋಗ್ಯವಾದ ಸ್ಥಳದಲ್ಲಿ ನಿರೀಕ್ಷಣಾ ಮಂದಿರಗಳನ್ನು ಇಡಿ ಬಾಗಲಕೋಟೆ ಜಿಲ್ಲೆಯಾದ್ಯಂತ ನಿರ್ಮಿಸಿದ್ದಾರೆ.

## ಬಾದಾಮಿ

ಚಾಲುಕ್ಯರ ರಾಜಧಾನಿಯಾಗಿ ಬಾದಾಮಿ ಚರಿತ್ರೆಯ ಪುಟಗಳಲ್ಲಿ ದಾಖಲಾಗಿ ಅಜರಾಮರ ವಾಗಿದೆ. ಬಾದಾಮಿಯಲ್ಲಿ ಬ್ರಿಟಿಷರು ವಾಸ್ತವ್ಯ ಹೂಡಲು ಸುಸಜ್ಜಿತವಾದ ನಿರೀಕ್ಷಣಾ ಮಂದಿರವನ್ನು ಕ್ರಿ.ಶ.೧೯೦೮ರಲ್ಲಿ ನಿರ್ಮಿಸಿದ್ದಾರೆ. ಬಾದಾಮಿ, ಮಹಾಕೂಟ, ಬನಶಂಕರಿ, ಪಟ್ಟದಕಲ್ಲು, ಐಹೊಳೆ, ಶಿವಯೋಗಮಂದಿರ, ಐತಿಹಾಸಿಕ ಸ್ಥಳಗಳನ್ನು ಸಂರಕ್ಷಣೆ ಮಾಡುವ ಮೂಲ ಉದ್ದೇಶವನ್ನು ಬ್ರಿಟಿಷರು ಹೊಂದಿದ್ದರು. ಬಾದಾಮಿಯಿಂದ ರಾಮದುರ್ಗಕ್ಕೆ ಹೋಗುವ ಮಾರ್ಗದಲ್ಲಿ ನಿರೀಕ್ಷಣಾ ಮಂದಿರ(ಬಂಗಲೆ(IB)ವಿದೆ. ಹತ್ತಿರದಲ್ಲಿಯೇ ಉದ್ಯಾನವನ, ಆಟದ ಮೈದಾನ, ಅಧಿಕಾರಿಗಳಿಗಾಗಿ ವಾಸಿಸಲು ಮನೆಗಳನ್ನು ಇಲ್ಲಿ ಒಂದೆಡೆ ಬ್ರಿಟಿಷರು ನಿರ್ಮಿಸಿದ್ದನ್ನು ಇವತ್ತಿಗೂ ಕಾಣಬಹುದು. ಇವೆಲ್ಲಾ ಕಟ್ಟಡಗಳು ಇಂದು ಸುವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿವೆ. ನಿರೀಕ್ಷಣಾ ಮಂದಿರದ ಮುಂಭಾಗದ ತಳಪಾಯ ಗಜಪುಷ್ಠಾಕಾರ ಅಂದರೆ ವೃತ್ತಾಕಾರದಿಂದ ಕೂಡಿದ್ದು, ಸುತ್ತಲೂ ಗಾಳಿ, ಬೆಳಕಿಗಾಗಿ ಕಿಟಕಿಗಳನ್ನು ಹೊಂದಿದ್ದು, ಮೇಲ್ಛಾವಣಿಯು ವೃತ್ತಾಕಾರದಿಂದ ಹೋಗಿ ಕಟ್ಟಡದ ಮಧ್ಯಬಿಂದುವಿಗೆ ಸೇರಿಕೊಂಡಿದೆ. ಈ ಎಲ್ಲಾ ಸ್ಮಾರಕಗಳ ಮೇಲ್ಛಾವಣಿಗೆ ಕಟ್ಟಿಗೆ, ಮಂಗಳೂರು ಹೆಂಚು ಉಪಯೋಗಿಸಿ ಮಳೆ, ಗಾಳಿ, ಬಿಸಿಲು ಪ್ರತಿಕೂಲವಾಗಿರುವಂತೆ ನಿರ್ಮಿಸಿದ್ದಾರೆ. ಬಂಗಲೆಗೆ ಹೊಂದಿಕೊಂಡು ಎಡಗಡೆ ಮತ್ತು ಬಲಗಡೆ ಕೋಣೆಗಳನ್ನು ಸಹ ನಿರ್ಮಿಸಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಹೊಸ ನಿರೀಕ್ಷಣಾ ಮಂದಿರವನ್ನು ಹಳೆಯ ಬಂಗಲೆಯ ಎಡಗಡೆ ಜಾಗದಲ್ಲಿ ವಿಶಾಲವಾಗಿ ನಿರ್ಮಿಸಿದ್ದಾರೆ. ಬಂಗಲೆಯ ಸುತ್ತಲು ಕಾಂಪೌಂಡ್ ಇರುವುದರಿಂದ ಇದು ಸುರಕ್ಷಿತವಾಗಿದೆ. ಬಂಗಲೆಯ ಹಿಂದಿನ ಭಾಗದಲ್ಲಿ ಕೆಲಸಗಾರರಿಗಾಗಿ ನಿರ್ಮಿಸಿದ ಮೂರು ಕೊಠಡಿಗಳು ಕಾರ್ಯನಿರ್ವಹಿಸದೆ, ಅನಿವಾರ್ಯವಾಗಿ ಹಳೆಯ ವಸ್ತುಗಳ ಸಂಗ್ರಹಣಾ ಕೊಠಡಿಗಳಾಗಿರುವುದು ವಿಪರ್ಯಾಸದ ಸಂಗತಿಯಾಗಿದೆ.

## ಬಾದಾಮಿ ರೈಲು ನಿಲ್ದಾಣ

ಬಾದಾಮಿ ನಗರದಿಂದ ೩ ಕಿ.ಮೀ. ಅಂತರದಲ್ಲಿ ರೈಲು ನಿಲ್ದಾಣವಿದೆ. ಇದನ್ನು ಸ್ಥಳೀಯವಾಗಿ ಕೆಲವರು ಆಡಗಲ್ ಸ್ಟೇಷನ್ ಹಾಗೂ ಬಾದಾಮಿ ಸ್ಟೇಷನ್ ಎಂತಲೂ ಕರೆಯುತ್ತಾರೆ. ಬ್ರಿಟಿಷ್ ಅಧಿಕಾರಿಗಳು ಹುಬ್ಬಳ್ಳಿ, ಗದಗದಿಂದ ರೈಲು ಮಾರ್ಗದ ಮೂಲಕ ಬಾದಾಮಿ ರೈಲು ನಿಲ್ದಾಣಕ್ಕೆ ಬಂದಾಗ ವಸತಿಗೆ ತೊಂದರೆಗಳು ಉಂಟಾಗುವುದನ್ನು ಗಮನಿಸಿ ವಾಸ್ತವ್ಯಕ್ಕಾಗಿ ಸುಸಜ್ಜಿತವಾದ ನಿರೀಕ್ಷಣಾ ಮಂದಿರ(ಬಂಗಲೆ)ವನ್ನು ರೈಲು ನಿಲ್ದಾಣದಲ್ಲಿ ಕಟ್ಟಿಸಿದ್ದಾರೆ. ಬಾದಾಮಿಯಿಂದ ಲೋಕಾಪುರಕ್ಕೆ ಹೊಂದಿಕೊಂಡ ಕುಡಚಿಯವರೆಗೂ ರೈಲು

ಮಾರ್ಗವನ್ನು ನಿರ್ಮಿಸುವ ಯೋಜನೆಯನ್ನು ಬ್ರಿಟಿಷರು ತಯಾರಿಸಿದ್ದರು. ಬ್ರಿಟಿಷರು ಕ್ರೈಸ್ತ ಮತಸ್ಥರಾಗಿದ್ದುದರಿಂದ ಪ್ರಾರ್ಥನೆಗಾಗಿ ರೈಲು ನಿಲ್ದಾಣಕ್ಕೆ ೧ ಕಿ.ಮೀ. ಅಂತರದಲ್ಲಿ ಆಡಗಲ್ ಗ್ರಾಮದಲ್ಲಿ ಚರ್ಚ್‌ನ್ನು ಸಹ ಸ್ಥಾಪಿಸಿದರು. ಇವತ್ತಿಗೂ ಆಡಗಲ್ ಚರ್ಚ(ದೇವಾಲಯ)ದಲ್ಲಿ ಪ್ರಾರ್ಥನೆ, ಬಲಿಪೂಜೆ, ಮಕ್ಕಳ ಕ್ರಿಸ್‌ಮಸ್, ಕ್ರಿಸ್‌ಮಸ್ ಹಬ್ಬ, ವಿಜೃಂಭಣೆಯಿಂದ ನಡೆಯುತ್ತದೆ.

ರೈಲು ನಿಲ್ದಾಣದ ನಿರೀಕ್ಷಣಾ ಮಂದಿರ ತುಂಬಾ ವಿಶಾಲವಾಗಿದ್ದು, ಕೆಂಪು ಶಿಲೆ, ಗಾರೆಗಚ್ಚು, ಕಟ್ಟಿಗೆ, ಮಂಗಳೂರು ಹೆಂಚು ಉಪಯೋಗಿ ಕಟ್ಟಿದ್ದಾರೆ. ಕೆಲವು ವರ್ಷಗಳ ಕಾಲದವರೆಗೂ ಬಂಗಲೆ ಸರಕಾರಿ ಪ್ರೌಢಶಾಲೆ ಕಾರ್ಯ ನಿರ್ವಹಿಸಿದೆ. ಆದರೆ ಈ ಬಂಗಲೆ ಸ್ಮಾರಕದ ಅನಾಥ ಸ್ಥಿತಿ ಹೇಳತೀರದಾಗಿದೆ. ಹಲವಾರು ರೀತಿಯಿಂದ ಬಂಗಲೆ ಅವಸಾನದತ್ತ ಸಾಗುತ್ತಿದೆ.

**ಕಮತಗಿ**

೧೫-೧೬ನೆಯ ಶತಮಾನದಲ್ಲಿ ಆಡಳಿತ ನಡೆಸಿದ ವಿಜಾಪುರದ ಎರಡನೆಯ ಆದಿಲ್‌ಷಾಹಿ ಆಳ್ವಿಕೆಯ ಕಾಲದಲ್ಲಿ ಕೋಟೆಕಲ್ಲ ದೇಸಾಯಿಯವರ ಆಡಳಿತಕ್ಕೊಳಪಟ್ಟ ಗ್ರಾಮ ಕಮತಗಿಯಾಗಿದೆ. ಈ ಪ್ರದೇಶದ ಜಮೀನಿಗೆಲ್ಲ ಒಡೆಯರು ದೇಸಾಯಿಯವರಾಗಿದ್ದು, ಜಮೀನಿನ ಕೆಲಸ ಮಾಡಲು ಕೆಲವು ಜನರನ್ನು ನೇಮಿಸಲಾಗಿತ್ತು. ಇವರಿಗೆ ಕಮತರು ಎನ್ನುತ್ತಿದ್ದರು. ಕಮತರು ಎಂದರೆ ರೈತರು ಎಂದರ್ಥ. ಕಮತರ+ಕೇಯ್=ಕಮತಗಿ, ದೇಸಾಯಿಯವರ ಜಮೀನಿನಲ್ಲಿ ಕೆಲಸ ಮಾಡುವವರು ಅಂದರೆ ಕಮತ ಮಾಡುವವರು ವಾಸವಾಗಿದ್ದ ಸ್ಥಳ ಕಮಟಗಿ, ಕಮತರು ಇರುವ ಗ್ರಾಮ ಕಮತಪುರ ಎಂದು ಹೆಸರು ಬಂದಿದೆ. ನಂತರ ರೂಢಿಯಲ್ಲಿ ಕಮತಗಿ ಎಂದಾಗಿದೆ. ಕಮತಗಿಯು ಮಲಪ್ರಭಾ ನದಿಯ ದಂಡೆಯ ಪ್ರದೇಶವಾಗಿದೆ. ಇಳಕಲ್-ಬಾಗಲಕೋಟೆ ರಾಜ್ಯ ಹೆದ್ದಾರಿ ಮಾರ್ಗ ಮಧ್ಯ ಕಮತಗಿ ಹತ್ತಿರದಲ್ಲಿ ನಿರೀಕ್ಷಣಾ ಮಂದಿರ(ಬಂಗಲೆ)ವನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಕಮತಗಿ ಹಳೆಯ ನಿರೀಕ್ಷಣಾ ಮಂದಿರ ಸ್ಥಳೀಯವಾಗಿ ದೊರೆಯುವ ಗಾರೆಗಚ್ಚು, ಕಪ್ಪು, ಕೆಂಪು ಕಲ್ಲಿನಿಂದ ಕಟ್ಟಿದ್ದಾರೆ. ವಿಶೇಷವಾಗಿ ಬ್ರಿಟಿಷರು ರಸ್ತೆ ಸಾರಿಗೆ ಮೂಲಕ ಚಲಿಸಲು ಅಥವಾ ಪ್ರಯಾಣ ಬೆಳೆಸುತ್ತಿದ್ದರು. ಹಾಗಾಗಿ ನದಿ, ಹಳ್ಳ, ಕೊಳ್ಳ ಬಂದು ರಸ್ತೆ ಸಂಚಾರ ಅಡಚಣೆ ಯಾಗುತ್ತಿತ್ತು. ಇದಕ್ಕೆ ಪರಿಹಾರವಾಗಿ ನಿರೀಕ್ಷಣಾ ಮಂದಿರ(ಬಂಗಲೆ)ಗಳನ್ನು ಬ್ರಿಟಿಷರು ತಮಗೆ ಅನುಕೂಲಕ್ಕಾಗಿ ಕಟ್ಟಿಸಿದರು. ಅಂತಹ ವಸಾಹತು ಕಾಲದ ಸ್ಮಾರಕಗಳಾದ ನಿರೀಕ್ಷಣಾ ಮಂದಿರಗಳು ಇಂದಿಗೂ ಸುವ್ಯವಸ್ಥಿತದಲ್ಲಿದ್ದು ಜನರಿಗೆ ಆಶ್ರಯ ತಾಣಗಳಾಗಿವೆ.

## ಗುಳೇದಗುಡ್ಡ ಮತ್ತು ಗುಳೇದಗುಡ್ಡ ರೈಲು ನಿಲ್ದಾಣ

ತಾಲೂಕು ಕೇಂದ್ರ ಬಾದಾಮಿಯಿಂದ ಉತ್ತರ ದಿಕ್ಕಿಗೆ ೨೦ ಕಿ.ಮೀ. ಅಂತರದಲ್ಲಿ ಗುಳೇದ ಗುಡ್ಡಕ್ಕೆ ೨ ಕಿ.ಮೀ. ಅಂತರದ ಪಶ್ಚಿಮ ದಿಕ್ಕಿನಲ್ಲಿ ರೈಲ್ವೆ ನಿಲ್ದಾಣವಿದೆ. ಅಲ್ಲಿನ ಜನರು ವಸತಿಯಿಂದಾಗಿ ಒಂದು ಗ್ರಾಮವಾಗಿ ನಿರ್ಮಾಣಗೊಂಡಿದ್ದನ್ನು ಗುಳೇದಗುಡ್ಡ ರೈಲ್ವೆ ಸ್ಟೇಷನ್ ಅಥವಾ ಗುಳೇದಗುಡ್ಡ ರೋಡ್ ರೈಲ್ವೆ ಸ್ಟೇಶನ್ ಎಂದು ಕರೆಯಲಾಗಿದೆ. ಗದಗ–ವಿಜಯಪುರ ರೈಲ್ವೆ ಮಾರ್ಗ ಮಧ್ಯ(ಬಾಗಲಕೋಟೆ–ಬಾದಾಮಿ)ದಲ್ಲಿ ಗುಳೇದಗುಡ್ಡ ರೋಡ್ ರೈಲ್ವೆ ನಿಲ್ದಾಣವಿದೆ. ಗುಳೇದಗುಡ್ಡದಲ್ಲಿ ಬ್ರಿಟಿಷರು ಚರ್ಚ, ಶಾಲೆ, ಆಸ್ಪತ್ರೆ, ಅನಾಥಾಶ್ರಮ, ಬಂಗಲೆ, ಇತ್ಯಾದಿ ಸ್ಮಾರಕಗಳನ್ನು ಕಟ್ಟಿಸಿ ವಾಸ್ತವ್ಯ ಮಾಡಿದರು. ಗುಳೇದಗುಡ್ಡಕ್ಕೆ ಸಂಪರ್ಕ ಕಲ್ಪಿಸುವ ಮುಖ್ಯ ಉದ್ದೇಶವಿಟ್ಟುಕೊಂಡು ಇಲ್ಲಿ ರೈಲ್ವೆ ನಿಲ್ದಾಣ ನಿರ್ಮಿಸಿದರು. ರೈಲ್ವೆ ನಿಲ್ದಾಣದಿಂದ ಹಂಗರಗಿ ಕ್ರಾಸ್ ರಸ್ತೆ ಮಾರ್ಗದಲ್ಲಿ ಎರಡು ಕಮಾನ ಹೊಂದಿರುವ ಸೇತುವೆಯನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಬ್ರಿಟಿಷರಿಗೆ ಗುಳೇದಗುಡ್ಡ ಮತ್ತು ಸುಮಡ್ಡಿ ಪ್ರದೇಶಗಳು ಎಲ್ಲಾ ರೀತಿಯ ಮೂಲಭೂತ ಸೌಕರ್ಯವನ್ನು ಹೊಂದಿದ್ದುದರಿಂದ ಇಲ್ಲಿ ನೆಲೆ ನಿಲ್ಲಲು ಕಾರಣವಾಗಿದೆ. ಸಂಪದ್ಭರಿತ ಪ್ರದೇಶಗಳನ್ನು ಕೈವಶ ಮಾಡಿಕೊಳ್ಳುವುದು, ದಂಗೆಗಳನ್ನು ಸ್ಥಳೀಯರ ಸಹಾಯದಿಂದ ಹತ್ತಿಕ್ಕಿ ಅವರ ಮೇಲೆ ಹಿಡಿತ ಸಾಧಿಸಿ ಆಡಳಿತವನ್ನು ನಡೆಸುವುದು ಸ್ಥಳೀಯರಿಂದ ಕ್ರೋಡೀಕೃತ ಸಂಪತ್ತನ್ನು ಸಾರಿಗೆಯ ಮೂಲಕ ತಮ್ಮ ಅನುಕೂಲಕರ ಸ್ಥಳಗಳಿಗೆ ಸಾಗಿಸುವುದು ಬ್ರಿಟಿಷರ ಮುಖ್ಯವಾದ ಉದ್ದೇಶವಾಗಿತ್ತು.

## ಹವೇಲಿ

ಇವತ್ತಿನ ಹವೇಲಿಯು ಮೊದಲನೆಯ ಹೆಸರು 'ಗೋಪಾಳಪುರ' ಎಂದು ಕರೆಯುತ್ತಿದ್ದರು. ಸರ್ ಥಾಮಸ್ ಮನ್ರೋ ಬಾದಾಮಿ ಪ್ರದೇಶವನ್ನು ವಶಪಡಿಸಿಕೊಂಡು ಬಾಗಲಕೋಟೆ, ಗೋಪಾಳಪುರ, ಕಲಾದಗಿ ಪ್ರದೇಶಗಳನ್ನು ಕ್ರಿ.ಶ.೧೮೧೮ ಮೇ ೧೭ ರಂದು ಸಂಪೂರ್ಣ ಬ್ರಿಟಿಷರ ಕೈವಶವಾದವು. ಬಾಗಲಕೋಟೆಯಿಂದ ೨ ಕಿ.ಮೀ. ದೂರದಲ್ಲಿ ಗೋಪಾಳಪುರ, ಘಟಪ್ರಭಾ ನದಿಯ ದಂಡೆಯಲ್ಲಿ ವ್ಯವಸ್ಥಿತ ಸುಂದರ ಪರಿಸರದಲ್ಲಿದೆ. ಗೋಪಾಳಪುರದಲ್ಲಿ ಬ್ರಿಟಿಷರು ತಂಗಲು ಬಂಗಲೆಗಳನ್ನು ನಿರ್ಮಿಸಿದ್ದಾರೆ. ಹವೇಲಿ ಎಂದರೆ ಬೃಹತ್ ಕಟ್ಟಡ, ಮಹಡಿ ಮನೆಗಳೆಂದು ಅರ್ಥ, ಗೋಪಾಳಪುರದಲ್ಲಿ ಬ್ರಿಟಿಷರ ಬಂಗಲೆಗಳು ನಿರ್ಮಾಣವಾದ ಮೇಲೆ ಹವೇಲಿ ಎಂದು ಬ್ರಿಟಿಷರು ಕರೆಯಲು ಆರಂಭಿಸಿದರು. ಹವೇಲಿ ಎಂದು ಹೆಸರು ಇಂದಿಗೂ ಜನರು ಉಚ್ಚರಿಸುತ್ತಿದ್ದಾರೆ. ಬ್ರಿಟಿಷರು ಬಂಗಲೆಗಳು, ಅಧಿಕಾರಿಗಳ ವಾಸದ ಮನೆಗಳು, ಸೈನಿಕರಿಗಾಗಿ ತಂಗಲು ನಿರ್ಮಿಸಿದ ಮನೆಗಳು ಇಂದಿಗೂ ಸಹ ಸುಸಜ್ಜಿತವಾಗಿವೆ. ಬಾಗಲಕೋಟೆಯಿಂದ ಹವೇಲಿಗೆ ಹೋಗಲು ಮಾರ್ಗಸೂಚಿ ಕಲ್ಲಿನಲ್ಲಿ ಕಲೆಕ್ಟರೇಟ್ ಬಂಗ್ಲೆ

೧/೪ ಮೈಲ್ ಎಂದು ಬರೆದು ಮಾರ್ಗಸೂಚಿ ಕಲ್ಲನ್ನು ಹವೇಲಿ ಹತ್ತಿರ ನಿಲ್ಲಿಸಲಾಗಿದೆ. ವಸಾಹತು ಕಾಲದ ಈ ಸ್ಮಾರಕಗಳು ಬಾಗಲಕೋಟೆಯ ತೋಟಗಾರಿಕಾ ವಿಶ್ವವಿದ್ಯಾಲಯದ ಆಡಳಿತ ಕಚೇರಿಗಳಾಗಿ ಕಾರ್ಯನಿರ್ವಹಿಸುತ್ತಿವೆ. ಹವೇಲಿಯ ಬ್ರಿಟಿಷ್ ಬಂಗಲೆ ಅಥವಾ ಸ್ಮಾರಕಗಳು ಇಂದು ಎಷ್ಟೋ ಜನರಿಗೆ ಉದ್ಯೋಗದ ಜೊತೆಗೆ ವಾಸಸ್ಥಾನವಾಗಿ ಭದ್ರವಾದ ನೆಲೆಯಾಗಿವೆ.

**ಸುಮಡ್ಡಿ–(ಬಂಗಲೆ)**

ಗುಳೇದಗುಡ್ಡದಿಂದ ೩ ಕಿ.ಮೀ. ದೂರದ ಸುಮಡ್ಡಿಯಲ್ಲಿ ಕ್ರಿ.ಶ.೧೯೦೩ರಲ್ಲಿ ಬಾಸೆಲ್ ಮಿಶನ್ ಬಾಲಕಿಯರ ವಸತಿಶಾಲೆ ಹಾಗೂ ಐಸ್ಟೆಲ್ಡರ್ ಸ್ಮಾರಕ ಚರ್ಚನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಸುಮಡ್ಡಿ ಸುಂದರ ಪರಿಸರವನ್ನು ಒಳಗೊಂಡ ಎತ್ತರವಾದ ಪ್ರದೇಶವಾಗಿರುವುದರಿಂದ ಬ್ರಿಟಿಷ್ ಅಧಿಕಾರಿಗಳು ಇಲ್ಲಿ ಬಂಗಲೆ, ಚರ್ಚ, ಶಾಲೆ, ವಸತಿ ನಿಲಯ (ಅನಾಥಾಶ್ರಮ) ಇತ್ಯಾದಿಗಳನ್ನು ಇಲ್ಲಿ ನಿರ್ಮಿಸಿದ್ದಾರೆ.

ಸುಮಡ್ಡಿಯಲ್ಲಿ ಬ್ರಿಟಿಷ್ ಅಧಿಕಾರಿಗಳು, ಮೇಲಾಧಿಕಾರಿಗಳು ವಾಸ್ತವ್ಯ ಮಾಡಲು ಸುಂದರವಾದ ಬಂಗಲೆಯನ್ನು ಬ್ರಿಟಿಷರು ಕಟ್ಟಿದ್ದಾರೆ. ಇದು ಗಾಳಿ, ಬೆಳಕು, ವಾತಾವರಣಕ್ಕೆ ತಕ್ಕಂತೆ ವಿಶಾಲವಾದ ಪ್ರಾಂಗಣ, ಊಟದ ಮನೆ, ವಿಶ್ರಾಂತಿ ಕೋಣೆಯನ್ನು ಒಳಗೊಂಡಿದೆ. ಇಂದು ಈ ಬಂಗಲೆ ನಿರ್ವಹಣೆಯ ಕೊರತೆಯಿಂದ ಅವಸಾನದಂಚಿನಲ್ಲಿದೆ. ಬ್ರಿಟಿಷ್ ಅಧಿಕಾರಿಗಳು ಉಪಯೋಗಿಸಿದ ಕೆಲವೊಂದು ಪರಿಕರಗಳಾದ ಮೇಜು, ಕುರ್ಚಿ, ಗಡಿಯಾರ, ಹಳೇಯ ಕಾರು, ಪಾತ್ರೆ, ತಟ್ಟೆ, ಲೋಟ, ಕನ್ನಡಿ ಇತ್ಯಾದಿ ವಸ್ತುಗಳು ಇವತ್ತಿಗೂ ಬಂಗಲೆಯಲ್ಲಿ ಕಾಣಬಹುದು. ಬ್ರಿಟಿಷರು ಊರ ಹೊರಗೆ–ಎತ್ತರವಾದ ಪ್ರಶಾಂತ ಸ್ಥಳ, ನದಿಗೆ ಹತ್ತಿರವಾಗುವ ಸ್ಥಳಗಳಲ್ಲಿ ನಿರೀಕ್ಷಣಾ ಮಂದಿರ, ಬಂಗಲೆ, ಚರ್ಚ ಶಾಲೆಯನ್ನು ನಿರ್ಮಿಸುವ ಮೂಲ ಉದ್ದೇಶ ಏನಾಗಿತ್ತು? ಎಂಬುದು ಇಲ್ಲಿ ವಿವೇಚಿಸಬೇಕಿದೆ. ಅಂದರೆ ಬ್ರಿಟಿಷರು ತಮ್ಮ ಅಧಿಕಾರ ಪ್ರಭುತ್ವದ ಯೋಜನೆಗಳು, ಸ್ಥಳೀಯರಿಗೆ ಗೊತ್ತಾಗದ ರೀತಿಯಲ್ಲಿ ಗುಪ್ತವಾಗಿ ಹೊಸ ತಂತ್ರಗಳು, ಯೋಜನೆಗಳನ್ನು ರೂಪಿಸುವ ಮೂಲ ಉದ್ದೇಶವನ್ನು ಹೊಂದಿದ್ದರು ಎಂಬುದು ಗುರುತಿಸಬಹುದಾಗಿದೆ.

## ೪.೫. ಸಾರ್ವಜನಿಕ ಕಟ್ಟಡಗಳು

**ಮುಧೋಳ: ಆಸ್ಪತ್ರೆ**

ಮುಧೋಳ ನಗರವು ಬಾಗಲಕೋಟೆ ಜಿಲ್ಲೆಯಲ್ಲಿದೆ. ಕವಿ ಚಕ್ರವರ್ತಿ ರನ್ನ, ಘೋರ್ಪಡೆ ಸಂಸ್ಥಾನಿಕರು, ಮುಧೋಳ, ಬೇಟೆ ನಾಯಿ ಈ ಎಲ್ಲ ವೈಶಿಷ್ಟತೆಗಳಿಗೆ ಮುಧೋಳ

ಹೆಸರುವಾಸಿಯಾಗಿದೆ. ಮುಧೋಳದಲ್ಲಿ ಘೋರ್ಪಡೆ ಸಂಸ್ಥಾನಿಕರು ಹಲವಾರು ಸಮಾಜಮುಖಿಯಾಗಿ ಕೆಲಸ ಕಾರ್ಯಗಳನ್ನು ಮಾಡಿದ್ದಾರೆ. ಘೋರ್ಪಡೆ ಸಂಸ್ಥಾನಿಕರೊಂದಿಗೆ ಕೈಜೋಡಿಸಿದ ಬ್ರಿಟಿಷರು ಕ್ರಿ.ಶ.೧೯೨೩ರಲ್ಲಿ ೭ನೇ ಕಿಂಗ್ ಎಡ್ವರ್ಡ್ ಸ್ಮರಣಾರ್ಥವಾಗಿ ಆಸ್ಪತ್ರೆ(KING EDWARD VII MEMORIAL HOSPITAL)ಯನ್ನು ಕಟ್ಟಿಸಿದ್ದಾರೆ. ಇದೇ ಹೆಸರಿನ ಬ್ರಿಟಿಷರ ನಾಣ್ಯವನ್ನು ಸಹ ಸಂಗ್ರಹಿಸಲಾಗಿದೆ. ಈ ಆಸ್ಪತ್ರೆಯನ್ನು ಅಮೃತಶಿಲೆ, ಕಪ್ಪುಶಿಲೆ, ಗಾರೆಗಚ್ಚು ಇಟ್ಟಿಗೆಗಳಿಂದ ಕಟ್ಟಿದ್ದಾರೆ. ಮುಂಬಯಿ ಪ್ರಾಂತಕ್ಕೆ ಮುಧೋಳ ಸೇರಿಕೊಂಡ ಸಂದರ್ಭದಲ್ಲಿ ಈ ಆಸ್ಪತ್ರೆಯನ್ನು ನಿರ್ಮಿಸಿದ್ದಾರೆ. ಇಂದು ಮುಧೋಳ ಸರಕಾರಿ ಆಸ್ಪತ್ರೆ ಎಂದು ಕರೆಯುತ್ತಾರೆ. ಸುಮಾರು ೫೦ ರಿಂದ ೮೦ ಹಾಸಿಗೆಯನ್ನು ಹೊಂದಿದ್ದು, ೪ ಜನ ವೈದ್ಯರು, ಅಗತ್ಯ ಸಿಬ್ಬಂದಿವರ್ಗ, ಮೂಲಭೂತ ಸೌಕರ್ಯಗಳನ್ನು ಹೊಂದಿದ ಉತ್ತಮ ದರ್ಜೆಯ ಆಸ್ಪತ್ರೆ ಇದಾಗಿದೆ. ಈ ಆಸ್ಪತ್ರೆಯ ಕಟ್ಟಡವು ಬೆಂಗಳೂರಿನ ಟೌನ್‌ಹಾಲ್ ಕಟ್ಟಡದ ಮಾದರಿಯಲ್ಲಿದೆ. ಅಂದರೆ ವಸಾಹತುಶಾಹಿಯ ಯುರೋಪಿನ ವಾಸ್ತುಶೈಲಿಯಾದ 'ಕಂಥೋರಿಯನ್' ಅಥವಾ 'ಕಾರಿಂಥಿಯನ' ವಾಸ್ತುಶೈಲಿಯಲ್ಲಿ ಈ ಆಸ್ಪತ್ರೆಯು ನಿರ್ಮಾಣಗೊಂಡಿದೆ. ವಸಾಹತು ಕಾಲಘಟ್ಟದ ಸಂದರ್ಭದಲ್ಲಿ ಬ್ರಿಟಿಷರು ಆರೋಗ್ಯದ ಬಗೆಗೆ ಕಾಳಜಿಯನ್ನು ಹೊಂದಿದ್ದರು ಎಂಬುದಕ್ಕೆ ಮುಧೋಳ ಸರಕಾರಿ ಆಸ್ಪತ್ರೆ ಮಾದರಿಯಾಗಿದೆ. ಸಾವಿರಾರು ಜನರಿಗೆ ಆಶ್ರಯ ನೀಡಿ ಆರೋಗ್ಯ ಸೇವೆಯನ್ನು ಈ ವಸಾಹತು ಕಾಲದ ಸ್ಮಾರಕ ನೀಡುತ್ತಿದೆ. ಇದಕ್ಕೆ ಮುಧೋಳ ಘೋರ್ಪಡೆ ಸಂಸ್ಥಾನಿಕರು ಸಹ ಆರ್ಥಿಕ ಸಹಾಯವನ್ನು ಮಾಡಿದ್ದಾರೆ.

**ಬಾಗಲಕೋಟೆ(ಮೆಟರ್ನಿಟಿ ಆಸ್ಪತ್ರೆ)**

ಬಾಗಲಕೋಟೆಯಲ್ಲಿ Kaniyalal Bacharaj ಅವರು ತಮ್ಮ ತಾಯಿಯ ನೆನಪಿಗಾಗಿ ಅಂದರೆ Tijabai Bacharaj Surana ಸ್ಮರಣಾರ್ಥ Maternity Home ಅನ್ನು ೧೩–೧೦–೧೯೪೩ರಲ್ಲಿ ಕಟ್ಟಿಸಿದ್ದಾರೆ. ಅಂದಿನ ಬಾಂಬೆ ಗವರ್ನರಾದ Sir David John Colville ಅವರಿಂದ ಮೆಟರ್ನಿಟಿ ಹೋಮ್ ಉದ್ಘಾಟನೆಗೊಂಡಿತು. B.A. Sarnad Gouda ಅಧ್ಯಕ್ಷತೆ ವಹಿಸಿದ್ದರು. ಈ ಕಟ್ಟಡ–ಗಾರೆಗಚ್ಚು, ಸೀಮೆಸುಣ್ಣ, ಇಟ್ಟಿಗೆ ಬಳಸಿ ಕಟ್ಟಿದ್ದಾರೆ. ೧೯೦೪ರ ಸಂದರ್ಭದಲ್ಲಿ ಬಾಗಲಕೋಟೆ ಸುತ್ತಮುತ್ತಲಿನ ಪರಿಸರದಲ್ಲಿ ಕಾಲರಾ, ಪ್ಲೇಗ್, ಕುಷ್ಠರೋಗ ಹಾಗೂ ಸಾಂಕ್ರಾಮಿಕ ರೋಗಗಳು ಹರಡಿದ್ದವು. ಈ ನಿಟ್ಟಿನಲ್ಲಿ ಮೆಟರ್ನಿಟಿ ಆಸ್ಪತ್ರೆ ಪ್ರಾರಂಭಗೊಂಡು ಸಕಲ ರೀತಿಯಿಂದ ಜನರಿಗೆ ವೈದ್ಯಕೀಯ ಸೇವೆಯನ್ನು ನೀಡಿ ಯಶಸ್ವಿಯಾಯಿತು. ಕೃಷ್ಣಾ ಮೇಲ್ದಂಡೆ ಯೋಜನೆಯ ಹಿನ್ನೀರಿನಿಂದ ಮುಳುಗಡೆಗೆ ಆಹುತಿಯಾದರೂ ಸಹ ಜನರ ಬಾಯಲ್ಲಿ ಮೆಟರ್ನಿಟಿ ಆಸ್ಪತ್ರೆಯ ವೈದ್ಯಕೀಯ ಸೇವೆ,

ಸಹಾಯ, ಸಹಕಾರ, ಸಮಾಜ ಸೇವೆ ಇಂದಿಗೂ ಸಹ ಶ್ಲಾಘನೀಯವಾಗಿದೆ. ಈ ಸ್ಮಾರಕವು ಇಂದು ಸಂಪೂರ್ಣವಾಗಿ ಅವಸಾನದಂಚಿನಲ್ಲಿದೆ.

ಹಳೇ ಬಾಗಲಕೋಟೆಯ ಸರಕಾರಿ ಆಸ್ಪತ್ರೆಯು ಸಹ ಬ್ರಿಟಿಷರ ವಸಾಹತು ಶೈಲಿಯ ಸ್ಮಾರಕವಾಗಿತ್ತು. ಆಲಮಟ್ಟಿ ಅಣೆಕಟ್ಟಿನ ಹಿನ್ನಿರು ಬಂದಿದ್ದರಿಂದ ಸರಕಾರಿ ಆಸ್ಪತ್ರೆ ಹಳೆಯ ಸ್ಮಾರಕ ನೀರಲ್ಲಿ ಮುಳುಗಡೆಯಾದ ನಂತರ ನವನಗರದಲ್ಲಿ ಹೊಸದಾಗಿ ಜಿಲ್ಲಾ ಆಸ್ಪತ್ರೆಯ ಕಟ್ಟಡ ತಲೆ ಎತ್ತಿ ಇಂದಿಗೂ ಸರಕಾರಿ ದವಾಖಾನೆಯಾಗಿ ಜನರಿಗೆ ವೈದ್ಯಕೀಯ ಸೇವೆಯನ್ನು ಒದಗಿಸುತ್ತಿದೆ.

**ರಸ್ತೆ ಸೇತುವೆಗಳು**

**ವಜ್ರಮಟ್ಟಿ**

ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನ ಪೂರ್ವ ಭಾಗದಲ್ಲಿ ವಜ್ರಮಟ್ಟಿ ಗ್ರಾಮವಿದೆ. ವಜ್ರಮಟ್ಟಿ ಎಂಬ ಗ್ರಾಮದ ಸ್ಥಳ ನಿಷ್ಪತ್ತಿ ಹುಡುಕಿದಾಗ ಗ್ರಾಮನಾಮಗಳಲ್ಲಿ ಹೊಂದಿಕೊಂಡಿದೆ. 'ಗಟ್ಟಿಯಾದ ಮಣ್ಣನ್ನು' ಹೊಂದಿದ ಊರು, ವಜ್ರದಂತೆ ಗಟ್ಟಿಮುಟ್ಟಾದ ಮಣ್ಣನ್ನು ಒಳಗೊಂಡ ಪ್ರದೇಶವಾಗಿರುವುದರಿಂದ ಇದನ್ನು 'ವಜ್ರಮಟ್ಟಿ' ಎಂದು ಕರೆಯಲಾಗಿದೆ. ವಜ್ರಮಟ್ಟಿ ಮುಧೋಳ ಘೋರ್ಪಡೆ ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟಂತಹ ಗ್ರಾಮವಾಗಿದೆ. ವಜ್ರಮಟ್ಟಿಯಿಂದ ಕಾತರಕಿ, ಕುಂದರಗಿ, ಗ್ರಾಮಕ್ಕೆ ರಸ್ತೆ ಮಾರ್ಗ ಕಲ್ಪಿಸಲು ಬ್ರಿಟಿಷರು ವಜ್ರಮಟ್ಟಿಯಲ್ಲಿ ಸೇತುವೆಯನ್ನು ನಿರ್ಮಿಸಿದ್ದಾರೆ. ಈ ಸೇತುವೆಯಿಂದಲೇ ಪಕ್ಕಕ್ಕೆ ೧೫ ಕಿ.ಮೀ. ಕ್ರಮಿಸಿದರೆ ಬ್ರಿಟಿಷರಿಗೆ ಸೆಡ್ಡು ಹೊಡಿದು ಹೋರಾಡಿದ ಬೇಡರ ಊರು ಹಲಗಲಿ ಗ್ರಾಮವಿದೆ. ಘಟಪ್ರಭ ನದಿಯ ನೀರಿನ ಪ್ರವಾಹ ಹೆಚ್ಚಾದಾಗ ವಜ್ರಮಟ್ಟಿ ಮತ್ತು ಕಾತರಕಿ–ಕುಂದರಗಿಯ ಮಾರ್ಗ ಕಡಿತವಾಗುತ್ತಿತ್ತು. ಈ ಸಂಪರ್ಕದ ಅಡಚಣೆಯ ನಿವಾರಣೆಗಾಗಿ ಬ್ರಿಟಿಷರು ಸುಸಜ್ಜಿತವಾದ ಸೇತುವೆಯನ್ನು ಕಟ್ಟಿಸಿ ಜನರಿಗೆ ರಸ್ತೆ ಸಂಚಾರವನ್ನು ಸುಗವ ಗೊಳಿಸಿದ್ದಾರೆ. ಈ ವಸಾಹತು ಕಾಲದ ಸೇತುವೆಯು ಐದು ಕಮಾನುಗಳನ್ನು ಹೊಂದಿದೆ. ಕಪ್ಪುಕಲ್ಲು, ಗಾರೆಗಚ್ಚು, ಕಬ್ಬಿಣದ ಸರಳುಗಳನ್ನು ಬಳಸಿ ಕಟ್ಟಲಾಗಿದೆ. ತುಂಬಾ ವಿಶಾಲವಾದ ಸೇತುವೆ ಇದಾಗಿದ್ದುದರಿಂದ ಈ ಸೇತುವೆ ಕೆಳಗಡೆ ಎತ್ತಿನ ಬಂಡಿ ಚಲಿಸುವಷ್ಟು ವಿಸ್ತಾರವಾಗಿತ್ತು ಎಂಬುದು ಸ್ಥಳೀಯರಿಂದ ಮಾಹಿತಿಯನ್ನು ಪಡೆಯಲಾಗಿದೆ. ಆದರೆ ಇಂದು ಫಲವತ್ತಾದ ಭೂಮಿಯನ್ನು ಜನರು ಅತಿಕ್ರಮಣದ ಪ್ರಭಾವದಿಂದ ಸೇತುವೆಯ ಅರ್ಧಭಾಗವು ಮಣ್ಣಲ್ಲಿ ಹೂತು ಹೋಗಿದೆ. ಸೇತುವೆಯ ಅಕ್ಕಪಕ್ಕ ಕೆಳಭಾಗದಲ್ಲಿಯೇ ಕೃಷಿ ಜಮೀನನ್ನಾಗಿಸಿ ಪರಿವರ್ತಿಸಿ ಉಳುಮೆ ಮಾಡುತ್ತಿದ್ದಾರೆ. ಸೇತುವೆಯ ಸ್ಥಾಪನೆಯ ವರ್ಷವು ಮಣ್ಣಲ್ಲಿ

ಹೂತು ಹೋಗಿರಬಹುದು. ಹಾಗಾಗಿ ನಿಖರವಾಗಿ ಸೇತುವೆಯ ನಿರ್ಮಾಣದ ವರ್ಷ ಗುರುತಿಸುವುದು ಕಷ್ಟಸಾಧ್ಯ. ಆದರೆ ಸೇತುವೆಯ ಮೇಲ್ಭಾಗದ ತಡೆಗೋಡೆಯಲ್ಲಿ ೨೫ ಸಂಕೇತ ಮಾತ್ರ ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಸಂಕೇತ ಕಿ.ಮೀ. ಸೂಚಿಸುವ ಫಲಕವಾಗಿರಬಹುದೆಂದು ಗ್ರಹಿಸಲಾಗಿದೆ.

ಬ್ರಿಟಿಷರು ಹಲಗಲಿಯ ಬೇಡರು ರೂಪಿಸಿದ ಬಂಡಾಯವನ್ನು ಅಡಗಿಸಲು ತಮಗೆ ರಸ್ತೆ ಮಾರ್ಗವು ಸುಗಮವಾಗಿಸುವ ಸಲುವಾಗಿ ವಜ್ರಮಟ್ಟಿಯಲ್ಲಿ ರಸ್ತೆ ಸೇತುವೆಯನ್ನು ನಿರ್ಮಿಸಿದ್ದಾರೆ. ಅದರಂತೆ ಹಲಗಲಿ ಸುತ್ತಮುತ್ತ ರಸ್ತೆ ಸೇತುವೆಗಳನ್ನು ಸಹ ಬ್ರಿಟಿಷರು ನಿರ್ಮಿಸಿದ್ದರು. ಆದರೆ ವಸಾಹತು ಕಾಲದ ಸೇತುವೆಗಳು ಮೂಲ ಸ್ವರೂಪವನ್ನು ಕಳೆದುಕೊಂಡು, ಜೀರ್ಣೋದ್ಧಾರಗೊಂಡು ಹೊಸ ಸೇತುವೆಗಳಾಗಿ ಕಂಗೊಳಿಸುತ್ತಿವೆ.

### ರನ್ನ ಬೆಳಗಲಿ

ಮುಧೋಳ ತಾಲೂಕಿನಲ್ಲಿ ರನ್ನ ಬೆಳಗಲಿ ಗ್ರಾಮವಿದೆ. ಕವಿ ಚಕ್ರವರ್ತಿ ರನ್ನನ ಜನ್ಮಸ್ಥಳದಿಂದ ಹೆಸರು ವಾಸಿಯಾದ ಬೆಳಗಲಿಯು ಕಾಲಾಂತರದಲ್ಲಿ ರನ್ನ ಬೆಳಗಲಿ ಎಂದು ಇತಿಹಾಸ ಪುಟಗಳಲ್ಲಿ ಪ್ರಸಿದ್ಧಿಯಾಯಿತು. ಬೆಳಗಲಿ ಮಹಾಲಿಂಗಪುರ ರಸ್ತೆ ಮಾರ್ಗದಲ್ಲಿ ಬ್ರಿಟಿಷರು ಸೇತುವೆಯನ್ನು ನಿರ್ಮಿಸಿದ್ದಾರೆ. ಸ್ಥಳೀಯವಾಗಿ ದೊರೆಯುವ ಕಪ್ಪುಕಲ್ಲು, ಗಾರೆಗಚ್ಚು, ಸೀಮೆಸುಣ್ಣ ಮಿಶ್ರನ ಮಾಡಿ ಮೂರು ಕಮಾನುಗಳನ್ನೊಳಗೊಂಡು ಸೇತುವೆಯನ್ನು ನಿರ್ಮಿಸಿ ರಸ್ತೆ ಸಂಚಾರಕ್ಕೆ ಸುಗಮ ದಾರಿ ಮಾಡಿಕೊಡಲಾಗಿದೆ. ಇನ್ನು ನೂರಾರು ವರ್ಷಗಳವರೆಗೂ ಗಟ್ಟಿಮುಟ್ಟಾಗಿ ಬಾಳಿಕೆ ಬರುವ ಸೇತುವೆಯನ್ನು ರಸ್ತೆ ಅಗಲೀಕರಣದ ಯೋಜನೆಯಲ್ಲಿ ಸದ್ಯದಲ್ಲಿಯೇ ವಸಾಹತು ಕಾಲದ ರಸ್ತೆ ಸೇತುವೆಯು ನೆಲಸಮವಾಗಲಿದೆ. ಮುಧೋಳದಿಂದ ರನ್ನ ಬೆಳಗಲಿ ಗ್ರಾಮ ೧೯ ಕಿ.ಮೀ. ಅಂತರದಲ್ಲಿದೆ. ಇದೇ ಮಾರ್ಗದ ಮೂಲಕ ಮಹಾಲಿಂಗಪುರ, ರಬಕವಿ, ಬನಹಟ್ಟಿ, ತೇರದಾಳ ಊರುಗಳಿಗೆ ಸಂಪರ್ಕವನ್ನು ಈ ಮಾರ್ಗವೇ ಕೊಂಡಿಯಾಗಿದೆ.

### ಹುನ್ನೂರು

ತಾಲೂಕು ಕೇಂದ್ರ ಜಮಖಂಡಿಯಿಂದ ೪ ಕಿ.ಮೀ. ಅಂತರದಲ್ಲಿ ಹುನ್ನೂರು ಗ್ರಾಮ ಇದೆ. ಜಮಖಂಡಿ ಮಿರಜ ರಸ್ತೆ ಮಾರ್ಗದಲ್ಲಿ ನದಿ, ಹಳ್ಳಕೊಳ್ಳ ಬಂದು ಕಡಿತಗೊಳ್ಳುವ ಸಂಚಾರ ಸುವ್ಯವಸ್ಥಿತವಾಗಿಸಲು ಬ್ರಿಟಿಷರು ಸೇತುವೆಗಳನ್ನು ನಿರ್ಮಿಸಿದ್ದಾರೆ. ಹುನ್ನೂರು ಮಧರಖಂಡಿ ರಸ್ತೆ ಸಂಪರ್ಕ ಕಲ್ಪಿಸಲು ಕೆಂಪು ಕಲ್ಲಿನಿಂದ ನಿರ್ಮಿಸಿದ ಸೇತುವೆ ಇಂದಿಗೂ ಕಂಗೊಳಿಸುತ್ತಿದೆ. ಐದು ಕಮಾನುಗಳನ್ನೊಳಗೊಂಡು ಹಳ್ಳದ ನೀರು ಮತ್ತು ಬೆಟ್ಟದಿಂದ

ಹರಿದು ಬಂದ ನೀರು ಸರಾಗವಾಗಿ ಹರಿಯುವಂತೆ ವಕ್ರ ವಿನ್ಯಾಸದಲ್ಲಿ ಸೇತುವೆಯನ್ನು ಬ್ರಿಟಿಷರು ಕಟ್ಟಿಸಿದ್ದಾರೆ. ಜಮಖಂಡಿ ಪಟವರ್ಧನ ಸಂಸ್ಥಾನಿಕರಿಗೆ ಮತ್ತು ಬ್ರಿಟಿಷರಿಗೂ ಅವಿನಾಭಾವ ಸಂಬಂಧವಿದ್ದಿತು. ಹಾಗಾಗಿ ಬ್ರಿಟಿಷರು ಯುರೋಪ ವಾಸ್ತುಶೈಲಿಯಲ್ಲಿ ಜಮಖಂಡಿಯಲ್ಲಿ ಅರಮನೆ, ಬಂಗಲೆ, ಶಾಲೆ, ಆಸ್ಪತ್ರೆ, ಗ್ರಂಥಾಲಯ, ರಸ್ತೆ ಸೇತುವೆಗಳನ್ನು ನಿರ್ಮಿಸಿದರು. ಪಟವರ್ಧನ ಅರಮನೆಯಲ್ಲಿ ಇಂಗ್ಲೆಂಡ್‌ದಿಂದ ತರಿಸಿಕೊಂಡ ಬೆಲೆ ಬಾಳುವಂತಹ ಪರಿಕರಗಳು ಅರಮನೆಯಲ್ಲಿ ಇಂದಿಗೂ ಕಾಣಬಹುದು.

**ಅನಗವಾಡಿ**

ಬಾಗಲಕೋಟೆಯಿಂದ ಬೀಳಗಿಗೆ ಸಂಪರ್ಕ ಕಲ್ಪಿಸುವ ೩೦ ಕಿ.ಮೀ. ಅಂತರದಲ್ಲಿ ಅನಗವಾಡಿ ಗ್ರಾಮವಿದೆ. ಬೇಸಿಗೆ, ಚಳಿಗಾಲದಲ್ಲಿ ಮಾತ್ರ ಈ ಸಂಚಾರ ಸುಗಮವಾಗಿ ನಡೆಯುತ್ತಿತ್ತು. ಮಳೆಗಾಲದಲ್ಲಿ ಸಂಚಾರ ಬಾರಿ ಸಂಕಷ್ಟದಿಂದ ಕೂಡಿರುತ್ತಿತ್ತು. ಬಾಗಲಕೋಟೆಯಿಂದ ಬೀಳಗಿಗೆ ಹೋಗಬೇಕಾದರೆ ಮಳೆಗಾಲದಲ್ಲಿ ಘಟಪ್ರಭಾ ನದಿಯನ್ನು ದಾಟಲು ಅನಗವಾಡಿ ಬಳಿ ಹರಿಗೋಲಿನ ಮೂಲಕ ದಾಟಬೇಕಾಗಿರುತ್ತಿತ್ತು. ಈ ಸಂದರ್ಭದಲ್ಲಿ ಎಷ್ಟೋ ಬಾರಿ ಹರಿಗೋಲು ನದಿಯಲ್ಲಿ ಮುಳುಗಿ ಅನೇಕ ಸಾವು ನೋವುಗಳು ಸಂಭವಿಸಿವೆ. ಇದನ್ನು ಗಮನಿಸಿದ ಬ್ರಿಟಿಷರು ಇಲ್ಲಿ ಸೇತುವೆಯನ್ನು ನಿರ್ಮಿಸಿದರು. ಮುದೊಂದು ದಿನ ಈ ಸೇತುವೆಯು ಸಹ ನದಿಯ ರಬಸದಲ್ಲಿ ಮುಳುಗಿ ಮತ್ತೇ ರಸ್ತೆ ಸಂಚಾರವು ತಟಸ್ಥವಾಗುತ್ತಿತ್ತು. ಬ್ರಿಟಿಷರ ಆಡಳಿತದ ಸಂದರ್ಭದಲ್ಲಿ ಅಂದರೆ ಕ್ರಿ.ಶ.೧೮೨೦ರಲ್ಲಿ ಬೆಳಗಾವಿಯಿಂದ ಯಾದವಾಡ, ಕಲಾದಗಿ ಮಾರ್ಗವಾಗಿ ಬಿಜಾಪುರಕ್ಕೆ ಹೋಗಲು ರಸ್ತೆಯಿದ್ದಿತ್ತು. ಕ್ರಿ.ಶ.೧೮೪೦ರಲ್ಲಿ ಬ್ರಿಟಿಷರು ಮುಂಬಯಿ ಕರ್ನಾಟಕದ ಸಾರಿಗೆ ಸಂಪರ್ಕ ವ್ಯವಸ್ಥೆಯ ಬಗ್ಗೆ ತೀವ್ರವಾಗಿ ಯೋಚಿಸಲು ಆರಂಭಿಸಿದ್ದರು. ವಾಣಿಜ್ಯ ವಹಿವಾಟು, ಆರ್ಥಿಕ ದೃಷ್ಟಿಯಿಂದ ಬ್ರಿಟಿಷರು ಸುಧಾರಣೆ ಕಾರ್ಯಕ್ಕೆ ಗಮನಕೊಟ್ಟು ೧೯೨೦ ವೇಳೆಗೆ ಅನಗವಾಡಿ ಮತ್ತು ಕೋರ್ತಿ ಕೋಲ್ಹಾರ ಬಳಿ ಸುಸಜ್ಜಿತವಾದ ಸೇತುವೆಯನ್ನು ನಿರ್ಮಿಸಲು ಬ್ರಿಟಿಷರು ಮುಂದಾದರು. ಅನಗವಾಡಿ ಸೇತುವೆ ೪೮೦ ಮೀ. ಉದ್ದದಿಂದ ಕೂಡಿದ್ದು, ೧.೨೮ ಲಕ್ಷ ವೆಚ್ಚದಲ್ಲಿ ನಿರ್ಮಾಣಗೊಂಡಿದ್ದು ವಿಶೇಷವಾಗಿದೆ. ಇಲ್ಲಿ ನೀರಿನ ಶುದ್ಧಿಕರಣ ಘಟಕ ಸ್ಥಾಪಿಸಿರುವುದರಿಂದ ಸುತ್ತಮುತ್ತಲಿನ ಹಳ್ಳಿಗಳಿಗೆ ಕುಡಿಯಲು ನೀರಿನ ಸರಬರಾಜು ಸರಾಗವಾಗಿದೆ. ಇದರ ತತ್ಪರಿಣಾಮವಾಗಿ ವರ್ಷದ ಒಂಭತ್ತು ತಿಂಗಳೂ ಸಂಚಾರ ಮುಕ್ತವಾಯಿತು. ವರ್ಷವಿಡೀ ರಸ್ತೆ ಸಂಚಾರ ಸುಗಮವಾಗಲು ಈ ಭಾಗದ ಜನರು ಹೋರಾಟದ ಪ್ರತಿಫಲವಾಗಿ ಇಂದು ಅನಗವಾಡಿಯಲ್ಲಿ ಬೃಹತ್ತಾದ ಹೊಸ ಸೇತುವೆಯು ತಲೆಯೆತ್ತಿದೆ. ಬ್ರಿಟಿಷರು ನಿರ್ಮಿಸಿದ ಸೇತುವೆಯನ್ನು

ಬೇಸಿಗೆಯಲ್ಲಿ ಮಾತ್ರ ನೋಡಲು ಸಾಧ್ಯವಾಗುತ್ತದೆ. ಬೇಸಿಗೆಯಲ್ಲಿ ನೀರಿನ ಪ್ರಮಾಣ ಇಳಿಮುಖವಾಗಿರುತ್ತದೆ.

**ಕಮತಗಿ**

೧೫-೧೬ನೆಯ ಶತಮಾನದಲ್ಲಿ ಆಡಳಿತ ನಡೆಸಿದ ವಿಜಾಪುರದ ಎರಡನೆಯ ಆದಿಲ್‌ಷಾಹಿ ಆಳ್ವಿಕೆಯ ಕಾಲದಲ್ಲಿ ಕೋಟೆಕಲ್ಲು ದೇಸಾಯಿಯವರ ಆಡಳಿತಕ್ಕೊಳಪಟ್ಟ ಗ್ರಾಮ ಕಮತಗಿಯಾಗಿದೆ. ಈ ಪ್ರದೇಶದ ಜಮೀನಿಗೆಲ್ಲ ಒಡೆಯರು ದೇಸಾಯಿಯವರಾಗಿದ್ದು, ಜಮೀನಿನ ಕೆಲಸ ಮಾಡಲು ಕೆಲವು ಜನರನ್ನು ನೇಮಿಸಲಾಗಿತ್ತು. ಇವರಿಗೆ ಕಮತರು ಎಂದು ಕರೆಯುತ್ತಿದ್ದರು. ಕಮತರು ಎಂದರೆ ರೈತರು ಎಂದರ್ಥ. ಕಮತರ+ಕೇಯ್=ಕಮತಗಿ, ದೇಸಾಯಿಯವರ ಜಮೀನಿನಲ್ಲಿ ಕೆಲಸ ಮಾಡುವವರು ಅಂದರೆ ಕಮತ ಮಾಡುವವರು ವಾಸವಾಗಿದ್ದ ಸ್ಥಳ ಕಮತಗಿ, ಕಮತರು ಇರುವ ಗ್ರಾಮ ಕಮತಪುರ ಎಂದು ಹೆಸರು ಬಂದಿದೆ. ನಂತರ ರೂಢಿಯಲ್ಲಿ ಕಮತಗಿ ಎಂದಾಗಿದೆ. ಕಮತಗಿ ರಾಮಥಾಳ ರಸ್ತೆ ಸಂಪರ್ಕ ಕಲ್ಪಿಸಲು ಬ್ರಿಟಿಷರು ಒಂದು ದೊಡ್ಡ ಸೇತುವೆಯನ್ನು ನಿರ್ಮಿಸಿದ್ದಾರೆ. ಇಲ್ಲಿ ಮಲಪ್ರಭಾನದಿ ಹಾದು ಹೋಗಿದೆ. ಹಾಗಾಗಿ ರಸ್ತೆ ಸಂಚಾರ ಮಳೆಗಾಲದಲ್ಲಿ ಬ್ರಿಟಿಷರಿಗೆ ತೊಂದರೆಯಾಗಿರುವುದನ್ನು ಕಂಡು ೨೨ ಕಮಾನುಗಳುಳ್ಳ ವ್ಯವಸ್ಥಿತ ಸೇತುವೆಯನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಕಪ್ಪುಕಲ್ಲು, ಗಾರೆಗಚ್ಚು, ಕಬ್ಬಿಣದ ಸರಳುಗಳನ್ನು ಜೋಡಿಸಿ, ಸುಮಾರು ೮೦ ರಿಂದ ೧೦೦ ಮೀಟರ್ ಉದ್ದದ ಸೇತುವೆ ನಿರ್ಮಿಸಿ ಜನರಿಗೆ ಹಾಗೂ ಬ್ರಿಟಿಷರು ತಮಗಾಗಿ ಅನುಕೂಲವನ್ನು ಮಾಡಿಕೊಂಡರು. ಇಲಕಲ್-ಬಾಗಲಕೋಟ ರಾಜ್ಯ ಹೆದ್ದಾರಿ ಮಾರ್ಗ ಮಧ್ಯ ಕಮತಗಿ ಹತ್ತಿರದಲ್ಲಿ ನಿರೀಕ್ಷಣಾ ಮಂದಿರ(ಬಂಗಲೆ)ವನ್ನು ಸಹ ಬ್ರಿಟಿಷರು ನಿರ್ಮಿಸಿದ್ದಾರೆ. ಕಮತಗಿ ಹಳೆಯ ಸೇತುವೆ ಪದೇ ಪದೇ ನೀರಲ್ಲಿ ಮುಳಗಿ ಸಂಚಾರಕ್ಕೆ ತೊಂದರೆಯಾದುದ್ದರಿಂದ ಪಕ್ಕದಲ್ಲಿಯೇ ದೊಡ್ಡದಾದ ಹೊಸ ಸೇತುವೆಯನ್ನು ನಿರ್ಮಿಸಲಾಗಿದೆ. ಆದರೆ ನೀರಿನ ಪ್ರವಾಹ ಇಳಿಮುಖವಾದ ಮೇಲೆ ಬ್ರಿಟಿಷರು ನಿರ್ಮಿಸಿದ ವಸಾಹತು ಕಾಲದ ಸ್ಮಾರಕ ಸೇತುವೆಯು ಮತ್ತೆ ಸಂಚಾರಕ್ಕೆ ದಾರಿ ಮಾಡಿಕೊಟ್ಟು ಇಂದಿಗೂ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿದೆ. ಸೇತುವೆಯಲ್ಲಿ ಒಂದು ಸಣ್ಣ ಕಲ್ಲು ಸಹ ಬಿರುಕು ಬಿಡದೇ ಹಳೆಯ ಸ್ಮಾರಕ ಸೇತುವೆ ಗಟ್ಟಿಮುಟ್ಟಾಗಿದೆ. ಗುಳೇದಗುಡ್ಡ, ಬಾದಾಮಿಯಿಂದ ಬಂದು ಕಮತಗಿಯಲ್ಲಿ ಬ್ರಿಟಿಷ ಅಧಿಕಾರಿಗಳು ವಾಸ್ತವ್ಯ ಮಾಡಿ ಈ ಸೇತುವೆಯ ಮೂಲಕ ಹುನಗುಂದ, ಇಲಕಲ್ಲ ಮಾರ್ಗವಾಗಿ ಬಳ್ಳಾರಿಗೆ ಪ್ರಯಾಣ ಬೆಳೆಸಲು ಈ ರಸ್ತೆ ಸಂಪರ್ಕ ಕೊಂಡಿಯಾಗಿದೆ.

## ಕಲಾದಗಿ

ಬಾಗಲಕೋಟೆ ತಾಲೂಕಿನ ಕಲಾದಗಿಯು ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಜಿಲ್ಲಾ ಕೇಂದ್ರವಾಗಿದ್ದು, ಇಲ್ಲಿ ಬ್ರಿಟಿಷರ ಗೋರಿಗಳು, ನಿರೀಕ್ಷಣಾ ಮಂದಿರ, ವಸತಿ ಗೃಹಗಳು, ಶಾಲೆಯನ್ನು ನಿರ್ಮಿಸಿದ್ದಾರೆ. ಕಲಾದಗಿಯಿಂದ ಅಂಕಲಗಿ–ಶಾರದಾಳ ಮಾರ್ಗದ ಮಧ್ಯದಲ್ಲಿ ರಸ್ತೆ ಸೇತುವೆಯನ್ನು ನಿರ್ಮಿಸಿದ್ದಾರೆ. ಎರಡೂ ದಂಡೆಗೆ ಮೂರು ಮೂರು ಕಮಾನುಗಳನ್ನು ಹೊಂದಿ, ಮಧ್ಯದಲ್ಲಿ ನಾಲ್ಕು ಕಮಾನುಗಳುಳ್ಳ ಸೇತುವೆ ಇದಾಗಿದೆ. ಕಪ್ಪುಕಲ್ಲು, ಚಿಪ್ಪು ಕಲ್ಲು, ಗಾರೆಗಚ್ಚು, ಸೀಮೆಸುಣ್ಣ ಕಚ್ಚಾ ಸಾಮಗ್ರಿಯನ್ನು ಉಪಯೋಗಿಸಿ ಕಟ್ಟಲಾಗಿದ್ದು, ಬೃಹತ್ತಾದ ಹಳ್ಳ ಹರಿಯುವುದರಿಂದ ಇಲ್ಲಿ ರಸ್ತೆ ಸಂಪರ್ಕ ಕಡಿತವಾಗುತ್ತಿತ್ತು. ಈ ಪ್ರದೇಶದಲ್ಲಿಯೇ ಬ್ರಿಟಿಷ್ ಅಧಿಕಾರಿಗಳ ವಸತಿಗೃಹಗಳು ಮತ್ತು ಬಂಗಲೆ ಇದ್ದವು. ಆದರೆ ಕಲಾದಗಿಯಿಂದ ವಿಜಯಪುರಕ್ಕೆ ಜಿಲ್ಲಾ ಕೇಂದ್ರವನ್ನು ವರ್ಗಾಯಿಸುವಾಗ ಈ ವಸತಿಗೃಹಗಳು, ಬಂಗಲೆಗಳೆಲ್ಲವನ್ನು ನೆಲಸಮ ಮಾಡಲಾಯಿತು. ಮುಂದೆ ಈ ಸ್ಥಳವನ್ನು ಸ್ವಚ್ಛಗೊಳಿಸಿ ಕೃಷಿಯ ಚಟುವಟಿಕೆಗಳನ್ನು ಆರಂಭಿಸಲಾಯಿತು. ಈ ಹೊಲಗಳಿಗೆ ಇಂದಿಗೂ ಬಂಗಲೆದಾರ ಹೊಲ(ಬಂಗಲೆದಾರ ಜಮೀನು) ಎಂದು ಕರೆಯುತ್ತಾರೆ. ಎಂಬುದು ಸ್ಥಳೀಯರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಸೇತುವೆಯು ಇಂದಿಗೂ ಸಹ ಗಟ್ಟಿಮುಟ್ಟಾಗಿದ್ದು, ಎಲ್ಲಿಯೂ ಸಹ ಸಣ್ಣ ಬಿರುಕು ಕಾಣಿಸಿಕೊಂಡಿಲ್ಲ. ಅದೇ ರೀತಿ ಕಲಾದಗಿ ಖಜ್ಜಿಡೋಣಿ ಮಾರ್ಗದಲ್ಲಿ ಒಂದು ಸೇತುವೆಯನ್ನು ಬ್ರಿಟಿಷರು ನಿರ್ಮಿಸಿದ್ದರು. ಆದರೆ ರಸ್ತೆ ಅಗಲೀಕರಣದ ನೆಪದಲ್ಲಿ ಹಳೆಯ ಸೇತುವೆ ನೆಲಸಮಗೊಂಡು ಹೊಸ ಸೇತುವೆ ತಲೆ ಎತ್ತಿದೆ. ಬ್ರಿಟಿಷರಿಗೆ ವಾಸಿಸಲು ಯೋಗ್ಯವಾದ ವಾತಾವರಣ ಕಲಾದಗಿಯಲ್ಲಿದ್ದುದರಿಂದ ಜಿಲ್ಲಾ ಕೇಂದ್ರವನ್ನು ರಚಿಸಿಕೊಂಡು ಇಲ್ಲಿಯ ಸುತ್ತಮುತ್ತ ಸ್ಥಳೀಯರ ಪ್ರತಿಭಟನೆಗಳನ್ನು ಹತ್ತಿಕ್ಕುವ ಕಾರ್ಯವನ್ನು ಬ್ರಿಟಿಷರು ಕೈಗೊಂಡರು. ಅಂಕಲಗಿ, ಶಾರದಾಳ, ಭಂಟನೂರು, ಜುನ್ನೂರು ಈ ಪ್ರದೇಶಗಳಲ್ಲಿ ಹೇರಳವಾಗಿ ವಿವಿಧ ತಳಿಯ ಹಣ್ಣುಗಳಾದ ದಾಳಿಂಬೆ, ಲಿಂಬೆ, ಪೇರಲು, ಚಿಕ್ಕು, ನೇರಳೆ, ಮಾವು, ಸೀತಾಫಲ, ದ್ರಾಕ್ಷಿ ಹಾಗೂ ತರಕಾರಿಗಳನ್ನು ಋತುಮಾನಕ್ಕನುಸಾರವಾಗಿ ಬೆಳೆಯುತ್ತಾರೆ. ಇವುಗಳನ್ನು ತಮ್ಮ ನಾಡಿಗೆ ಸಾಗಿಸಲು ವ್ಯವಸ್ಥಿತ ರಸ್ತೆ ಮಾರ್ಗದಲ್ಲಿ ಸೇತುವೆಗಳನ್ನು ಬ್ರಿಟಿಷರು ನಿರ್ಮಿಸಿದರು.

## ಲೋಕಾಪುರ

ಲೋಕಾಪುರ ಗ್ರಾಮದ ಬಗ್ಗೆ ಮೊದಲು ರಾಷ್ಟ್ರಕೂಟರ ಕಾಲದ ಕೊಣ್ಣೂರಿನ ಅಮೃತ ಲಿಂಗೇಶ್ವರ ದೇವಸ್ಥಾನದ ಎದುರಿಗಿನ ಶಾಸನದಲ್ಲಿ ಉಲ್ಲೇಖವಿದೆ. ರಾಷ್ಟ್ರಕೂಟರ ಅರಸ ನೃಪತುಂಗ ತನ್ನ ಬಂಟನಾದ(ದಂಡನಾಯಕ) ಚಲ್ಲಕೇತನ ವಂಶದ ರಾಜ

ವೀರಬಂಕೇಯನ ಮಗನಾದ ಲೋಕಾಧಿತ್ಯ(ಲೋಕಟೆ)ನು ಕ್ರಿ.ಶ.೮೯೮ರಲ್ಲಿ ಲೋಕಾಪುರ ನಿರ್ಮಿಸಿದನು. ಲೋಕಾಪುರದಲ್ಲಿ ಹರಿ, ಹರ, ಜಿನ, ಸುತ ಹೀಗೆ ನಾಲ್ಕು ಧರ್ಮಗಳ ದೇವಾಲಯಗಳನ್ನು ನಿರ್ಮಿಸಿದನು. ಅದರಂತೆ ಲೋಕಮಹೇಶ್ವರಿ ಗುಡಿ, ಲೋಕನಾಥ ಬಸದಿ, ಲೋಕ ಸಮುದ್ರವನ್ನು ಸಹ ನಿರ್ಮಾಣ ಮಾಡಿದುದರ ಬಗ್ಗೆ ಶಾಸನದಲ್ಲಿ ಮಾಹಿತಿಯನ್ನು ಉಲ್ಲೇಖಿಸಲಾಗಿದೆ.[೨೪] ಚಲ್ಲಕೇತನರು ಜೈನಧರ್ಮೀಯರಾಗಿದ್ದರಿಂದ ಆಗಿನ ಕಾಲದಲ್ಲಿ ಜಿನ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವೂ ಕೂಡಾ ದಾಖಲಾಗಿರುವ ವಿಷಯ ಲಭ್ಯವಾಗುತ್ತದೆ.

ಲೋಕಾಪುರ-ಬಾಗಲಕೋಟೆ ರಸ್ತೆ ಮಾರ್ಗದಲ್ಲಿ ಬ್ರಿಟಿಷರು ಕ್ರಿ.ಶ.೧೮೮೭ರಲ್ಲಿ ಸುಸಜ್ಜಿತವಾದ ಸೇತುವೆಯನ್ನು ನಿರ್ಮಿಸಿದ್ದರು. ರಸ್ತೆ ಅಗಲೀಕರಣ ಸಂದರ್ಭದಲ್ಲಿ ಈ ಸೇತುವೆಯನ್ನು ನೆಲಸಮ ಮಾಡಿ ಹೊಸದಾದ ಸೇತುವೆಯನ್ನು ಇದೇ ಸ್ಥಳದಲ್ಲಿ ಕಟ್ಟಲಾಗಿದೆ. ಬ್ರಿಟಿಷರು ನಿರ್ಮಿಸಿದ ಸೇತುವೆಯು(೧೮೮೭ ರಿಂದ ೨೦೦೮) ೧೨೧ ವರ್ಷಗಳ ಕಾಲದವರೆಗೂ ಜನರ ಸೇವೆಗೆ ಮುಕ್ತವಾಗಿತ್ತು. ಈ ಸೇತುವೆಯನ್ನು ನೆಲಸಮ ಮಾಡುವಾಗ ಯಂತ್ರಗಳೇ(ಜೆ.ಸಿ.ಬಿ. ಹಿಟಾಚಿ) ನೆಲಕುರುಳಿ ಬಿದ್ದವು. ಇದರಿಂದ ನಾವು ಗಮನಿಸಬೇಕಾದ ಅಂಶವೆಂದರೆ ಸೇತುವೆ ಇಷ್ಟೊಂದು ಗಟ್ಟಿಮುಟ್ಟಾಗಿರಲು ಬ್ರಿಟಿಷರು ಬಳಸಿದ ಕಚ್ಚಾಸಾಮಗ್ರಿಗಳು, ತಾಂತ್ರಿಕತೆ, ವಾಸ್ತುಶೈಲಿ, ಸೇತುವೆಯ ರಚನಾ ವಿನ್ಯಾಸ, ಶ್ರಮಿಕರ ಕೈಚಳಕ ಇತ್ಯಾದಿ ಮಹತ್ವದ ಅಂಶಗಳನ್ನು ಇಲ್ಲಿ ದಾಖಲಿಸಬೇಕಾದ ಅವಶ್ಯಕತೆಯಿದೆ.

ಬ್ರಿಟಿಷರು ಕಲಾದಗಿಯಿಂದ ಬೆಳಗಾವಿಗೆ ಹೋಗಲು ತಮಗೆ ಅನುಕೂಲಕ್ಕಾಗಿ ಈ ಸೇತುವೆಯನ್ನು ನಿರ್ಮಿಸಿದ್ದರು. ಲೋಕಾಪುರದಲ್ಲಿ ಬ್ರಿಟಿಷ ಅಧಿಕಾರಿಗಳು ತಂಗಲು ನಿರೀಕ್ಷಣಾ ಮಂದಿರವನ್ನು ಸಹ ಲೋಕಾಪುರದಲ್ಲಿ ಕಟ್ಟಿಸಿದ್ದಾರೆ. ವಸಾಹತು ಕಾಲದ ಹಳೆಯ ಸೇತುವೆಯನ್ನು ಬ್ರಿಟಿಷರು ಕೆಂಪುಕಲ್ಲು, ಗಾರೆಗಚ್ಚು, ಸೀಮೆಸುಣ್ಣ, ಕಬ್ಬಿಣದ ಸರಳುಗಳನ್ನು ಉಪಯೋಗಿಸಿ ಕಟ್ಟಿಸಿದ್ದರು. ಹಳ್ಳದ ನೀರಿನ ರಭಸವನ್ನು ತಡೆಯಲು ಸೇತುವೆ ಕೆಳಗಿನ ಭಾಗ ಆಯತಾಕಾರಕ್ಕೆ ಹೊಂದಿಕೆಯಾಗಿ ಮೇಲ್ಭಾಗ ಕಿರಿದಾಗುತ್ತಾ ಬಂದು ದುಂಡಾಕೃತಿಯಲ್ಲಿ ಕಾಲಮ(ಕಂಬ)ಗಳನ್ನು ವಿಸ್ತಾರವಾಗಿ ನಿರ್ಮಿಸಿದ್ದಾರೆ. ಮೇಲ್ಭಾಗದಲ್ಲಿ ಅಗಲ ಕಡಿಮೆಯಾಗಿ ಒಂದೇ ಬಸ್ಸು ಅಥವಾ ಲಾರಿ ಚಲಿಸುವಷ್ಟು ವಿಸ್ತಾರ ಹೊಂದಿತ್ತು. ಸೇತುವೆಯ ಉದ್ದ ೫೦ ಮೀಟರ್ ಇದ್ದಿತ್ತು. ಜನಸಂಖ್ಯೆ ಹಾಗೂ ವಾಹನಗಳ ದಟ್ಟನೆಗಳಿಂದ ಅನಿವಾರ್ಯವಾಗಿ ರಸ್ತೆ ಅಗಲೀಕರಣದ ನೆಪದಲ್ಲಿ ವಸಾಹತು ಕಾಲದ ಸೇತುವೆಯನ್ನು ನೆಲಕುರುಳಿಸಿ, ಎರಡು ಲಾರಿ ಅಥವಾ ಎರಡು ಬಸ್ಸು ಚಲಿಸುವಷ್ಟು ಅಗಲದ ವಿಸ್ತಾರವನ್ನು ಹೊಂದಿದ ಸೇತುವೆಯನ್ನು ೨೦೦೮ರಲ್ಲಿ

ನಿರ್ಮಿಸಲಾಗಿದೆ. ಆದರೆ ಹಳೆಯ ಸೇತುವೆಯು ಹಿರಿಯರಲ್ಲಿ ಮಾತ್ರ ನೆನಪಾಗಿ ಉಳಿದು ಚರಿತ್ರೆಯಲ್ಲಿ ದಾಖಲಾಗಿದೆ.

**ರಬಕವಿ–ಬನಹಟ್ಟಿ**

ಬಾಗಲಕೋಟೆ ಜಿಲ್ಲೆಯ ರಬಕವಿ–ಬನಹಟ್ಟಿ ಪ್ರದೇಶಗಳು ಸಂಪದ್ಭರಿತವಾಗಿದ್ದುದರಿಂದ ಬ್ರಿಟಿಷರ ಕೈವಶವಾದವು. ಬ್ರಿಟಿಷರ ಆಡಳಿತದ ಅವಧಿಯಲ್ಲಿ ರಬಕವಿ–ಬನಹಟ್ಟಿಗೆ 'ಕರ್ನಾಟಕದ ಮ್ಯಾಂಚೆಸ್ಟರ್' ಎಂದು ಕರೆಯುತ್ತಿದ್ದರು. ಬನಹಟ್ಟಿ–ರಾಂಪುರ ರಸ್ತೆ ಸಂಪರ್ಕವನ್ನು ಕಲ್ಪಿಸಲು ಇಲ್ಲಿ ಬ್ರಿಟಿಷರು ಸೇತುವೆಯನ್ನು ನಿರ್ಮಿಸಿದ್ದಾರೆ. ಸ್ಥಳೀಯವಾಗಿ ದೊರೆಯುವ ಕಲ್ಲು, ಸೀಮೆಸುಣ್ಣ, ಗಾರೆಗಚ್ಚನ್ನು ಉಪಯೋಗಿಸಿ ಈ ವಸಾಹತು ಕಾಲದ ಸೇತುವೆಯನ್ನು ಕಟ್ಟಿದ್ದಾರೆ. ಇಂಜಿನೀಯರರು ಮತ್ತು ತಂತ್ರಜ್ಞಾನಿಗಳು ಬ್ರಿಟಿಷ ಅಧಿಕಾರಿಗಳಾಗಿದ್ದು, ಶ್ರಮಿಕ ವರ್ಗ ಮಾತ್ರ ಸ್ಥಳೀಯರಾಗಿದ್ದರು. ನೂರಾರು ವರ್ಷದ ಹಳೆಯದಾದ ಸೇತುವೆಯು ಎಲ್ಲಿಯೂ ಸಹ ಸಣ್ಣ ಬಿರುಕು ಬಿಡದೇ ಗಟ್ಟಿಮುಟ್ಟಾಗಿ ಇದ್ದುಕೊಂಡು ಬನಹಟ್ಟಿ–ರಾಂಪುರ ಸಂಪರ್ಕದ ಕೊಂಡಿಯಾಗಿ ಇಂದಿಗೂ ಕಾರ್ಯವನ್ನು ನಿರ್ವಹಿಸುತ್ತಿದೆ. ರಬಕವಿ–ಬನಹಟ್ಟಿ ಪ್ರದೇಶಗಳು ಸೊಲ್ಲಾಪುರಕ್ಕೆ ಸಂಪರ್ಕವನ್ನು ಹೊಂದಿರುವ ನಗರಗಳಾಗಿ ಬೆಳೆದಿವೆ. ಜಮಖಂಡಿಯಿಂದ ಪಶ್ಚಿಮಕ್ಕೆ ೨೦ ಕಿ.ಮೀ. ದೂರದಲ್ಲಿರುವ ರಬಕವಿ–ಬನಹಟ್ಟಿ ಅವಳಿ ಪಟ್ಟಣಗಳು ನೇಕಾರಿಕೆಯ ಕೇಂದ್ರವಾಗಿದ್ದು, ಮೊದಲು ಸಾಂಗಲಿ ಸಂಸ್ಥಾನಕ್ಕೆ ಸೇರಿದ್ದಂತಹ ಈ ನಗರಗಳು ಸಾಂಗಲಿಯ ಅರಸನಾದ ಚಿಂತಾಮಣಿರಾವ್ ಅಪ್ಪಾಸಾಹೇಬ್ ರಬಕವಿಯಲ್ಲಿ ೧೮೨೨ರಲ್ಲಿ ಪೇಟೆಯನ್ನು ಕಟ್ಟಿಸಿದನು. ಈ ಸ್ಥಳದಲ್ಲಿ ಈಗ ರಬಕವಿ, ಬನಹಟ್ಟಿ, ಹೊಸೂರು ಮತ್ತು ರಾಂಪುರಗಳೆಂಬ ನಾಲ್ಕು ಊರುಗಳು ಒಟ್ಟಿಗೆ ಸೇರಿಸಿಕೊಂಡು ಪುರಸಭೆಯಾಗಿತ್ತು. ಆದರೆ ಈ ರಬಕವಿ–ಬನಹಟ್ಟಿಯು ಈಗ ನಗರಸಭೆಯಾಗಿ ಮಾರ್ಪಾಡು ಹೊಂದಿದೆ. ರಬಕವಿಯಲ್ಲಿ ರೆಬ್ಬೆಕಬ್ಬೆ ಎಂಬ ಗ್ರಾಮದೇವತೆಯಿಂದ ಈ ನಗರಕ್ಕೆ 'ರಬಕವಿ' ಎಂಬ ಹೆಸರು ಬಂದಿದೆ ಎಂಬ ಅಭಿಪ್ರಾಯವಿದೆ. ವಂಶಪಾರಂಪರ್ಯವಾಗಿ ಬನಹಟ್ಟಿಯಲ್ಲಿ ಬೆಳೆದು ಬಂದಿರುವ ಕೈಮಗ್ಗದ, ನೇಕಾರಿಕೆಯು, ಬಟ್ಟೆ ತಯಾರಿಕೆ ಕಸಬು ಭಾರತದಲ್ಲಿಯೇ ಜನಪ್ರಿಯತೆಯನ್ನು ಪಡೆದಿದೆ. ಇಲ್ಲಿ ತಯಾರಾಗುವ ಉತ್ಪನ್ನಗಳಾದ ಹತ್ತಿ ಬಟ್ಟೆಯ ಧೋತರಗಳು, ಜನತಾ ಸೀರೆ, ಪಾಲಿಸ್ಟರ್ ಅಂಗಿಗಳು, ಬೆಡ್‌ಶೀಟ್‌ಸಗಳು, ಪರದೆ, ಗಾಯಕ್ಕೆ ಉಪಯೋಗಿಸುವ ಬ್ಯಾಂಡೆಜ್ ಹತ್ತಿಬಟ್ಟೆ ಮುಂತಾದವುಗಳು ರಾಜ್ಯದಲ್ಲಿ ಮಾತ್ರವಲ್ಲದೇ ಇತರ ರಾಜ್ಯಗಳಲ್ಲಿಯೂ ಅಧಿಕ ಬೇಡಿಕೆಯಲ್ಲಿವೆ. ಇವುಗಳನ್ನು ಆಧುನಿಕ ತಂತ್ರಜ್ಞಾನಕ್ಕೆ ಪರಿವರ್ತಿಸಿ ಬ್ರಿಟಿಷರು ಉತ್ಪಾದನೆಯಲ್ಲಿ ಪ್ರಗತಿ ತಂದು ಕೈಮಗ್ಗ ನೇಕಾರಿಕೆಗೆ ಪ್ರೋತ್ಸಾಹ ನೀಡಿದರು. ಇದರಲ್ಲಿ

ಆಂಗ್ಲರ ಸ್ವಾರ್ಥವು ಕೂಡ ಅಡಗಿರುವುದು ಸುಳ್ಳಲ್ಲ. ಡಚ್ ಸರಕಾರದ ನೆರವಿನಿಂದ ನೇಕಾರರ ವಸತಿಗಳನ್ನು ಅವರ ಕಸಬಿಗೆ ಅನುಕೂಲವಾಗುವಂತೆ ನಿರ್ಮಿಸಲಾಗಿರುವುದು ಗಮನೀಯವಾಗಿದೆ. ರಬಕವಿ–ಬನಹಟ್ಟಿಯು ಬಟ್ಟೆ ತಯಾರಿಕೆ, ನೇಕಾರಿಕೆಯ ಕೇಂದ್ರವಾಗಿರುವುದರೊಂದಿಗೆ ಇಂದು ದೇಶ ವಿದೇಶ, ಅಂತರಾಷ್ಟ್ರೀಯ ಮಟ್ಟದಲ್ಲಿ ವಾಣಿಜ್ಯ–ವ್ಯಾಪಾರ ಉದ್ದಿಮೆಯಾಗಿಯೂ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿಯೂ ಬೆಳೆದಿದ್ದು, ಹಾಗೂ ಬೆಳೆಯುತ್ತಲೇ ಇದೆ ಎಂದು ಗುರುತಿಸಬಹುದು.

## ಯಲ್ಲಟ್ಟಿ

ಜಮಖಂಡಿ ತಾಲೂಕಿನ ಯಲ್ಲಟ್ಟಿ ಗ್ರಾಮದಲ್ಲಿ ಬ್ರಿಟಿಷರು ಸೇತುವೆಯನ್ನು ನಿರ್ಮಿಸಿದ್ದಾರೆ. ವಸಾಹತು ಕಾಲದ ಹಳೆಯ ಸೇತುವೆಯನ್ನು ರಸ್ತೆ ಅಗಲೀಕರಣದ ನೆಪದಲ್ಲಿ ಸೇತುವೆಯನ್ನು ಸಹ ಅಗಲೀಕರಣ ಮಾಡಿ ರಸ್ತೆ ಸಂಚಾರವನ್ನು ಸುಗಮಗೊಳಿಸಲಾಗಿದೆ. ಜಮಖಂಡಿ ಪ್ರದೇಶದಲ್ಲಿ ಬೆಟ್ಟಗುಡ್ಡಗಳಿಂದ ಮಳೆಗಾಲದಲ್ಲಿ ನೀರು ಹರಿದು ಬಂದು ರಸ್ತೆಯ ಮಾರ್ಗ ಸಂಪರ್ಕ ಕಡಿತಗೊಳ್ಳುತ್ತಿತ್ತು. ಇಂತಹ ಅಸ್ತವ್ಯಸ್ತತೆಯ ಪರಿಸ್ಥಿತಿಯನ್ನು ಪರಿಹರಿಸಲು ಬ್ರಿಟಿಷರ ಅಧಿಕಾರಿಗಳು ಜಮಖಂಡಿ–ಸೊಲ್ಲಾಪುರ ರಸ್ತೆಯಲ್ಲಿ ಸರ್ವೆ ಮಾಡಿ ಬೆಟ್ಟದಿಂದ ಹರಿದು ಬಂದಂತಹ ನೀರು ಸರಾಗವಾಗಿ ಹರಿದು ಹೋಗಲು ರಸ್ತೆಯ ಸೇತುವೆಗಳನ್ನು ನಿರ್ಮಿಸಿದರು. ಇದರಿಂದ ರಸ್ತೆ ಸಂಚಾರ ಸಂಗಮವಾಯಿತು. ಅದೇ ರೀತಿಯಾಗಿ ಮುಧೋಳ ಮಹಾಲಿಂಗಪುರ ರಸ್ತೆಗೂ ಕೂಡಾ ಹಲವಾರು ರಸ್ತೆ ಸೇತುವೆಗಳನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಆದರೆ ಪ್ರಸ್ತುತ ಇಂದು ರಸ್ತೆ ಅಂಗಲೀಕರಣದ ಯೋಜನೆಯ ನೆಪದಲ್ಲಿ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಸಂಪೂರ್ಣವಾಗಿ ಕೆಡವಿ, ನಂತರ ಅದೇ ಸ್ಥಳದಲ್ಲಿ ಸಿಮೆಂಟ್ ಕಾಂಕ್ರೀಟ್ ಸೇತುವೆಗಳನ್ನು ನಿರ್ಮಿಸಲಾಗಿದೆ. ಇದರಿಂದ ಜನರ ಮತ್ತು ವಾಹನಗಳ ದಟ್ಟಣೆಯಿಂದ ಸಾರಿಗೆಯ ಅಡಚಣೆ ಸದ್ಯಕ್ಕೆ ಪರಿಹರಿಸಲಾಗಿದೆ. ಆದರೆ ವಸಾಹತು ಕಾಲದ ಸೇತುವೆಗಳು ಅಥವಾ ಸ್ಮಾರಕಗಳನ್ನು ಕಳೆದುಕೊಂಡಿದ್ದೇವೆ ಎಂಬ ಕೊರಗು ಇಂದಿಗೂ ಜನರಲ್ಲಿ ಉಳಿದಿದೆ. ಸ್ಮಾರಕಗಳು ನೆಲಕಚ್ಚಿರಬಹುದು. ಆದರೆ ಜನಮಾನಸದಲ್ಲಿ ಸೇತುವೆಗಳು, ಸ್ಮಾರಕಗಳು ಅಚ್ಚಳಿಯದೆ ಉಳಿದಿವೆ.

## ಗುಳೇದಗುಡ್ಡ ರೋಡ ರೈಲು ನಿಲ್ದಾಣ ರಸ್ತೆ ಸೇತುವೆ

ಈಗಾಗಲೇ ಗುಳೇದಗುಡ್ಡ ಪ್ರದೇಶದ ಕುರಿತು ವಿವರಿಸಲಾಗಿದ್ದು, ಬಾದಾಮಿಯಿಂದ ಉತ್ತರ ದಿಕ್ಕಿಗೆ ೨೦ ಕಿ.ಮೀ. ಅಂತರದಲ್ಲಿ, ಗುಳೇದಗುಡ್ಡಕ್ಕೆ ೨ ಕಿ.ಮೀ. ಅಂತರದ ಪಶ್ಚಿಮ ದಿಕ್ಕಿನಲ್ಲಿ ರೈಲು ನಿಲ್ದಾಣವಿದೆ. ಅಲ್ಲಿನ ಜನರ ವಸತಿಯಿಂದಾಗಿ ಬಂದು ಗ್ರಾಮವಾಗಿ

ನಿರ್ಮಾಣಗೊಂಡಿದ್ದನ್ನು ಗುಳೇದಗುಡ್ಡ ರೈಲ್ವೆ ಸ್ಟೇಶನ್ ಎಂದು ಕರೆಯಲಾಗಿದೆ. ಗದಗ–ವಿಜಯಪುರ ರೈಲ್ವೆಮಾರ್ಗದ ಮಧ್ಯದಲ್ಲಿ ಗುಳೇದಗುಡ್ಡ ರೋಡ್ ರೈಲು ನಿಲ್ದಾಣವಿದೆ. ಗುಳೇದಗುಡ್ಡದಲ್ಲಿ ಬ್ರಿಟಿಷರು ಚರ್ಚ, ಶಾಲೆ, ಆಸ್ಪತ್ರೆ, ಅನಾಥಾಶ್ರಮ, ಬಂಗಲೆ ಇತ್ಯಾದಿ ಸ್ಮಾರಕಗಳನ್ನು ಕಟ್ಟಿಸಿ ವಾಸ್ತವ್ಯ ಮಾಡಿದರು. ಗುಳೇದಗುಡ್ಡಕ್ಕೆ ಸಂಪರ್ಕ ಕಲ್ಪಿಸುವ ಮುಖ್ಯ ಉದ್ದೇಶವಿಟ್ಟುಕೊಂಡು ಇಲ್ಲಿ ರೈಲ್ವೆ ನಿಲ್ದಾಣವನ್ನು ನಿರ್ಮಿಸಿದರು. ರೈಲ್ವೆ ನಿಲ್ದಾಣದಿಂದ ಹಂಗರಗಿ ಕ್ರಾಸ್ ರಸ್ತೆ ಮಾರ್ಗದಲ್ಲಿ ಎರಡು ಕಮಾನ ಹೊಂದಿರುವ ಸೇತುವೆಯನ್ನು ಬ್ರಿಟಿಷರು ಕಟ್ಟಿಸಿದ್ದಾರೆ. ಈ ಸೇತುವೆಗೆ ಗಾರೆಗಚ್ಚು, ಕೆಂಪು ಮತ್ತು ಕಪ್ಪುಕಲ್ಲನ್ನು ಉಪಯೋಗಿಸಿ ಕಟ್ಟಿದ್ದಾರೆ. ಸದ್ಯದಲ್ಲಿಯೇ ರಸ್ತೆ ಅಗಲೀಕರಣದ ನೆಪದಲ್ಲಿ ಈ ಸೇತುವೆ ನೆಲಸಮವಾಗುವ ಹಂತದಲ್ಲಿದೆ. ಬ್ರಿಟಿಷರಿಗೆ ಗುಳೇದಗುಡ್ಡ ಮತ್ತು ಸುಮಡ್ಡಿ ಪ್ರದೇಶಗಳು ಎಲ್ಲಾ ರೀತಿಯ ಮೂಲಭೂತ ಸೌಕರ್ಯವನ್ನು ಹೊಂದಿದ್ದುದರಿಂದ ಇಲ್ಲಿ ನೆಲೆ ನಿಲ್ಲಲು ಕಾರಣವಾಗಿದೆ. ಸಂಪತ್ಭರಿತ ಪ್ರದೇಶಗಳನ್ನು ಕೈವಶ ಮಾಡಿಕೊಂಡು, ದಂಗೆಗಳನ್ನು ಸ್ಥಳೀಯರ ಸಹಾಯದಿಂದ ಹತ್ತಿಕ್ಕಿ, ಅವರ ಮೇಲೆ ಹಿಡಿತವನ್ನು ಸಾಧಿಸಿ ಆಡಳಿತವನ್ನು ನಡೆಸುವುದು ಬ್ರಿಟಿಷರ ಮುಖ್ಯ ಉದ್ದೇಶವಾಗಿದ್ದಿತ್ತು ಎಂಬುದು ಇಲ್ಲಿ ಸ್ಪಷ್ಟಪಡಿಸಬಹುದು. ರೈಲು ನಿಲ್ದಾಣಕ್ಕೆ ಸಂಪರ್ಕ ಕಲ್ಪಿಸುವ ಎಲ್ಲಾ ರಸ್ತೆಗಳಿಗೆ ವ್ಯವಸ್ಥಿತವಾದ ಸೇತುವೆಗಳನ್ನು ನಿರ್ಮಿಸಿ ರಸ್ತೆ ಸಂಚಾರವನ್ನು ಸುಗಮಗೊಳಿಸಿದರು.

**ರೈಲ್ವೆ ಸೇತುವೆಗಳು**

**ಬಾಗಲಕೋಟೆ(ಏಂಟರ ಪೂಲ್)**

ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಹತ್ತೊಂಬತ್ತನೇ ಶತಮಾನದ ಉತ್ತರಾರ್ಧ ಭಾಗದಲ್ಲಿ ರೂಪಿಸಲ್ಪಟ್ಟ ಮೂರು ರೈಲು ಮಾರ್ಗಗಳಲ್ಲಿ ಪೂರ್ವ ಡೆಕ್ಕನ್ ಅಥವಾ ಹೂಟಗಿ–ಗದಗ ಮೀಟರ್ ಗೇಜ್ ರೈಲುಮಾರ್ಗವು ಬಾಗಲಕೋಟೆ, ವಿಜಯಪುರ ಜಿಲ್ಲೆಗಳ ಮೇಲೆ ಬೀರಿದ ಪ್ರಭಾವ ಅತ್ಯಂತ ಗಣನೀಯವಾಗಿದೆ. ಈ ರೈಲು ಮಾರ್ಗದ ನಿರ್ಮಾಣ ಕಾರ್ಯವು ಬರಗಾಲ ಕಾಮಗಾರಿಯಾಗಿ ಕ್ರಿ.ಶ.೧೮೭೯ರ ಏಪ್ರಿಲ್ ತಿಂಗಳಲ್ಲಿ ಆರಂಭ ಗೊಂಡಿತ್ತಾದರೂ ಅನಿವಾರ್ಯ ಕಾರಣಗಳಿಂದಾಗಿ ತಟಸ್ಥವಾಯಿತು. ಮುಂಬಯಿ ಸರ್ಕಾರ ಕ್ರಿ.ಶ.೧೮೮೧ರ ನವ್ಹೆಂಬರ್ ತಿಂಗಳಲ್ಲಿ ಈ ಕಾಮಗಾರಿಯನ್ನು ಪುನರಾರಂಭಿಸಿ ಕ್ರಿ.ಶ.೧೮೮೪ರ ಅಕ್ಟೋಬರ್ ೧೧ ರಂದು ಅದರ ನಿರ್ವಹಣೆಯನ್ನು ಸದರನ್ ಮರಾಠ ರೈಲ್ವೆ ಕಂಪನಿಗೆ ವಹಿಸಿಕೊಟ್ಟಿತು. ಈ ರೈಲು ಮಾರ್ಗ ಲಚ್ಯಾಣ, ಇಂಡಿ ರೋಡ್, ನಿಂಬಾಳ, ಮಿಂಚಿನಾಳ, ವಿಜಯಪುರ, ಜುಮ್ನಾಳ, ಮುಳವಾಡ, ತೆಲಗಿ, ಆಲಮಟ್ಟಿ, ಬಾಗಲಕೋಟೆ, ಕಟಗೇರಿ,

ಬಾದಾಮಿ, ಲಖಮಾಪುರ, ಹೀಗೆ ಒಟ್ಟು ೧೩ ರೈಲು ನಿಲ್ದಾಣಗಳ ಮೂಲಕ ಹಾದು ಹೋಗಿ ಗದಗ ನಗರದ ರೈಲು ನಿಲ್ದಾಣವನ್ನು ತಲುಪುತ್ತದೆ.

ಈ ರೈಲು ಮಾರ್ಗದಲ್ಲಿ ಹಳ್ಳಕೊಳ್ಳ, ಭೀಮಾ, ಡೋಣಿ, ಕೃಷ್ಣಾ, ಮಲಪ್ರಭಾ, ನದಿಗಳನ್ನು ದಾಟಲು ಜಿಲ್ಲೆಯಲ್ಲಿ ಕಿರುದಾದ ಸೇತುವೆಗಳು ಹಾಗೂ ಬೃಹತ್‌ದಾದ ಸೇತುವೆಗಳನ್ನು ನಿರ್ಮಿಸಲಾಗಿದೆ. ಈ ಸಮಯದಲ್ಲಿ ಬಾಗಲಕೋಟೆ–ಮುಗಳೊಳ್ಳಿ, ರೈಲುಮಾರ್ಗದಲ್ಲಿ, ಏಂಟರ ಪೂಲು, ಒಂದರ ಪೂಲು, ಮೂರರ ಪೂಲುಗಳು ಅಂದರೆ ರೈಲು ಸೇತುವೆಗಳು ನಿರ್ಮಾಣ ಗೊಂಡವು. ಈ ಏಂಟರ ಪೂಲು(ರೈಲು ಸೇತುವೆ) ಏಳು ಕಮಾನುಗಳು ಒಂದೇ ಅಳತೆಯಿಂದ ಕೂಡಿದ್ದು, ಒಂದು ಕಮಾನು ಚಿಕ್ಕದಾಗಿದೆ. ಅಂದರೆ ಒಟ್ಟು ಏಂಟು ಕಮಾನುಗಳಿಂದ ಲೆಕ್ಕ ಹಾಕಿ ಸ್ಥಳೀಯರು ಈ ರೈಲು ಸೇತುವೆಯನ್ನು ಏಂಟರ(೮) ಪೂಲು ಎಂದು ಇಂದಿಗೂ ಕರೆಯುತ್ತಾರೆ. ಸೇತುವೆಯ ಮಧ್ಯದ ಕಮಾನಿನ ಭಾಗದಲ್ಲಿ ಒಂದು ತೂಬು ಇದ್ದು, ಇಲ್ಲಿ ಒಂದು ಅಪರೂಪದ ಶಿಲ್ಪವಿದೆ. ಸದ್ಯ ಈ ಸೇತುವೆಯು ಆಲಮಟ್ಟಿ ಹಿನ್ನೀರಿನಲ್ಲಿ ಮುಳುಗಡೆಯಾಗುವುದರಿಂದ ಇದರ ಪಕ್ಕದಲ್ಲಿ ಆಧುನಿಕ ತಂತ್ರಜ್ಞಾನವನ್ನು ಉಪಯೋಗಿ ಬ್ರಾಡಗೇಜ ರೈಲು ಸೇತುವೆಯನ್ನು ಉತ್ತರದಲ್ಲಿ ನಿರ್ಮಿಸಿದ್ದಾರೆ. ಎಂಟರ ಪೂಲು ಎಷ್ಟೇ ಬಾರಿ ನೀರಲ್ಲಿ ಮುಳುಗಿದರೂ ಸಹ ನೀರು ಇಳಿಮುಖವಾದ ನಂತರ ಬೇಸಿಗೆಯಲ್ಲಿ ನೋಡಲು ಸಿಗುತ್ತದೆ. ಕೆಂಪುಶಿಲೆ, ಗಾರೆಗಚ್ಚು, ಸೀಮೆ ಸುಣ್ಣ, ಕಬ್ಬಿಣದ ಸರಳುಗಳನ್ನು ಬಳಸಿಕೊಂಡು ಈ ಸೇತುವೆಯನ್ನು ಕಟ್ಟಿದ್ದಾರೆ. ಬಾಗಲಕೋಟೆಯಿಂದ ಕಾಲ್ನಡಿಗೆಯಲ್ಲಿ ೨ ಕಿ.ಮೀ. ದೂರ ಕ್ರಮಿಸಿದಾಗ ಈ ಸೇತುವೆಯನ್ನು ನೋಡಬಹುದು. ಬ್ರಿಟಿಷರು ಸಾರಿಗೆ, ರೈಲು ಸಂಪರ್ಕ ಕೆಲಸ ಕಾರ್ಯಗಳನ್ನು ಕೈಗೆತ್ತಿಕೊಂಡಾಗ ಹೆಚ್ಚಾಗಿ ಯುರೋಪಿನ ಇಂಜಿನೀಯರು ಗಳನ್ನು ನೇಮಕ ಮಾಡಿಕೊಂಡರು. ಹಾಗಾಗಿ ಬಾಗಲಕೋಟೆ ಜಿಲ್ಲೆಯಲ್ಲಿ ಎಲ್ಲ ರೈಲು ಸೇತುವೆಗಳು ಯುರೋಪಿನ ಶೈಲಿಯಲ್ಲಿರುವುದು ಕಂಡುಬರುತ್ತದೆ. ವರ್ಷದ ಮಳೆಗಾಲದ ತಿಂಗಳಿನಲ್ಲಿ ಈ ಸೇತುವೆಯು ನೀರಲ್ಲಿ ಮುಳುಗಿರುತ್ತದೆ. ಇನ್ನೂ ಬೇಸಿಗೆ ಸಮಯದಲ್ಲಿ ನೀರಿನ ಪ್ರಮಾಣ ಇಳಿಮುಖವಾದ ನಂತರ ಬಾಗಲಕೋಟದಿಂದ ಹೊದ್ಲೂರು ಗ್ರಾಮಕ್ಕೆ ಹೋಗಲು ಮತ್ತು ಜನರು ಕೃಷಿ ಚಟುವಟಿಕೆಗಾಗಿ ಹೊಲಗಳಿಗೆ ಹೋಗಲು ಈ ಏಂಟರಪೂಲು ಸಹಾಯ ಬೇಕಾಗುತ್ತದೆ. ಇವತ್ತಿನವರೆಗೂ ಎಲ್ಲಿಯೂ ಒಂದು ಸಣ್ಣ ಬಿರುಕು ಸಹ ಕಾಣಿಸಿಕೊಳ್ಳದೇ ಎಂಟರ ಪೂಲು ಗಟ್ಟಿಮುಟ್ಟಾಗಿದೆ.

### ಬಾದಾಮಿ

ಬಾದಾಮಿ ರೈಲು ನಿಲ್ದಾಣದಿಂದ ಆಡಗಲ್, ಯರಗೊಪ್ಪ, ಲಖಮಾಪುರ ಹೊಳೆ ಆಲೂರು ವರೆಗಿನ ನಿಲ್ದಾಣದವರೆಗೂ ಸಣ್ಣ ಸೇತುವೆಗಳನ್ನು ಬ್ರಿಟಿಷರು ನಿರ್ಮಿಸಿದ್ದರು.

ಇಂದು ಈ ಎಲ್ಲಾ ಸೇತುವೆಗಳು ಬ್ರಾಡ್‌ಗೇಜ್ ರೈಲು ಮಾರ್ಗವಾಗಿ ಮಾರ್ಪಾಡು ಹೊಂದಿರುವುದರಿಂದ ಹಳೆಯ ಸೇತುವೆಗಳ ಪಕ್ಕದಲ್ಲಿಯೇ ಹೊಸ ಸೇತುವೆಗಳು ನಿರ್ಮಾಣ ಗೊಂಡಿವೆ. ಅದರಂತೆ ಬಾದಾಮಿಯಿಂದ ಕಟಗೇರಿ, ಗುಳೇದಗುಡ್ಡ ರೋಡ್, ಬಾಗಲಕೋಟ ನಿಲ್ದಾಣದವರೆಗೂ ಸಹ ವಸಾಹತು ಕಾಲದ ಸೇತುವೆಗಳು ಪಕ್ಕದಲ್ಲಿಯೇ ಹೊಸ ಸೇತುವೆಗಳು ನಿರ್ಮಾಣಗೊಂಡಿವೆ.

ಬ್ರಿಟಿಷರು ಸ್ಥಳೀಯವಾಗಿ ದೊರೆಯುವ ಕಚ್ಚಾ ಸಾಮಗ್ರಿಗಳಾದ ಕೆಂಪು ಮತ್ತು ಕಪ್ಪುಕಲ್ಲು, ಗಾರೇಗಚ್ಚು, ಸೀಮೆಸುಣ್ಣ, ಅವಶ್ಯಕತೆವಿದ್ದಲ್ಲಿ ಕಟ್ಟಿಗೆಯನ್ನು ಸಹ ಬಳಸಿಕೊಂಡು ಅಚ್ಚುಕಟ್ಟಾಗಿ ಸ್ಮಾರಕ ಅಥವಾ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಅಂತಹ ವಸಾಹತು ಕಾಲದ ಸ್ಮಾರಗಳು ದಿನ ಕಳೆದಂತೆ ಒಂದೊಂದಾಗಿ ಕಾಲದ ತುಳಿತಕ್ಕೆ ಸಿಲುಕಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಅಂತಹ ವಸಾಹತು ಕಾಲದ ಸ್ಮಾರಕಗಳು ಗುರುತಿಸಿ ದಾಖಲಿಸಿ, ಸಂರಕ್ಷಿಸುವಂತಹ ಕೆಲಸವು ಅತ್ಯಂತ ತ್ವರಿತಗತಿಯಲ್ಲಿ ನಡೆಯಬೇಕಾಗಿದೆ. ವಸಾಹತು ಶೈಲಿಯ ಸ್ಮಾರಕಗಳ ತಾಂತ್ರಿಕತೆ, ಶ್ರಮಿಕರ ಕೈಚಳಕ ಇಲ್ಲಿ ಬೆಲೆಕಟ್ಟಲಾರದ ಆಸ್ತಿ ಎಂದು ಗುರುತಿಸಬಹುದು.

**ಮುಗಳೊಳ್ಳಿ**

ತಾಲೂಕು ಕೇಂದ್ರ ಬಾಗಲಕೋಟೆಯಿಂದ ಪೂರ್ವಕ್ಕೆ ೧೮ ಕಿ.ಮೀ. ದೂರದಲ್ಲಿದೆ. ಮುಗಳಿನ+ಹಳ್ಳಿ=ಮುಗಳೊಳ್ಳಿ, ಮುಗಳಂತಿರುವ ಹಳ್ಳಿ, ಸಣ್ಣ, ಹಳ್ಳಿ, ಇಲ್ಲಿ ಹೂಗಳು ಹೆಚ್ಚಾಗಿ ಬೆಳೆಯುವುದರಿಂದ ಮುಗಳೊಳ್ಳಿ ಇಲ್ಲಿ 'ಹ' ಕಾರವು ಲೋಪಗೊಂಡು ಸಸ್ಯವಾಚಕ ವಾಗಿದೆ. ಬಾಗಲಕೋಟೆ, ವಿಜಯಪುರ ರೈಲು ಸಂಪರ್ಕದ ಮಧ್ಯವಿರುವ ಹಾಗೂ ನದಿಗೆ ಹೊಂದಿ ಕೊಂಡಿರುವ ಊರು ಇದಾಗಿದೆ. ರೈಲ್ವೆ ಸಂಚಾರಕ್ಕಾಗಿ ಮುಗಳೊಳ್ಳಿ ಹತ್ತಿರ ಒಂದರ(ಪೂಲ್) ಕಮಾನು, ಎರಡರ(ಪೂಲ್) ಕಮಾನ ಎಂಬ ಹೆಸರಿನ ಸೇತುವೆಗಳನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಜನರೇ ಕಮಾನುಗಳ ಲೆಕ್ಕದಲ್ಲಿ ಈ ಸೇತುವೆಗಳಿಗೆ ಹೆಸರಿಟ್ಟಿದ್ದಾರೆ. ಆದರೆ ಈ ಪೂಲ(ಸೇತುವೆ) ನೀರಲ್ಲಿ ಮುಳುಗುವುದರಿಂದ ಇಂದು ಹತ್ತಿರದಲ್ಲಿ ದೊಡ್ಡದಾದ ಸೇತುವೆಯನ್ನು ನಿರ್ಮಿಸಿ ರೈಲ್ವೆ ಸಂಚಾರ ಸುಗಮವಾಗುವಂತೆ ಮಾಡಲಾಗಿದೆ.

ಗದಗ-ಹೂಟಗಿ ರೈಲು ಸಂಪರ್ಕ ಮೀಟರ್ ಗೇಜದಿಂದ ಬ್ರಾಡ್‌ಗೇಜ ಮೇಲ್ದರ್ಜೆ ಗೇರಿದಾಗ ಸಣ್ಣ ಹಾಗೂ ದೊಡ್ಡದಾದ ವಸಾಹತು ಕಾಲದ ರೈಲ್ವೆ ಸೇತುವೆಗಳ ಪಕ್ಕದಲ್ಲಿ ದೊಡ್ಡದಾದ ಸಿಮೆಂಟ್ ಕಾಂಕ್ರೀಟ್ ಸೇತುವೆಗಳು ನಿರ್ಮಾಣಗೊಂಡವು. ಆದರೆ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಇಂದಿಗೂ ಗಟ್ಟಿಮುಟ್ಟಾಗಿರುವುದನ್ನು ಬೇಸಿಗೆ ಕಾಲದಲ್ಲಿ ಗೋಚರಿಸುವುದನ್ನು ಗಮನಿಸಿದರೆ ಬ್ರಿಟಿಷರ ತಾಂತ್ರಿಕತೆ, ವಿನ್ಯಾಸ, ಕೆಲಸದಲ್ಲಿ ಪ್ರಾಮಾಣಿಕತೆ ಇತ್ಯಾದಿ ಮಹತ್ವದ ಅಂಶಗಳು ಗಮನಾರ್ಹವಾದುದ್ದಾಗಿವೆ.

**ಅಣೆಕಟ್ಟುಗಳು(ಡ್ಯಾಂ)**

**ಮುಚಖಂಡಿ ಅಣೆಕಟ್ಟೆ**

ಬಾಗಲಕೋಟೆ ತಾಲೂಕು ಕೇಂದ್ರದಿಂದ ದಕ್ಷಿಣಕ್ಕೆ ೮ ಕಿ.ಮೀ. ದೂರದಲ್ಲಿದೆ. ಮುಚ್ಚಿದ ಎಂದರೆ ಗಿಡಗಂಟಿಗಳಿಂದ ತುಂಬಿದ ಎಂದರ್ಥ. ಖಂಡಿ ಇಕ್ಕಟ್ಟಾದ ಸ್ಥಳ ಮುಚ್ಚಿ+ಖಂಡಿ ಮುಚಖಂಡಿ>ಗಿಡಗಳಿಂದ ಆವೃತವಾದ ಇಕ್ಕಟ್ಟಾದ ಸ್ಥಳ, ಪ್ರಕೃತಿವಾಚಕದಿಂದ ಅಥವಾ ಬಿಳಿಸು ಖಂಡಿ ಎಂದರೆ ೨೦ ಮಣ ತೂಕ ೨೦ ಮಣಗಳ ತೂಕದ ಹೊನ್ನನ್ನು ಈಗಿರುವ ಮದಗದ ಕೆಂಚವ್ವಳ ಕೆರೆಯ ಮದಗದಲ್ಲಿ ಊರವರೆಲ್ಲಾ ಕೂಡಿ ಹುದುಗಿಸಿಟ್ಟು ತಮ್ಮ ಸಂಪತ್ತಿನ ಆರಾಧ್ಯ ದೇವತೆ ಎಂದು ಪೂಜಿಸುತ್ತಾ ಬಂದಿದ್ದಾರೆ ಎಂಬ ಪ್ರತೀತಿ ಇದೆ. ಈಗಲೂ ಮುಚಖಂಡಿ ಊರಿನ ಮದಗದ ಕೆಂಚವ್ವನನ್ನು ಕುಲದೇವತೆಯೆಂದು ಪೂಜಿಸುತ್ತಾರೆ.[೨೫] ದೊಡ್ಡ ದೊಡ್ಡ ಅಣೆಕಟ್ಟೆ, ಸೇತುವೆಗಳು ನಿರ್ಮಾಣಗೊಂಡಂತಹ ಸ್ಥಳದಲ್ಲಿ ಒಂದಲ್ಲ ಒಂದು ಸ್ಥಳೀಯ ಶಕ್ತಿ ದೇವತೆಗಳ ಕುರಿತು ಐತಿಹ್ಯಗಳಿವೆ.

ಮುಚಖಂಡಿ ವೀರಭದ್ರೇಶ್ವರ ದೇವಾಲಯಕ್ಕೆ ಹೊಂದಿಕೊಂಡಿರುವ ಎರಡು ಬೃಹತ್ತಾದ ಗುಡ್ಡಗಳ ಮಧ್ಯೆ ಕ್ರಿ.ಶ.೧೮೮೨ರಲ್ಲಿ ಬ್ರಿಟಿಷರು ಸೇತುವೆಯನ್ನು ನಿರ್ಮಿಸಿದ್ದಾರೆ. ಸುಮಾರು ೧೫೦ ಎಕರೆಯಷ್ಟು ವಿಸ್ತಾರವಾಗಿರುವ ಕೆರೆಯು ಉತ್ತರಾಭಿಮುಖವಾಗಿ ೮ ಕಿ.ಮೀ. ಅಂತರದಲ್ಲಿ ಕ್ರಮಿಸಿ ಬಾಗಲಕೋಟೆಯ ಹತ್ತಿರ ಘಟಪ್ರಭಾ ನದಿಗೆ ಸೇರುತ್ತದೆ. ಕೆರೆಯ ಪೂರ್ವದ ಬೆಟ್ಟಗುಡ್ಡ ಪ್ರದೇಶ ಹಾಗೂ ಪಶ್ಚಿಮದ ಮಳಿಯಪ್ಪಯ್ಯನ ಗುಡ್ಡಗಳ ನಡುವಿನ ಕಂದಕದಲ್ಲಿ ಸುಂದರವಾದ ಅಣೆಕಟ್ಟು ಕಂಗೊಳಿಸುತ್ತಿದೆ. ಬ್ರಿಟಿಷರ ಅಣೆಕಟ್ಟು ನಿರ್ಮಾಣದ ತಾಂತ್ರಿಕ ವೈಶಿಷ್ಟತೆ, ರಚನಾ ವಿನ್ಯಾಸದಿಂದ ನಿರ್ಮಾಣಗೊಂಡಿದೆ. ಅಣೆಕಟ್ಟೆಯ ಬುನಾದಿ ಅಗಲವಾಗಿದ್ದು, ಕೆರೆಯ ಭಾಗ ಅಂದರೆ ಒಳಮೈ ಸಮವಾಗಿದ್ದು, ಹೊರಗಡೆಯ ಗೋಡೆಯ ಭಾಗ ಮೇಲೆ ಹೋದಂತೆಲ್ಲಾ ಕಿರಿದಾಗಿ ರಚನೆಗೊಂಡು, ಮೇಲುಗಡೆ ಪಾದಚಾರಿಗಳು ನಡೆದಾಡುವಷ್ಟು ಮಾತ್ರ ಸೀಮಿತವಾದ ಸ್ಥಳವಾಕಾಶ ಹೊಂದಿದೆ. ಮುಚಖಂಡಿಯ ಕೆರೆಯ ಅಣೆಕಟ್ಟು ಕಟ್ಟಡ ೧೦ ಆಕಾರದ ತಿರುವಿನಲ್ಲಿದೆ. ಮುಖ್ಯವಾಗಿ ಸೇತುವೆ, ಅಣೆಕಟ್ಟುಗಳು ನೀರಿನ ರಭಸ ತಡೆಗಟ್ಟಲು ಒಂದಲ್ಲ ಒಂದು ರೀತಿಯ ತಾಂತ್ರಿಕತೆಯನ್ನು ಉಪಯೋಗಿಸಿ ಕಟ್ಟಿರುವುದು ವಿಶೇಷ. ಸ್ಥಳೀಯವಾಗಿ ದೊರೆಯುವ ಕಪ್ಪು ಮತ್ತು ಕೆಂಪು ಕಲ್ಲು ಗಾರೆಗಚ್ಚು, ಕಬ್ಬಿಣದ ಸರಳಗಳನ್ನು ಉಪಯೋಗಿಸಿ ಈ ಸೇತುವೆಯನ್ನು ಕಟ್ಟಿದ್ದಾರೆ. ಸೇತುವೆ ಮಧ್ಯದ ಭಾಗಕ್ಕೆ 1882(೧೮೮೨) ಆಂಗ್ಲ ಅಕ್ಷರಗಳು ದೊಡ್ಡದಾಗಿ ಜೋಡಿಸಿರುವುದು ತುಂಬಾ ವೈಶಿಷ್ಟತೆಯಿಂದ ಕೂಡಿದೆ. ಸೇತುವೆ ಸಿಗ್ಗಲ್ಲ(ಭೂಚ ಗಡಾಯಿ)ನ್ನು ಉಪಯೋಗಿಸಿದ್ದಾರೆ.

ಸೇತುವೆಯ ಮುಂಭಾಗ ಸ್ವಲ್ಪ ಕಲ್ಲನ್ನು ಹೊರಹಾಯಿಸಿರುವುದರಿಂದ ಇಸ್ವಿಯು ದೂರದಿಂದಲೂ ಗೋಚರಿಸುತ್ತದೆ.

ಬ್ರಿಟಿಷರು ಹಳೇ ಬಾಗಲಕೋಟೆಯಲ್ಲಿ ತಮ್ಮ ಆಡಳಿತ ಕೇಂದ್ರವನ್ನು ಸ್ಥಾಪಿಸಿದ್ದರು. ಬ್ರಿಟಿಷರಿಗೆ ವ್ಯರ್ಥವಾಗಿ ಹರಿಯುವ ನೀರನ್ನು ಒಂದೆಡೆ ನಿಲ್ಲಿಸಿ ಬೇಸಿಗೆಯಲ್ಲಿ ಉಪಯೋಗಿಸಲು ಎಲ್ಲರಿಗೂ ಅನುಕೂಲಕರಕ್ಕಾಗಿ ಈ ಸೇತುವೆಯನ್ನು ನಿರ್ಮಿಸಿದರು. ಇದರ ತತ್ಪರಿಣಾಮವಾಗಿ ಮುಚಖಂಡಿ, ಮುಚಖಂಡಿ ತಾಂಡಾ, ಗದ್ದನಕೇರಿ, ಬಾಗಲಕೋಟೆ, ಸೀಮಿಕೇರಿ, ಕಂದಾಂಪುರ, ಬೇವಿನಮಟ್ಟಿ ಇತ್ಯಾದಿ ಗ್ರಾಮಗಳಿಗೆ ಕುಡಿಯುವ ನೀರು ಪೂರೈಸುವ ಯೋಜನೆಯ ಫಲವಾಗಿ ಬಲದಂಡೆ ಚಿಕ್ಕದಾದ ಕಾಲುವೆ ನಿರ್ಮಿಸಿ ಎಲ್ಲರಿಗೂ ಒದಗಿಬಂದ ಜಲಕ್ಷಾಮ ಕಂಠಕವನ್ನು ನಿವಾರಿಸುವ ಕೆಲಸ ಕಾರ್ಯದಲ್ಲಿ ಬ್ರಿಟಿಷ್ ಯಶಸ್ವಿಯಾದರು.

ಈ ಸೇತುವೆಯ ನಿರ್ಮಾತೃವಿನ ಕುರಿತು ದಾಖಲೆಗಳ ಕೊರತೆವಿದೆ. ಆದರು ಸಹ ೧೮೮೨ರ ಅವಧಿಯಲ್ಲಿ ಕೃಷ್ಣರಾಯ ಎಂಬುವರು ಡಿಸ್ಟ್ರಿಕ್ಟ್ ಕಮೀಶನರ ಆಗಿದ್ದರು. ಹಾಗಾಗಿ ಇವರ ಕಾಲಕ್ಕೆ ಮುಚಖಂಡಿ ಕೆರೆ ನಿರ್ಮಾಣವಾಗಿದೆ ಎಂದು ಗ್ರಹಿಸಬಹುದು. ಈ ಕಾಲಕ್ಕೆ ಬ್ರಿಟಿಷ್ ಅಧಿಕಾರಿ ಲೆಫ್ಟಿನೆಂಟ್ ಕರ್ನಲ್ ಸೆಟನ್ಕರ ಇದ್ದುದ್ದು ಸಹ ದಾಖಲೆಯಿದೆ.[೨೬] ಹಲವಾರು ಬಾರಿ ಮುಚಖಂಡಿ ಕೆರೆಯು ಜನರಿಂದ ಒತ್ತುವರಿಯಾಗಿದ್ದಿತು. ಆದರೆ ಸರಕಾರದ ನಿಯಮದ ಪ್ರಕಾರ ಇಂದು ಜಿಲ್ಲಾಧಿಕಾರಿಗಳು ಒತ್ತುವರಿ ಕೆರೆಯ ಪ್ರದೇಶವನ್ನು ಜನರಿಂದ ತೆರವುಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಘಟಪ್ರಭಾ ನದಿಯ ನೀರಿನ ಮೂಲಕ ನೀರಾವರಿ ಯೋಜನೆಯಿಂದ ಈ ಕೆರೆಗೆ ನೀರು ಹರಿಸುತ್ತಿರುವುದರಿಂದ ಮತ್ತೆ ಮುಚಖಂಡಿ ಕೆರೆ ಮತ್ತು ಸೇತುವೆ ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಈ ಕೆರೆಯಿಂದ ಬೇಸಿಗೆಯಲ್ಲಿ ಹಲವಾರು ಹಳ್ಳಿಗಳಿಗೆ ಹಾಗೂ ಜೀವರಾಶಿಗಳಿಗೆ ಜಲಧಾರೆ, ಜೀವನಾಡಿಯಾಗಿದೆ. ಸೇತುವೆಯ ಪಕ್ಕದಲ್ಲಿ ವೀರಭದ್ರೇಶ್ವರ ದೇವಸ್ಥಾನವಿರುವುದರಿಂದ ಈ ಸೇತುವೆಗೆ ಮತ್ತಷ್ಟು ಮೆರುಗು ಬಂದಿದೆ. ಮಚಖಂಡಿ ಸಣ್ಣ ನೀರಾವರಿ ಕೆರೆಯಿಂದ ಸುಮಾರು ೪೮೦ ಹೆಕ್ಟೇರು ಪ್ರದೇಶ ಒಳಪಟ್ಟಿದೆ. ಇಂದಿಗೂ ಸಹ ಸೇತುವೆಯೂ ಎಲ್ಲಿಯೂ ಒಂದು ಸಣ್ಣಕಲ್ಲು ಸಹ ಬಿರುಕು ಉಂಟಾಗಿಲ್ಲ. ಬ್ರಿಟಿಷರು ಉತ್ತಮ ತಾಂತ್ರಿಕತೆಯನ್ನು ಉಪಯೋಗಿಸಿ ಈ ಸೇತುವೆಯನ್ನು ಕಟ್ಟಿದ್ದಾರೆ. ಪ್ರಮುಖ ಪ್ರೇಕ್ಷಣೀಯ ಸ್ಥಳವಾಗಿರುವುದರಿಂದ ಇಲ್ಲಿ ಹಲವಾರು ಚಲನಚಿತ್ರಗಳು ಚಿತ್ರೀಕರಣಗೊಂಡಿವೆ.

## ರಂಗ ಸಮುದ್ರ

ಬಾದಾಮಿ ತಾಲೂಕಿನ ರಂಗಸಮುದ್ರ ಗ್ರಾಮದಲ್ಲಿ ಕೆರೆಗೆ ಸುಸಜ್ಜಿತವಾದ ಅಣೆಕಟ್ಟೆಯನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಅಂದರೆ ಹುನಗುಂದ ತಾಲೂಕಿನ ಭೀಮನಗಡ ಹಾಗೂ

ಬಾದಾಮಿ ತಾಲೂಕಿನ ಕೊನೆಯಂಚಿನ ಮಧ್ಯದ ಬೆಟ್ಟಗುಡ್ಡದ ಮಧ್ಯ ಈ ಅಣೆಕಟ್ಟು ನಿರ್ಮಾಣಗೊಂಡಿದೆ. ಇತ್ತೀಚೆಗೆ ೨೦೧೦ರಲ್ಲಿ ರಂಗಸಮುದ್ರ ಹಳ್ಳಿಯ ಬಳಿ, ರಂಗಸಮುದ್ರ ಹೊಳೆ(ಮಲಪ್ರಭಾ ನದಿಗೆ ಸೇರುವ)ಗೆ ಅಡ್ಡಲಾಗಿ ೧೦೧೫ ಅಡಿ ಉದ್ದದ ಮತ್ತು ೬೫ ಅಡಿ ಎತ್ತರದ ಕಲ್ಲುಗಾರೆ ಗಚ್ಚು, ಸಿಮೆಂಟ್ ಕಾಂಕ್ರೇಟ್ ಉಪಯೋಗಿಸಿ ಅಣೆಕಟ್ಟು ನಿರ್ಮಿಸಿದ್ದಾರೆ. ೧೧.೨ ಕಿ.ಮೀ. ಉದ್ದ ಎಡದಂಡೆ ನಾಲೆ ಮತ್ತು ೪.೮ ಕಿ.ಮೀ. ಉದ್ದದ ಬಲದಂಡೆ ನಾಲೆಗಳ ಮೂಲಕ ಬಾದಾಮಿ ತಾಲೂಕಿನ ೯೯೪ ಹೆಕ್ಟರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನೊದಗಿಸಲು ರಂಗ ಸಮುದ್ರ ಕೆರೆ ಸಹಾಯಕಾರಿಯಾಗಿದೆ. ಬ್ರಿಟಿಷರು ನಿರ್ಮಿಸಿದ ಮೂಲತಃ ಅಣೆಕಟ್ಟಿನ ಯಾವುದೇ ಕುರುಹುಗಳು ಇಲ್ಲಿ ದೊರೆಯುವುದಿಲ್ಲ. ಬಾಗಲಕೋಟೆ ಹತ್ತಿರವಿರುವ ಮುಚಖಂಡಿ ಅಣೆಕಟ್ಟಿನಂತೆ ರಂಗಸಮುದ್ರ ದಲ್ಲಿ ಕೆರೆಗೆ ಅಣೆಕಟ್ಟನ್ನು ನಿರ್ಮಿಸಿದ್ದಾರೆ. ಇಂದಿಗೂ ಈ ಕೆರೆಯು ರಂಗಸಮುದ್ರ ಪರಿಸರದ ಸಕಲ ಜೀವರಾಶಿಗಳಿಗೆ ನೀರುಣಿಸುತ್ತಿದೆ. ಈ ಕೆರೆಯ ತಾಂತ್ರಿಕತೆ, ರಚನಾ ವಿನ್ಯಾಸ ಅಧ್ಯಯನಿಸಿ ದಾಗ, ಈ ಕೆರೆಯ ನೀರನ್ನು ಕುಡಿಯಲು, ಕೃಷಿಗಾಗಿ, ಕೈಗಾರಿಕೆಗಾಗಿ ಹೇಗೆ ಬಳಕೆ ಮಾಡಿಕೊಳ್ಳ ಬೇಕೆಂಬ ಮುಂದಾಲೋಚನೆ ಯಿಂದ ಬ್ರಿಟಿಷರು ಕೆರೆಯನ್ನು ನಿರ್ಮಿಸಿದ್ದಾರೆ. ನೀರಾವರಿ ಯೋಜನೆಗಳಲ್ಲಿ ಬ್ರಿಟಿಷರು ತುಂಬ ಪರಿಣಿತಿ ಹೊಂದಿದ್ದರು ಎಂಬುದು ಈ ಕೆರೆಯ ಅಣೆಕಟ್ಟನ್ನು ಅವಲೋಕಿಸಿದಾಗ ಗೊತ್ತಾಗುತ್ತದೆ.

**ಕಳಸಕೊಪ್ಪ**

ಕಲಾದಗಿಯಿಂದ ೧೦ ಕಿ.ಮೀ.ದೂರದಲ್ಲಿ ಕಳಸಕೊಪ್ಪ ಗ್ರಾಮದಲ್ಲಿ ಕೆರೆ ಇದ್ದು, ವ್ಯರ್ಥವಾಗಿ ಹರಿಯುವ ನೀರಿಗಾಗಿ ಒಂದು ವ್ಯವಸ್ಥಿತವಾದ ಕೆರೆಯನ್ನು ಬ್ರಿಟಿಷರು ನಿರ್ಮಿಸಿ ಒಂದು ಅಣೆಕಟ್ಟೆ ನಿರ್ಮಿಸಿದರು. ಇದರಿಂದ ಈ ಭಾಗದಲ್ಲಿ ಕುಡಿಯಲು, ಕೃಷಿಗಾಗಿ ನೀರು ಸರಬರಾಜು ಸರಾಗವಾಯಿತು. ಅದರಂತೆ ಇಲ್ಲಿಯ ಕೆರೆಯಲ್ಲಿ ಮೀನು ಸಾಕಾಣಿಕಯ ಉದ್ಯೋಗದ ಸೃಷ್ಟಿಯಾದವು. ಈ ಕೆರೆಯು ಜೀರ್ಣೋದ್ಧಾರಗೊಂಡು ತುಂಬಿದೆ. ಕಪ್ಪು ಕಲ್ಲು, ಗಾರೆಗಚ್ಚು ಉಪಯೋಗಿಸಿ ಕೆರೆಕಟ್ಟೆಯನ್ನು ಕಟ್ಟಲಾಗಿದೆ. ಬೇಸಿಗೆಯಲ್ಲಿ ನದಿ ನೀರು ಬರಿದಾದಾಗ ಈ ಕರೆಯಿಂದ ಕಲಾದಗಿಗೆ ನೀರು ಹರಿಸಲಾಗುತ್ತಿತ್ತು.

**ಕೆಂದೂರು ಕೆರೆ**

ತಾಲೂಕು ಕೇಂದ್ರ ಬಾದಾಮಿಯಿಂದ ಉತ್ತರಕ್ಕೆ ೮ ಕಿ.ಮೀ. ದೂರದಲ್ಲಿದೆ. ಬಾದಾಮಿ ಹೋಬಳಿಗೆ ಕೆಂದೂರು ಸೇರಿದ್ದು, ಕೆಂದೂರು ಕೆರೆ ಇತಿಹಾಸ ಪ್ರಸಿದ್ಧವಾದುದ್ದಾಗಿದೆ. ಕ್ರಿ.ಶ.೬೦೨ರ ಬಾದಾಮಿ ಚಾಲುಕ್ಯ ದೊರೆ ಮಂಗಳೇಶನ ಸ್ಥಂಭ ಶಾಸನದಲ್ಲಿ ಈ ಊರನ್ನು

ಕೆಂದೂರು ಎಂದು, ಕ್ರಿ.ಶ.೫೯೫ರ ಮಹಾಕೂಟ ಶಾಸನದಲ್ಲಿ 'ಕೆನ್ದೋರ' ಎಂದು ಉಲ್ಲೇಖಿಸಲಾಗಿದೆ. ಈ ಗ್ರಾಮದ ಮಣ್ಣು ಕೆಂಪು ಹುಡಿಯಿಂದ ಕೂಡಿದೆ. ಪ್ರಕೃತಿ ವಾಚಕ ಪದದಿಂದ ಕೂಡಿದ ಈ ಗ್ರಾಮ ನಾಮವು ಪ್ರಸ್ತುತ ಕೆಂದೂರು ಎಂದು ರೂಢಿಯಲ್ಲಿದೆ. ಕೆಂದೂರು ಕೆರೆಯ ಜೀರ್ಣೋದ್ಧಾರ ಕಾರ್ಯವನ್ನು ಬ್ರಿಟಿಷರು ಕ್ರಿ.ಶ.೧೯೨೧ರಲ್ಲಿ ಕೈಗೊಂಡು ಇಲ್ಲಿಯ ಜನರಿಗೆ, ಕೃಷಿಕರಿಗೆ ನೀರಿನ ಸಮಸ್ಯೆಯನ್ನು ಪರಿಹರಿಸಿದರು. ಕೆಂದೂರು ಕೆರೆಯಲ್ಲಿ ಮೀನು ಸಾಕಾಣಿಕೆಗೆ ಕೂಡಾ ಬ್ರಿಟಿಷ್ ಅಧಿಕಾರಿಗಳು ಪ್ರೋತ್ಸಾಹಿಸಿ ಶ್ರಮವಹಿಸಿ ಕೆಲಸ ಮಾಡಿದರು. ಜಲಚರಗಳಾದ ಮೀನು, ಏಡಿ, ಆಮೆಯನ್ನು ಆಹಾರದಲ್ಲಿ ಬ್ರಿಟಿಷರು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಹಾಗಾಗಿ ವಿಶಾಲವಾದ ಕೆಂದೂರು ಕೆರೆಯ ಜೀರ್ಣೋದ್ಧಾರ ಮಾಡಿದುದರ ಫಲವಾಗಿ ಕೆರೆಯು ಇಂದಿಗೂ ಸಹ ಜನರ ಹಾಗೂ ಸಕಲ ಜೀವರಾಶಿಗಳಿಗೆ ನೀರುಣಿಸುವ ಕಾರ್ಯದಲ್ಲಿ ನಿರತವಾಗಿದೆ. ಬ್ರಿಟಿಷರು ಕೆಂದೂರು ಕೆರೆಯನ್ನು ಜೀರ್ಣೋದ್ಧಾರ ಮಾಡಿದರೆಂಬುದು ಕ್ರಿ.ಶ.೧೯೨೧ರ ಶಾಸನ ಕಲ್ಲು ಕೆರೆಯ ಪಕ್ಕದಲ್ಲಿರುವುದರಿಂದ ತಿಳಿಯಬಹುದು. ಆದರೆ ಇಂದಿನ ಕೆಂದೂರು ಕರೆಯು ಮುಳ್ಳು ಕಂಟಿಗಳಿಂದ ಆವೃತ್ತವಾಗಿ ಅರಣ್ಯದಂತೆ ಗೋಚರಿಸುತ್ತದೆ. ಕೆರೆ ಬತ್ತಿದ್ದರಿಂದ ಸ್ಥಳೀಯರಿಗೆ ಮೀನುಗಾರಿಕೆ ಉದ್ಯೋಗ ನಿಂತು ಹೋಗಿದ್ದು, ಕುಡಿಯುವ ನೀರಿನ ಸಮಸ್ಯೆ ಉಂಟಾಗುತ್ತಿದೆ.

**ಅಂಚೆ ಕಚೇರಿಗಳು**

**ಭಂಟನೂರು**

ಬ್ರಿಟಿಷರ ವಿರುದ್ಧ ಕ್ರಿ.ಶ.೧೮೫೭ರಲ್ಲಿ ಬಂಡಾಯವನ್ನು ಆರಂಭಿಸಿದ ಹಲಗಲಿ ಬೇಡ ಭಂಟರಿಗೆ ಭಂಟನೂರು ಗ್ರಾಮದ ಬೇಡ(ವಾಲ್ಮೀಕಿ)ಸಮುದಾಯದವರು ಸಹಾಯವನ್ನು ನೀಡಿದ್ದಾರೆ. ಭಂಟ+ರ+ಊರು= ಭಂಟನೂರು. ಅಥವಾ ಭಂಟನ+ಊರು=ಭಂಟನೂರು ಎಂಬುದು ಸ್ಥಳನಾಮ ವಿವೇಚನೆಯಾಗಿದೆ. ಭಂಟನೂರಲ್ಲಿ ಕುಸ್ತಿ, ಕಬಡ್ಡಿ ಕ್ರೀಡಾಪಟುಗಳು ಹೆಚ್ಚಾಗಿ ಮೊದಲಿನಿಂದಲೂ ಪ್ರಸಿದ್ಧಿ ಪಡೆದಿದ್ದಾರೆಂಬುದು ಸ್ಥಳೀಯರ ಅಭಿಪ್ರಾಯವಾಗಿದೆ. ಪ್ರಸ್ತುತ ದಿನಗಳಲ್ಲಿಯೂ ಸಹ ಭಂಟನೂರು ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಗ್ರಾಮೀಣ ಕ್ರೀಡಾಪಟುಗಳು ಇರುವುದು ಕಂಡುಬಂದುದ್ದರಿಂದ ಭಂಟನೂರು ಗ್ರಾಮ ಭಂಟರ ಊರಾಗಿದ್ದಿರ ಬಹುದು ಎಂದು ಸ್ಪಷ್ಟಪಡಿಸಬಹುದು. ಕಲಾದಗಿಯಿಂದ ಪಶ್ಚಿಮಕ್ಕೆ ೧೫ ಕಿ.ಮೀ. ದೂರದಲ್ಲಿ ಘಟಪ್ರಭಾ ನದಿಯ ದಂಡೆಯಲ್ಲಿ ಭಂಟನೂರು ಗ್ರಾಮವಿದೆ. ಹಲಗಲಿ ಬಂಡಾಯವನ್ನು ಅಡಗಿಸಿದ ನಂತರದಲ್ಲಿ ಕಲಾದಗಿಯಲ್ಲಿ ನೆಲೆ ನಿಂತಿದ್ದ ಬ್ರಿಟಷ್ ಅಧಿಕಾರಿಗಳು ಭಂಟನೂರಲ್ಲಿ ಬಂಡಾಯ ಆರಂಭದ ಮುನ್ಸೂಚನೆಯನ್ನು ಕಂಡು ಭಂಟನೂರಲ್ಲಿ ಅಂಚೆ ಕಚೇರಿ

ಆರಂಭಿಸಿದರು. ಕಲಾದಗಿಯಿಂದ ನೇರವಾಗಿ ಬೆಳಗಾವಿಗೆ ಅಂಚೆ ಕಚೇರಿಯ ಮೂಲಕ ಪತ್ರ ವ್ಯವಹಾರ ನಡೆಯುತ್ತಿತ್ತು. ಭಂಟನೂರಲ್ಲಿ ನಡೆಯುವ ಸಕಲ ಮಾಹಿತಿಗಳು ಕಲಾದಗಿ ಅಂಚೆ ಕಚೇರಿಗೆ ಬಂದು ತಲುಪುತ್ತಿದ್ದವು. ಭಂಟನೂರಲ್ಲಿ ಮರಾಠಿ ಶಾಲೆಯು ಸಹ ಆರಂಭವಾಗಿ ಈ ಭಾಗದ ಜನತೆ ಶಿಕ್ಷಣವನ್ನು ಪಡೆಯಲು ಸಹಾಯಕಾರಿಯಾಯಿತು. ಅಂಚೆ ಕಚೇರಿ ಮತ್ತು ಮರಾಠಿ ಶಾಲೆಯ ಎರಡು ಕಟ್ಟಡಗಳು ಹತ್ತಿರದಲ್ಲಿವೆ. ಭಂಟನೂರ ಗ್ರಾಮದ ಶ್ರೀ ರಾಮಣ್ಣಾ ಸೊನ್ನದ ಅವರು ಮುಧೋಳ ಘೋರ್ಪಡೆ ಸಂಸ್ಥಾನಿಕರ ಆಸ್ಥಾನದಲ್ಲಿ ಮಂತ್ರಿಗಳಾಗಿದ್ದರು. ಇವರ ಪ್ರಯತ್ನದ ಫಲವಾಗಿ ಬ್ರಿಟಿಷರ ಸಹಕಾರದಿಂದ ಭಂಟನೂರಲ್ಲಿ ಕನ್ನಡ ಶಾಲೆ, ಅಂಚೆ ಕಚೇರಿ ಆರಂಭಕ್ಕೆ ನಾಂದಿಯಾಯಿತು.

**ಧನ್ನೂರು**

ತಾಲೂಕು ಕೇಂದ್ರ ಹುನಗುಂದದಿಂದ ೧೫ ಕಿ.ಮೀ. ದೂರದಲ್ಲಿದೆ. ಕೃಷ್ಣಾನದಿ ಬದಿಯಲ್ಲಿರುವ ಈ ಗ್ರಾಮವು ನದಿಯನ್ನೇ ತಾಲೂಕಿನ ಗಡಿಯನ್ನಾಗಿ ಹೊಂದಿದೆ. ಬಸವ ಸಾಗರ ಜಲಾಶಯದ ಹಿನ್ನೀರಿನಿಂದ ಮುಳುಗಡೆಯಾದ ಈ ಗ್ರಾಮಕ್ಕೆ ಪುನರ್ ವಸತಿ ಸ್ಥಳ ನೀಡಿದ್ದರೂ ಮೂಲ ಗ್ರಾಮವನ್ನು ಸಂಪೂರ್ಣ ಸ್ಥಳಾಂತರವಾಗಿಲ್ಲ, ಬ್ರಿಟಿಷರ ಆಡಳಿತಾವಧಿಯಲ್ಲಿ ಧನ್ನೂರಿನಲ್ಲಿ ಅಂಚೆ ಕಚೇರಿಯನ್ನು ಸ್ಥಾಪಿಸಿದ್ದರು. ಈ ಅಂಚೆ ಕಚೇರಿಯಿಂದಲೇ ಬಾಗಲಕೋಟೆ, ಕಲಾದಗಿ, ಗುಳೇದಗುಡ್ಡ, ಬೆಳಗಾವಿ ಇತ್ಯಾದಿ ಊರುಗಳೊಂದಿಗೆ ಪತ್ರ ವ್ಯವಹಾರ ವಿನಿಮಯ ನಡೆಯುತ್ತಿತ್ತು. ಅಂಚೆ ಕಚೇರಿಯ ಕಟ್ಟಡ ಮೂಲಸ್ವರೂಪದಿಂದ ಇಂದು ಜೀರ್ಣೋದ್ಧಾರ ಗೊಂಡಿದ್ದು, ಪುನರ್ ವಸತಿ ಗ್ರಾಮದಲ್ಲಿ ಹೊಸ ಕಟ್ಟಡ ತಲೆ ಎತ್ತುವ ಹಂತದಲ್ಲಿದೆ.

**ಕಲಾದಗಿ**

ಕಲಾದಗಿಯು ಬ್ರಿಟಿಷ್ ಕಂಪನಿ ಸರಕಾರದ ಆಡಳಿತದ ಅವಧಿಯಲ್ಲಿ ಜಿಲ್ಲಾ ಕೇಂದ್ರವಾಗಿರುವುದರಿಂದ ಇಲ್ಲಿ ಅಂಚೆ ಕಚೇರಿ ಅತ್ಯಂತ ಅವಶ್ಯಕವಾಗಿ ಬೇಕಾಗಿತ್ತು. ಇದನ್ನು ಗಮನಿಸಿ ಸರ್ ಥಾಮಸ್ ಮನ್ರೋ ಇಲ್ಲಿ ಅಂಚೆ ಕಚೇರಿಯನ್ನು ಆರಂಭಿಸಿದರು. ಇದು ನ್ಯಾಯಾಲಯದ ಕಟ್ಟಡ, ಸರಕಾರಿ ಆಸ್ಪತ್ರೆ ಕಾಂಪೌಂಡಿಗೆ ಹೊಂದಿಕೊಂಡಿದೆ. ನಾಡ ಕಾರ್ಯಾಲಯದ ಎದುರಿನ ಕಟ್ಟಡ ಅಂಚೆ ಕಚೇರಿಯಾಗಿದೆ. ಈ ಕಟ್ಟಡವು ಸಹ ನ್ಯಾಯಾಲಯದ ಮಾದರಿಯಲ್ಲಿ ಚಿಕ್ಕದಾಗಿ ಕಟ್ಟಲಾಗಿದೆ. ಮಳೆಯಿಂದ ಸೋರಿ ಹಾನಿಯಾಗಿದ್ದುದರಿಂದ ಅಂಚೆ ಕಚೇರಿಯನ್ನು ದುರಸ್ತಿ ಮಾಡಲಾಗಿದೆ. ಸುತ್ತಲೂ ಗಿಡಮರಗಳಿಂದ ಆವೃತ್ತವಾಗಿದ್ದು, ಬೇಸಿಗೆಯಲ್ಲಿ ತಂಪಾಗಿರುವಂತಹ ಕಾರ್ಯಾಲಯ ಇದಾಗಿದೆ. ಬೆಳಗಾವಿಯಿಂದ

ಕಲಾದಗಿಗೆ ಅಂಚೆ ಪತ್ರಗಳು ಬರುತ್ತಿದ್ದವು. ಕಲಾದಗಿಯಿಂದ ಬೆಳಗಾವಿ ಮಾರ್ಗದಲ್ಲಿ ಬ್ರಿಟಿಷರು ರಸ್ತೆ ಸುಧಾರಣೆಯ ಕಾರ್ಯವನ್ನು ಕೈಗೊಂಡು ನೀರಿನ ಪ್ರವಾಹವಿರುವ ಸ್ಥಳಗಳಲ್ಲಿ ಸೇತುವೆಗಳನ್ನು ಸಹ ನಿರ್ಮಿಸಿದ್ದಾರೆ.

**ತೇರದಾಳ**

ತೇರದಾಳದಲ್ಲಿ ಬ್ರಿಟಿಷರು ಅಂಚೆ ಕಚೇರಿ, ಶಾಲೆಯನ್ನು ಸಹ ನಿರ್ಮಿಸಿದ್ದಾರೆ. ಉಪ-ತಹಶೀಲ್ದಾರ ನಾಡ ಕಾರ್ಯಾಲಯ, ಸರಕಾರಿ ಕನ್ನಡ ಗಂಡು ಮಕ್ಕಳ ಮಾದರಿ ಪ್ರಾಥಮಿಕ ಶಾಲೆಯನ್ನೂ ತೇರದಾಳದಲ್ಲಿ ಬ್ರಿಟಿಷರು ನಿರ್ಮಿಸಿದ್ದಾರೆ. ಅಂಚೆ ಕಚೇರಿಯ ಕಟ್ಟಡಕ್ಕೆ ಸ್ಥಳೀಯವಾಗಿ ದೊರೆಯುವ ಕಪ್ಪು, ಕೆಂಪು, ಕಲ್ಲು, ಗಾರೆಗಚ್ಚು, ಸೀಮೆಸುಣ್ಣ, ಕಟ್ಟಿಗೆಯನ್ನು ಉಪಯೋಗಿಸಿ ಕಟ್ಟಲಾಗಿದೆ. ಮೇಲು ಹೊದಿಕೆಗೆ ಮಂಗಳೂರು ಹೆಂಚು ಹಾಕಲಾಗಿದ್ದು, ವಾತಾವರಣಕ್ಕೆ ಹೊಂದಿಕೊಳ್ಳುವ ರೀತಿಯಲ್ಲಿ ಅಂಚೆ ಕಚೇರಿಯನ್ನು ಬ್ರಿಟಿಷರು ನಿರ್ಮಿಸಿದ್ದಾರೆ. ಈಗಲೂ ಅಂಚೆ ಕಚೇರಿ ಸಾರ್ವಜನಿಕ ಸೇವೆಗೆ ಮುಕ್ತವಾದ ಸೂಕ್ತ ಸ್ಮಾರಕವಾಗಿದೆ. ಬ್ರಿಟಿಷರು ನಿರ್ಮಿಸಿದ ಸ್ಮಾರಕಗಳು ಕೇವಲ ತಮ್ಮ ಸ್ವಂತಕ್ಕೆ ಅಷ್ಟೇ ಅಲ್ಲದೇ ಸಾರ್ವಜನಿಕರ ಹಿತಾಸಕ್ತಿಗಾಗಿ ಸೇವೆಯನ್ನು ಸಲ್ಲಿಸಲು ಆಸ್ಪತ್ರೆ, ಶಾಲೆ, ನಾಡ ಕಚೇರಿ, ಸೇತುವೆ ಮುಂತಾದ ಸ್ಮಾರಕಗಳನ್ನು ನಿರ್ಮಿಸಿದ್ದಕ್ಕೆ ರಬಕವಿ ಬನಹಟ್ಟಿ, ತೇರದಾಳದಲ್ಲಿ ವಸಾಹತು ಕಾಲದ ಸ್ಮಾರಕಗಳು ಇಂದಿಗೂ ಸಾಕ್ಷಿಯಂತಿವೆ.

## ೪.೬.ಬ್ರಿಟಿಷರ ಸಮಾಧಿ(ಗೋರಿ)ಕಟ್ಟಡಗಳು

ಬ್ರಿಟಿಷರ ಸಮಾಧಿಗಳು ಕಲಾದಗಿ ಗ್ರಾಮದ ಊರ ಹೊರಗೆ ದಕ್ಷಿಣಕ್ಕೆ ಖಾಸಗಿ ಜಮೀನಿನಲ್ಲಿ ನಿರ್ಮಿಸಲಾಗಿದೆ. ಈ ಸಮಾಧಿಗಳ ಸುತ್ತಲೂ ಕಾಂಪೌಂಡ ನಿರ್ಮಿಸಿದ್ದರೂ ಸಹ ಮುಳ್ಳು, ಕಂಟಿ, ಪೊದೆಗಳು ಬೆಳೆದುಕೊಂಡು ಬ್ರಿಟೀಷರ ಸಮಾಧಿ ಸ್ಮಾರಕಗಳು ಅವಸಾನದಂಚಿನಲ್ಲಿವೆ. ಸುಮಾರು ೬೪ ಬ್ರಿಟಿಷ್ ಸಮಾಧಿ ಸ್ಮಾರಕಗಳಿದ್ದು, ಅದರಲ್ಲಿ ನಿಧಿಯ ಆಸೆಗಾಗಿ ಹಲವಾರು ಸ್ಮಾರಕಗಳನ್ನು ನಾಶಗೊಳಿಸಲಾಗಿದೆ. ವ್ಯವಸ್ಥಿತವಾಗಿ ಉಳಿದ ಬ್ರಿಟಿಷರ ಸಮಾಧಿ ಸ್ಮಾರಕಗಳಲ್ಲಿ ಕೆಲವೊಂದು ಮಾತ್ರ ವಿಶ್ಲೇಷಿಸಲಾಗಿದೆ.

ಒಂದು ಬ್ರಿಟಿಷರ ಸಮಾಧಿ ಶಾಸನದ ಪ್ರಕಾರ ಕ್ರಿ.ಶ.೧೮೨೪, ಸೆಪ್ಟೆಂಬರ್ ೬ರಲ್ಲಿ ಕ್ಯಾಪ್ಟನ್ ಮೆರಿಡಿತನ ಮಗಳಾದ ಹ್ಯಾರಿಡ್ ಐ ಜೆನ್ನೆಟ್ ತನ್ನ ೨೧ನೇ ವಯಸ್ಸಿನಲ್ಲಿ ಮರಣ ಹೊಂದಿದ ದಾಖಲೆಯಿದೆ.[೨೭] ಆದರೆ ಇಲ್ಲಿ ಜೆನ್ನೆಟ್ ಸಾವಿಗೆ ಕಾರಣ ಏನು? ಹೇಗೆ ತೀರಿಕೊಂಡಳು? ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಹ್ಯಾರಿಡ್ ಯ ಜೆನ್ನೆಟ್

ಸಮಾಧಿ ಸ್ಮಾರಕವು ತಳವಿನ್ಯಾಸದಲ್ಲಿ ೨.೧೦ ಮೀ. ಅಗಲ, ೧.೬.ಮೀ. ಉದ್ದವಿದೆ. ಈ ತಳಪಾಯದ ಮೇಲೆ ಚೌಕಾಕಾರದ ೧.೪೭ ಮೀ.ಅಗಲ, ೧.೧೭ ಮೀ. ಉದ್ದವಿರುವ ಹಾಗೂ ೧ ಮೀ. ಎತ್ತರದಲ್ಲಿ ಸಮಾಧಿಯನ್ನು ನಿರ್ಮಿಸಲಾಗಿದೆ. ಸುಣ್ಣ ಮಿಶ್ರಿತ ಗಾರೆ, ಗಚ್ಚು, ಇಟ್ಟಿಗೆ, ಸೀಮೆ ಸುಣ್ಣ, ಚಿಕ್ಕ ಪಾಟಿ ಗಾತ್ರದ ಕಲ್ಲು ಬಳಸಿಕೊಂಡು ಸಮಾಧಿಯನ್ನು ಕಟ್ಟಲಾಗಿದೆ. ಆದರೆ ಸಮಾಧಿಗೆ ಮುಳ್ಳು ಕಂಟಿಗಳು, ಪೊದೆಯು ಆಶ್ರಯ ನೀಡಿರುವುದು ವಿಪರ್ಯಾಸದ ಸಂಗತಿಯಾಗಿದೆ. ಜೆನ್ನೆಟ್‌ಳ ಸಮಾಧಿಯ ಮುಂದೆ ಸಂಖ್ಯೆ ೧೮ ಎಂದು ಬರೆದು ಒಂದು ಗುರುತಿನ ಕಲ್ಲು ನೆಡಲಾಗಿದೆ. ಕಲಾದಗಿ ಗ್ರಾಮವು ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸೈನಿಕ ನೆಲೆಯಾಗಿರುವುದರಿಂದ ಇಲ್ಲಿ ಸೈನ್ಯದ ಮುಖ್ಯಸ್ಥ ಕ್ಯಾಪ್ಟನ್ ಇರುತ್ತಿದ್ದ, ಇವನ ಕೆಲಸ ಭಾರತೀಯ ಸ್ವಾತಂತ್ರ್ಯ ದಂಗೆಗಳನ್ನು ಹತ್ತಿಕ್ಕುವ ಜವಾಬ್ದಾರಿ ಆಗಿರುತ್ತಿತ್ತು. ಕ್ಯಾಪ್ಟನ್‌ನಿಗೆ ಬಿಡುವಿಲ್ಲದೇ ಕೆಲಸ ಕಾರ್ಯದಲ್ಲಿ ತೊಡಗಿರುವುದರಿಂದ ಮಡದಿ ಜೆನ್ನೆಟ್ ಏನಾದರೂ ಅನಾರೋಗ್ಯ, ದೀರ್ಘ ಖಾಯಿಲೆಯಿಂದ ಅಥವಾ ಸ್ಥಳೀಯರ ಆಕ್ರೋಶದ ಬೆಂಕಿಗೆ ಬಲಿಯಾದಳೊ? ಎಂಬುದು ಸ್ಪಷ್ಟವಾದಂತಹ ಮಾಹಿತಿಯು ಅಲಭ್ಯವಿದೆ. ಯಾಕೆ ಇಷ್ಟು ಕಿರಿವಯಸ್ಸಿನಲ್ಲಿ ಮಡಿದಳೋ ಏನೋ? ಗೊತ್ತಾಗದು.

ಕ್ರಿ.ಶ.೧೮೨೧ ಬ್ರಿಟಿಷ್ ಸಮಾಧಿ ಸ್ಮಾರಕದ ಶಾಸನದ ಪ್ರಕಾರ ಆನ್ನೆ ಮತ್ತು ಹೆನ್ರಿ ರೈಸ್ ಕಿಂಗ್‌ರ ದಂಪತಿಗಳ ಪೌಲೈನ್ ಎಂಬ ೧೩ ತಿಂಗಳ ಕೂಸು ಮರಣ ಹೊಂದಿದ ವಿಷಯ ತಿಳಿಸುತ್ತದೆ.[೨೮] ದಂಪತಿಗಳು ಅದೇಷ್ಟು ನರಕಯಾತನೆಯನ್ನು ಅನುಭವಿಸಿದರೋ? ಏನೋ? ತಮ್ಮ ಮಗುವಿನ ನೆನಪಿಗಾಗಿ ಸಮಾಧಿ ಸ್ಮಾರಕವನ್ನು ನಿರ್ಮಿಸಿ ಮಗುವಿನ ಗೋರಿಯ ಮೇಲಿನ ಶಾಸನದಲ್ಲಿ "ಹೋಗು ಎಲ್ಲವನ್ನು ಬಿಟ್ಟು ಹೋಗು ನಮ್ಮನ್ನು ಮರೆಯಬೇಡ, ಬಹುಶಃ ನಾಳೆ ನಾವೆಲ್ಲರೂ ನಿನ್ನವರಾಗಬಹುದು" ಎಂದು ಚರಮಗೀತೆಯನ್ನು ಹೆನ್ರಿ ರೈಸ್ ಕಿಂಗ್ ಗೋರಿಯ ಶಾಸನದಲ್ಲಿ ಬರೆಸಿದ್ದಾರೆ. ಪೌಲೈನ್ ಸಮಾಧಿಯ ಮುಂದೆ ಸಂಖ್ಯೆ ೨೧ ಬರೆದು ಗುರುತಿನ ಕಲ್ಲು ನೆಡಲಾಗಿದೆ. ಸಮಾಧಿ ೨.೩೦ ಮೀ. ಉದ್ದ, ೧.೯ ಮೀ. ಅಗಲದಲ್ಲಿ ೨೫ ಸೆ.ಮೀ. ಎತ್ತರದ ತಳಪಾಯ ಹೊಂದಿದೆ. ಈ ತಳಪಾಯದ ಮೇಲೆ ೧. ಮೀ.ಅಗಲ, ೧.೪ ಮೀ. ಉದ್ದ, ೧ ಮೀ. ಎತ್ತರದಲ್ಲಿ ಸಮಾಧಿಯನ್ನು ನಿರ್ಮಿಸಲಾಗಿದೆ. ಮೇಲ್ಭಾಗ ೫ ಇಂಚು ಎತ್ತರ, ೨.೧೦ ಅಡಿ ಮತ್ತು ೪.೧೧ ಅಡಿ ಸುತ್ತಳತೆ ಚೌಕಾಕಾರದಲ್ಲಿದೆ. ಸೀಮೆಸುಣ್ಣ, ಮರಳು ಮಿಶ್ರಿತ ಗಾರೆಗಚ್ಚು, ಇಟ್ಟಿಗೆ, ಕಲ್ಲಿನಿಂದ ಈ ಸಮಾಧಿ ಸ್ಮಾರಕವನ್ನು ಕಟ್ಟಲಾಗಿದೆ. ಪೌಲೈನ್ ಸಮಾಧಿ ಬಲ ಭಾಗದಲ್ಲಿ ತಾಯಿ ಮೇರಿ ಆನ್ನೆ ಸಮಾಧಿಯನ್ನು ಸಹ ನಿರ್ಮಿಸಲಾಗಿದೆ. ಕ್ರಿ.ಶ.೧೮೨೨ ಜುಲೈ ೧೧ರ ಸ್ಮಾರಕ ಶಾಸನದಲ್ಲಿ ಲೆಫ್ಟಿನೆಂಟ್ ಹೆನ್ರಿ ರೈಸ್ ಕಿಂಗ್‌ನ ಪತ್ನಿ ೨೨ ವರ್ಷದ ಮೇರಿ ಆನ್ನೆ ಕಿಂಗ್

ಸ್ಮರಣಾರ್ಥ ಈ ಶಾಸನವನ್ನು ನಿಲ್ಲಿಸಲಾಗಿದೆ. ಮೇರಿ ತನ್ನ ೧೩ ತಿಂಗಳ ಕೂಸು ಪೌಲೈನ ಸಾವಿನ ದುಃಖ ಮರೆಯದೇ ಅವಳೂ ಕೂಡಾ ಸಾವನ್ನಪ್ಪಿದಂತಹ ಮನ ಕಲಕುವ ವಿಷಯವನ್ನು ಈ ಸಮಾಧಿ ಸ್ಮಾರಕ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಮೇರಿ ಆನ್ನೆ ಸಮಾಧಿ ಮುಂದೆ ಸಂಖ್ಯೆ ೨೨ ಬರೆದು ಗುರುತಿನ ಕಲ್ಲು ನೆಡಲಾಗಿದೆ. ಆನ್ನೆ ಸಮಾಧಿ ತಳಪಾಯದ ಮೊದಲನೆ ಮೆಟ್ಟಿಲು ಎತ್ತರ ೧೬ ಸೆಂ.ಮೀ. ೨.೭೫ ಮೀ ಉದ್ದ, ೨.೭೫ ಮೀ. ಅಗಲವಿದೆ. ಎರಡನೆಯ ಮೆಟ್ಟಿಲು ಎತ್ತರ ೨೪ ಸೆ.ಮೀ. ೨.೨೦ ಮೀ. ಉದ್ದ, ೧.೭೦ ಮೀ. ಅಗಲವಿದೆ. ಈ ತಳಪಾಯದ ಮೇಲೆ ೧.೨೦ ಮೀ. ಅಗಲ ೧.೨೦ ಮೀ. ಉದ್ದ, ೨.೩೦ ಎತ್ತರದಲ್ಲಿ ಸಮಾಧಿಯನ್ನು ನಿರ್ಮಿಸಲಾಗಿದೆ. ಮೇಲ್ಭಾಗದಲ್ಲಿ ೫ ಹಂತದ ಮೆಟ್ಟಿಲು ಏರಿಕೆ ಕ್ರಮದಲ್ಲಿ ಅಳತೆಯನ್ನು ಕಡಿಮೆಗೊಳಿಸುತ್ತಾ ವ್ಯವಸ್ಥಿತ ರೀತಿಯಲ್ಲಿ ಕಟ್ಟಲಾಗಿದೆ. ಈ ಸಮಾಧಿಯ ಮೇಲ್ಭಾಗ ದೇವಸ್ಥಾನದ ಗೋಪುರದ ರೀತಿಯಲ್ಲಿ ಮೇಲ್ಭಾಗದಿಂದ ಹಿಡಿದು ಕಳಸದವರೆಗಿನ ಹಂತದ ರೀತಿಯಲ್ಲಿ ನಿರ್ಮಿಸಲಾಗಿದೆ. ಈ ಎರಡು ಸಮಾಧಿ ಸುತ್ತಲೂ ಕಾಂಪೌಂಡ್ ಇದ್ದು, ಕಾಂಪೌಂಡವು ೬.೯೦ ಮೀ. ಅಗಲ, ೪.೩೦ ಮೀ. ಉದ್ದ ೭೦ ಸೆಂ.ಮೀ. ಎತ್ತರದಲ್ಲಿ ನಿರ್ಮಿಸಿದ್ದಾರೆ. ತಾಯಿ ಮತ್ತು ಮಗಳ ಸಮಾಧಿಗಳ ರಕ್ಷಣೆಗೆ ಈ ವ್ಯವಸ್ಥಿತವಾದ ಕಾಂಪೌಂಡನ್ನು ಕಟ್ಟಿದ್ದಾರೆ.

ಇಬ್ಬರು ತರುಣ ಸೈನಿಕರು ಈಜಲು ಹೋಗಿ ಘಟಪ್ರಭಾ ನದಿಗೆ ಬಲಿಯಾದ ಸಂಗತಿ ಮತ್ತೊಂದು ಸಮಾಧಿ ಶಾಸನದಲ್ಲಿ ಮಾಹಿತಿ ಲಭ್ಯವಿದೆ. ಬ್ರಿಟಿಷರು ತಮ್ಮ ಆಹಾರದಲ್ಲಿ ಜಲಚರಗಳಾದ ಮೀನು, ಏಡಿ, ಆಮೆಗಳಂತಹವುಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಈ ಇಬ್ಬರು ಸೈನಿಕರು ಮೀನು ಹಿಡಿಯಲು ಹೋಗಿ ಕಾಲು ಜಾರಿ ಘಟಪ್ರಭೆ ನದಿಗೆ ಬಿದ್ದು ಈಜಲು ಬಾರದೇ ಮರಣ ಹೊಂದಿರಬೇಕು ಎಂದು ಊಹಿಸಬಹುದು. ಇವರ ನೆನಪಿಗಾಗಿ ಕ್ಯಾಪ್ಟನನು ಸಮಾಧಿ ನಿರ್ಮಿಸಿ ಅವರಿಗೆ ಗೌರವ ಸಲ್ಲಿಸುವುದು ಬ್ರಿಟಿಷರ ಒಂದು ಪದ್ಧತಿಯಾಗಿದೆ.

ಆಂಗ್ಲರ ಮುದ್ದು ನಾಯಿಯ ಸಮಾಧಿ ಸ್ಮಾರಕ ಸಹ ಇಲ್ಲಿದ್ದಿತ್ತು ಎಂಬುದು ಸ್ಥಳೀಯರ ಅಭಿಪ್ರಾಯ. ಇಲ್ಲಿ ಬ್ರಿಟಿಷರು ಪ್ರಾಣಿ ಪ್ರೇಮಿಗಳಾಗಿದ್ದರು ಎಂಬ ಅಂಶ ಎದ್ದು ಕಾಣುತ್ತದೆ. ನಾಯಿ ನಿಯತ್ತಿನ ಪ್ರಾಣಿ, ಸ್ವಾಮಿನಿಷ್ಠೆಗೆ ಹೆಸರಾದಂತಹ ಪ್ರಾಣಿ ಇದರ ಅಪಾರವಾದ ಪ್ರಾಮಾಣಿಕ ಸೇವೆ ಬ್ರಿಟಿಷರಿಗೆ ಎಷ್ಟರ ಮಟ್ಟಿಗೆ ಸಲ್ಲಿರುತ್ತದೆ ಎಂಬ ಅಂಶ ತಿಳಿಯುತ್ತದೆ.ಒಂದು ನಾಯಿ ಕೂಡಾ ಬ್ರಿಟಿಷರಿಗೆ ಹುತಾತ್ಮ ಯೋಧನಂತೆ ಕಂಡಿರಬೇಕು ಎಂಬ ಸತ್ಯ ಈ ನಾಯಿಯ ಸ್ಮಾರಕದಿಂದ ಅರ್ಥವಾಗುತ್ತದೆ. ಅವಸನದಂಚಿನಲ್ಲಿರುವ ಫಿರಂಗಿಯರ ಗೋರಿಗಳ ಸಮೂಹದಲ್ಲಿ ನಾಯಿಯ ಗೋರಿಯನ್ನು ಗುರುತಿಸಿ ಪತ್ತೆ ಹಚ್ಚುವುದು ತುಂಬಾ ಕಷ್ಟಕರ ಸಂಗತಿಯಾಗಿದೆ. ಗೋರಿಯೊಳಗೆ 'ನಿಧಿ' ಇದೆ ಎಂಬ

ಮೂಢನಂಬಿಕೆಯಿಂದ ಬಹುತೇಕ ಗೋರಿಗಳ ಮೇಲಿರುವ ಶಾಸನ(ಮಾಹಿತಿ ಫಲಕ)ವನ್ನು ಕಿತ್ತೆಸೆದು ಹಾಳು ಮಾಡಿದ್ದರಿಂದ ಗೋರಿಗಳಿಗೆ ಧಕ್ಕೆಯಾಗಿದೆ. ಕ್ರಿ.ಶ.೧೮೫೧ ಆಗಸ್ಟ್ ೦೧ರ ಸ್ಮಾರಕದಲ್ಲಿ ಅಲೆಮಾಮ್ ಲೆಫ್ಟೆನೆಂಟ್ ಚ ಕೆನಸಿಂಗಟನ್ ೩೧ ವರ್ಷ ಮತ್ತು ಲೆಫ್ಟಿನೆಂಟ ತಿ.ಆಲೇಕ್ಸ್ ಸ್ಟೇನುಸ್ ೩೦ ವರ್ಷದ ಸೈನಿಕರು ಮರಣ ಹೊಂದಿರುವಂತಹ ವಿವರಣೆ ಲಭ್ಯವಿದೆ.

ಕಲಾದಗಿಯಲ್ಲಿರುವ ಬ್ರಿಟಿಷರ ಸಮಾಧಿ ಸ್ಮಾರಕಗಳನ್ನು ಗಮನಿಸಿದಾಗ, ಹಲವಾರು ಕುತೂಹಲಕಾರಿ ವಿಷಯಗಳು ದೊರೆಯುತ್ತವೆ. ಭಾರತೀಯರನ್ನು ಬಲು ದರ್ಪದಿಂದ ಆಳಿದ ಆಂಗ್ಲರು ಕೂಡಾ ಸಾವು ಬಂದಾಗ ಕೇವಲ ಮನುಷ್ಯರೇ ಎಂಬುದನ್ನು ಸೂಚಿಸುತ್ತದೆ. ಸಾವಿನ ಸಮಾಜವಾದಕ್ಕೆ ಮಗು, ತರುಣ, ಯುವತಿ, ಸೈನಿಕ, ವೃದ್ಧ, ಚಕ್ರವರ್ತಿ, ನಾಯಿ ಮರಿ ಎಂಬ ವ್ಯತ್ಯಾಸವಿಲ್ಲ. ಬ್ರಿಟಿಷರು ಯುದ್ಧ ಸಂಸ್ಕೃತಿಯಲ್ಲಿ, ರಣರಂಗದಲ್ಲಿ ಸತ್ತವರಿಗೆ ಅಪೂರ್ವ ಗೌರವ ಸಲ್ಲಿಸುವ ಪದ್ಧತಿಯಿದೆ. ಮುಖ್ಯವಾಗಿ ಸೈನಿಕರ ಶೌರ್ಯದ ಗುಣಗಾನ ಮಾಡುವ ಸ್ಮಾರಕಗಳನ್ನು ನಿಲ್ಲಿಸುವರು. ಆಂಗ್ಲ ಕವಿಗಳು ವೀರರ ಬಗ್ಗೆ ಶೋಕಗೀತೆಯನ್ನು ಬರೆಯುವರು. ಇಲ್ಲಿ ವ್ಯಂಗ್ಯ ಎಂದರೆ ಬ್ರಿಟಿಷರ ವಿರುದ್ಧ ಹೋರಾಡಿದ ಭಾರತೀಯರಾದ ಹಲಗಲಿ ಬೇಡರು, ಸಿಂಧೂರ, ಲಕ್ಷ್ಮಣ, ಜಡಗಾ-ಬಾಳಾ, ಇವರು ಶತ್ರುಗಳಾಗಿ ಚಿತ್ರಿತರಾಗುತ್ತಾರೆ. ಆದರೆ ಸ್ವಾಭಿಮಾನಿ ಸ್ವಾತಂತ್ರ್ಯ ಹೋರಾಟಗಾರರ ಸಮಾಧಿಗಳು ಎಲ್ಲಿವೆ? ಬ್ರಿಟಿಷರು ಯಾಕೆ ನಿರ್ಮಿಸಲಿಲ್ಲ? ಎಂಬ ಸೂಕ್ಷ್ಮತೆಯನ್ನು ಇಲ್ಲಿ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಭಾರತ ದೇಶ ಸ್ವಾತಂತ್ರ್ಯಾನಂತರ ಮುಧೋಳದಲ್ಲಿ ಜಡಗಾ-ಬಾಳಾರ ನೆನಪಿಗೋಸ್ಕರ ಚಿಕ್ಕದಾದ ಸ್ಮಾರಕ ತಲೆ ಎತ್ತಿ ನಿಂತಿದೆ. ಕಲಾದಗಿ ಸ್ಮಾರಕಗಳು ಅನಾಥವಾಗಿ ಬೀಳಲು ಕಾರಣಗಳು ಹಲವಾರಿವೆ. ನಮ್ಮ ದೇಶ ಆಳಿದ ಕೆಂಪು ಮುಖದವರಾದ ಬ್ರಿಟಿಷರ ಸ್ಮಾರಕ ನಾವೇಕೆ ರಕ್ಷಿಸಬೇಕು? ಬ್ರಿಟಿಷರೇನು ನಮ್ಮ ಹಿರಿಯರೇ? ಎಂಬ ದ್ವೇಷದ ಮನೋಭಾವನೆಯಿಂದ ಕೆಲವು ಕಿಡಿಗೇಡಿಗಳು ಕೆಲವೊಂದು ಸ್ಮಾರಕ ಸಮಾಧಿಗಳನ್ನು ಭಗ್ನಗೊಳಿಸಿ ಶಾಸನಗಳನ್ನು ತ್ರುಟಿತಗೊಳಿಸಿರಬಹುದು, ನಿಧಿಗಾಗಿ ಗೋರಿಗಳನ್ನು ಒಡೆದಿರಬಹುದು ಎಂದು ಗುರುತಿಸಬಹುದು. ಕಲಾದಗಿ ಊರಿನ ಮಧ್ಯಭಾಗದಲ್ಲಿ ಕೆಲವೊಂದು ಅವಶೇಷಗಳನ್ನೊಂಡು ಗೋರಿಗಳಿವೆ. ಆದರೆ ಇವೆಲ್ಲ ಗೋರಿಗಳು ಮತ್ತು ಶಾಸನಗಳು ಸಂಪೂರ್ಣವಾಗಿ ನಾಶವಾಗಿವೆ. ಕಲಾದಗಿಯಲ್ಲಿ ಕ್ರೈಸ್ತರ ಗೋರಿ ಸ್ಥಳಗಳು ಎರಡು ಇದ್ದವು ಎಂದು ಇಲ್ಲಿ ಗುರುತಿಸಲಾಗಿದೆ. ಕಲಾದಗಿ ಪರಿಸರದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ಅಧ್ಯಯನಗಳು ನಡೆಯಬೇಕಾದ ಅನಿವಾರ್ಯತೆ ಯಿದೆ. ಇದರಿಂದ ಹೊಸ ಚರಿತ್ರೆಯನ್ನು ದಾಖಲಿಸಲು ಸಹಾಯವಾಗುತ್ತದೆ.

## ಬ್ರಿಟಿಷ ಶಾಸನಗಳು

ಐರೋಪ್ಯರ ಪ್ರಭಾವದಿಂದ ಚರಿತ್ರೆ ಮತ್ತು ಶಾಸನ ಅಧ್ಯಯನ ಬೆಳವಣಿಗೆ ಕ್ರಮ ರೂಢಿಯಾಯಿತು. Rometists=ರಮ್ಯತಾವಾಧಿಗಳು(ನೋಡುದೆಲ್ಲಾ ಸುಂದರವಾಗಿರಬೇಕು) ಜ್ಞಾನ=ತಿಳುವಳಿಕೆ, ವಿಜ್ಞಾನ=ಖಚಿತ ತಿಳುವಳಿಕೆ > ಇರುವಂತಹ ಸಂಪನ್ಮೂಲವನ್ನು ಅರಿತು ಕೊಂಡು, ತಿಳಿದುಕೊಂಡು ಇತರರಿಗೆ ತಿಳಿಸಿಕೊಡುವುದು, ಯುರೋಪಿಯನ್ನರು ಭಾರತಕ್ಕೆ ಆಗಮಿಸಿ ಮೊದಲು ಸಂಸ್ಕೃತ ಭಾಷೆ ಕಲಿತರು. ಬೆಂಗಾಲ ಕೋರ್ಟ್‌ನ ನ್ಯಾಯಾಧೀಶ ಸರ್ ವಿಲಿಯಂ ಜೋನ್ಸ್ ೧೭೮೪ರಲ್ಲಿ "ಬೆಂಗಾಲ ಆಸಿಯಾಟಿಕ್ ಸೊಸೈಟಿ" ಆರಂಭಿಸಿ ಸ್ಥಳೀಯ ಭಾಷೆಯಲ್ಲಿದ್ದ ಸಾಹಿತ್ಯ, ಚರಿತ್ರೆಯ ಪಠ್ಯವನ್ನು ಇಂಗ್ಲೀಷ್ ಭಾಷೆ ತರ್ಜುಮೆ ಮಾಡಲು ಆದೇಶಿಸಿದನು. "ಕಾಳಿದಾಸ ಶಕುಂತಲ, ಅಭಿಜ್ಞಾನ ಚರಿತ್ರೆ" ಕೃತಿಗಳು ಅನುವಾದಗೊಂಡವು. ಕರ್ನಲ ಪೌಲೆನ ಮೆಕೆಂಜಿ ಕನ್ನಡ ಶಾಸನಗಳ ಅಧ್ಯಯನ ಪಿತಾಮಹ 'ಎಲಿಪಿನಸ್ಟನ್' ಮುಂಬಯಿ ಪ್ರಾಂತ್ಯದ ಶಾಸನ ಅಧ್ಯಯನ ಕೈಗೊಂಡನು. ವಸಾಹತುಶಾಹಿಗಳನ್ನು ಏಕಮುಖವಾಗಿ ವಿರೋಧಿಸದೇ ವಿವಿಧ ಆಯಾಮಗಳ ಮೂಲಕ ಅಧ್ಯಯನ ಮಾಡಬೇಕಾದ ಆಗತ್ಯತೆ ಇದೆ.

'ಪುನರಪಿ ಜನನಂ ಪುನರವೆ ಮರಣ ಎಂಬ ನಾಣ್ನುಡಿಯಂತೆ ಕಿ.ಪೂ.೪ನೇ ಶತಮಾನದಲ್ಲಿ ಏಸುವಿನ ಜನನವಾಗುತ್ತದೆ. ಕ್ರೈಸ್ತ ಮಿಷನರಿಗಳ ದಾಖಲೆಗಳು ಚೆನ್ನೈ, ಎಗ್ಮೋರ ಮ್ಯೂಸಿಯಂ, ಗೋವಾ, ಪುಣೆ, ಬೆಂಗಳೂರು ಪತ್ರಾಗಾರ ಇಲಾಖೆ, ಮಂಗಳೂರು, ಗೋವಾ ಚರ್ಚುಗಳಲ್ಲಿ ಲಭ್ಯವಿವೆ. ಏಸುವಿನ ೧೨ ಜನ ಶಿಷ್ಯರಲ್ಲಿ ಒಬ್ಬನು ೧೫೧೦ ಪೋರ್ಚಗೀಸರೊಡನೆ ಸಂಬಂಧದಿಂದ ಕ್ರೈಸ್ತಮತ ಆರಂಭವಾಯಿತು. ಬ್ರಿಟಿಷರು ಸ್ಥಳೀಯ ನಾಯಕರು, ದೇಶಮುಖ, ಪಟೇಲ, ರಾಜರನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡು ಆಡಳಿತ ಮಾಡಿದರು. ಬ್ರಿಟಿಷರು ೨೦ ವರ್ಷಗೊಮ್ಮೆ ಆಡಳಿತದಲ್ಲಿ ತಿದ್ದುಪಡಿ ತಂದರು. ೧೮೦೦ರಲ್ಲಿ ಜಾನ್ ಹ್ಯಾಡ್ಸ್ ಬಳ್ಳಾರಿಯಲ್ಲಿ ಕ್ಯಾಥೋಲಿಕ ಚರ್ಚ ಆರಂಭಿಸಿದನು. ಯುಕ್ಲೇಶಿಯಾ=ಧರ್ಮಸಭೆ, ಹಿಬ್ರೂ ಭಾಷೆ, ಕಹಲ=ಧರ್ಮಸಭೆ, ಚರ್ಚಗೆ=ಗುಡಿ, ದೇವಾಲಯ, ಇಗರ್ಜಿ, ಕ್ರೈಸ್ತಾಲಯ ಎಂದು ಪ್ರಾದೇಶಿಕ ಹೆಸರುಗಳಿವೆ. ಈಸ್ಟ್ ಇಂಡಿಯಾ ಕಂಪನಿ ಅಧಿಕಾರಿ ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ಬಂದು ಇವರ ಕಾರ್ಯ ಮೆಚ್ಚಿ ಭೂದಾನ ಮಾಡಿದಂತಹ ಉಲ್ಲೇಖವಿದೆ.

ಗೋಥಿಕ ಶೈಲಿ ಎಂದರೆ ಅನಾಗರಿಕ, ೩ ಮತ್ತು ೫ನೇ ಶತಮಾನದಲ್ಲಿ ಗ್ರೀಕ್+ ರೋಮನ್‌ರು ಬಳಸಿದ ಪದ. ಕ್ಯಾಥೋಲಿಕರು ಮೂರ್ತಿ ಮೇರಿ ಆರಾಧಕರು, ಪ್ರೊಟೆಸ್ಟೆಂಟ್ ಮೂರ್ತಿ ಆರಾಧಕರಲ್ಲ + ಆರಾಧಕರಲ್ಲಿ ಶಿಲುಬೆ(+) ಬೆಳಕು. ಜಯದ ಸಂಕೇತ,

ಪ್ರಾರ್ಥನೆ ಮಾಡುವ ಡೆಸ್ಕ ಬಲಿಪೀಠ. ಬಿತ್ತಿಚಿತ್ರ, ಗಾಜಿನ ಚಿತ್ರಗಳು ಕ್ಯಾಥೋಲಿಕ ಚರ್ಚಗಳಲ್ಲಿ ಲಭ್ಯ. ಪ್ರೊಟೆಸ್ಟೆಂಟ್ ಚರ್ಚನಲ್ಲಿ ಸಿಗುವುದಿಲ್ಲ. ಗಾಥ್ಸ ಎಂಬ ಬುಡಕಟ್ಟು ಸಮುದಾಯ ಇದ್ದಿತ್ತು. ಇವರು ರೋಮ ಸಾಮ್ರಾಜ್ಯ ನಾಶಮಾಡಿದರು. Middle East Asiaದಲ್ಲಿ ಕ್ರೈಸ್ತಧರ್ಮ ಉದಯಿಸಿದ್ದು ಎಂಬುದು ದಾಖಲೆಗಳಿದೆ. ನಂತರದಲ್ಲಿ ಸಿಸಿರ, ಇಟಲಿ, ರೋಮ ಬದಲಾಗಿ ಕಾನಸ್ಟೆಂಟ್ ನಗರ ಸ್ಥಾಪನೆ. ಕ್ರಿಸ್ತಿಯನ್ ಸಂಸ್ಕೃತಿ ಬದಲಾಗಿ–ಕ್ರೈಸ್ತಮತ 'ಕಾನಸ್ಟೆಂಟ್' ರಾಜನಿಂದ ಆರಂಭ, ಕ್ರಿಶ್ಚಿಯನ್, ಇಸ್ಲಾಂ, ಯುಹೋಧಿಗಳು ಸಿಮಿಟೆಕ್ಸ್ ಭಾಷಿಕರು ಇವರು, 'ಏಕದೇವತಾ ಆರಾಧಕರು' ಆದರೆ ರೋಮದಲ್ಲಿ ಬಹುದೇವತಾರಾಧನೆ ಇದ್ದಿತ್ತು. ತ್ರಿಕೋನಾಕಾರದ ಮನೆಗಳನ್ನು ಗಾಥಿಕ ಜನರು ಕಟ್ಟುತ್ತಿದ್ದರು. ಜೂಲಿಯಸ್ ಸೀಸರ್ ವಸ್ತು ಸಂಗ್ರಹಾಲಯದ ಜನಕನೆಂದು ಕರೆಯುತ್ತಾರೆ. ಕ್ರೈಸ್ತ ಮತ ಹಂತ ಹಂತವಾಗಿ ಬೆಳೆದು ಕ್ರಿ.ಶ.೧೫೬೦ರಲ್ಲಿ ಮಾರ್ಟಿನ್ ಲೂಥರ್ ಸುಧಾರಣೆ ತಂದು ದೇವರ ಪೂಜಿಸಲು ಎಲ್ಲರು ಅರ್ಹರು ಇದು ಯಾರ ಸ್ವತ್ತಲ್ಲ. ಹೀಬ್ರೂ ಭಾಷೆಯ ಬೈಬಲ್ ಇಂಗ್ಲಿಷಿಗೆ(ಜರ್ಮನ) ಅನುವಾದಿಸಿದರು. 'ಜಾನ ಹ್ಯಾಂಡ್ಸ್' ಭಾರತಕ್ಕೆ ಮುದ್ರಣ ಯಂತ್ರ ತಂದನು. ವ್ಯಾಪಾರ ಮತ್ತು ರಾಜಕಾರಣ ಬ್ರಿಟಿಷ್ ಮೂಲ ಉದ್ದೇಶದಿಂದ ಭಾರತದಲ್ಲಿ ವಸಾಹತುಶಾಹಿ ಕ್ರೈಸ್ತ ಮಿಸನರಿಗಳು ಆರಂಭವಾದವು.

ಬ್ರಿಟಿಷರ ಶಾಸನಗಳು ಬಾಗಲಕೋಟೆ ಜಿಲ್ಲೆಯಲ್ಲಿ ಕಂಡು ಬಂದಿವೆ. ಅವುಗಳಲ್ಲಿ ಪ್ರಾಚೀನವಾದದ್ದು ಕ್ರಿ.ಶ.೧೮೦೨ರ ಶಾಸನ. ಇದರಲ್ಲಿ ಹುನಗುಂದದ ಅಗಸಿ ಬಾಗಿಲನ್ನು ಸೆಟನಕರನು ಕಲೆಕ್ಟರರನಾಗಿದ್ದಾಗ, ಪೋರ್ಜಟ್ ಎಂಬುವವನು ಅಸಿಸ್ಟೆಂಟ್ ಕಲೆಕ್ಟರ್ ಆಗಿದ್ದಾಗ ಕಟ್ಟಿಸಿದಂತೆ ಹೇಳಿದೆ. ಮುಂದೆ ಜಿಲ್ಲಾ ಕೇಂದ್ರವಾಗಿದ್ದ ಕಲಾದಗಿಯಲ್ಲಿ ಇವರಿಗೆ ಸೇರಿದ ಅನೇಕ ಶಾಸನಗಳು ದೊರೆತಿವೆ. ಅವು ಮುಖ್ಯವಾಗಿ ಸಮಾಧಿ ಶಾಸನಗಳು. ಇವು ಕಲಾದಗಿಯು ಜಿಲ್ಲಾ ಕೇಂದ್ರವಾಗಿದ್ದಾಗ ಅಲ್ಲಿದ್ದ ಸೈನಿಕ ಬೀಡಿನ ಸೈನಿಕ ಸಿಬ್ಬಂದಿಯವಾಗಿವೆ. ಕ್ರಿ.ಶ.೧೮೨೦ರಿಂದ ೧೮೪೮ರ ವರೆಗೆ ಇವು ಕಾಣಿಸಿಕೊಳ್ಳುತ್ತವೆ. ಇಲ್ಲಿ ಸತ್ತು ಸಮಾಧಿಯಾಗಿರು ವವರು ಯಾರೂ ಯುದ್ಧದಲ್ಲಿ ಭಾಗವಹಿಸಿ ಸತ್ತಂತೆ ತೋರುವುದಿಲ್ಲ. ರೋಗ ಬಂದೋ ಅಥವಾ ನೀರಿನಲ್ಲಿ ಮುಳುಗಿ ಸತ್ತಂತೆ ಉಲ್ಲೇಖಿಸಿವೆ. ಈಗಾಗಲೇ ಪ್ರಕಟಗೊಂಡ ಶಾಸನಗಳನ್ನು ಇಲ್ಲಿ ದಾಖಲಿಸಲಾಗಿದೆ.

೧

## ಕಲಾದಗಿ: ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ಕ್ರಿ.ಶ.೧೮೨೧ರ ಜೂನ್ ತಿಂಗಳು. ಈ ಸ್ಮಾರಕವನ್ನು ಲೆಫ್ಟಿನೆಂಟ್ ಮತ್ತು ಎಡಿಜೆ ಕುಂದರವುಡ್ ಸ್ಮರಣಾರ್ಥ ಗೌರವಕ್ಕಾಗಿ ಆತನ ಗೆಳೆಯರು ನಿಲ್ಲಿಸಿದರು.

THIS

MONUMENT

is erected by a Few Friends,

as a token of regard for

the

MEMORY

OF THEIR BROTHER OFFICER

LIEUNT: & ADJ D CUNDERWOOD

L II^ND C.

Who departed this year Kulladgee

12 June 1821 Year Aerai:22[೨೯]

೨

## ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ಕ್ರಿ.ಶ.೧೮೨೭ರ ಆಗಸ್ಟ್ ೧೦, ಕೆಪ್ಟನ್ ವೆಲ್ಲಾಂಡ್‌ನ ಮಗ ರಿಚರ್ಡ್ ಜಾನ್‌ನ ಸ್ಮರಣಾರ್ಥ ಈ ಶಾಸನ ನಿಲ್ಲಿಸಲಾಗಿದೆ.

SACRED

TO THE MEMORY

OF

RICHARD JOHN

THE INFANT SON OF

CAPT^N WELLAND 2^RD REG OR

W.L.I

WHO DEPARTED THIS LIFE

ON THE 10^TH DAY OF AUGUST 1827

AGED 15 MONTHS[೩೦]

೩

## ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ಕ್ರಿ.ಶ.೧೮೭೯ ಫೆಬ್ರವರಿ ೧೮. ಈ ಶಾಸನವನ್ನು ೩೫ ವರ್ಷ ವಯಸ್ಸಿನ ಬಾಂಬೆಯ ಸಿವಿಲ್ ಸೇವೆಯಲ್ಲಿದ್ದ ಸಹಾಯಕ ಕಲೆಕ್ಟರ್ ಮತ್ತು ನ್ಯಾಯಾಧೀಶ ಎಡಮಂಡ್ ಲಗಾರ್ಡೆ ಷರ್ಕೆಯ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

OF

CHERISHED MEMORY

EDMUND DE LAGARDE SHARKEY

BOMBAY CIVIL SERVICE

& ASSISTANT COLLECTOR

AND MAGISTRATE

ONE OF THE BEST OF SONS

WHO DEPARTED THIS LIFE

ON THE 18TH OF FEBY 1879

AGED 35 YEARS[೩೧]

೪

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ಕ್ರಿ.ಶ.೧೮೨೪ರ ಸೆಪ್ಟೆಂಬರ್ ೬ನೆಯ ತಾರೀಖು. ಈ ಶಾಸನವನ್ನು ಕೆಪ್ಟನ್ ಮೆರ್‌ಡಿತ್‌ನ ಮಗಳಾದ ಹ್ಯಾರಿಡ್ ಐ. ಜೆನ್ನೆಟ್ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

OF

HARRIED I JENNET

DAUGHTER OF

CAPTAIN MERDITH

4TH REGIMENT I.C

WHO DEPARTED THIS LIFE

ON THE

6TH SEPTEMBER 1824[೩೨]

೫

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ಕ್ರಿ.ಶ.ಜನವರಿ ೧೮೨೪. ೨೫ ವರ್ಷ ವಯಸ್ಸಿನ ಲೆಫ್ಟನೆಂಟ್ ಐ.ಜಿ.ಎಂ.ಅನ್ನೆಸ್ಲಿಯ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED
TO THE MEMORY
LIEUT I.G.M.ANNESLY
of the
2nd Batt$^{n}$-22$^{nd}$ reg. M.N.I.
WHO DEPARTED THIS LIFE
ON THE
DAY OF JANUARY 1824
AGED 25 YEARS[೩೩]

೬

**ಫಿರಂಗಿಯರ ಗೋರಿಗಳ ಮೇಲೆ**

ತ್ರುಟಿತ ಈ ಶಾಸನದ ಕಾಲ ಕ್ರಿ.ಶ.೧೯ನೆಯ ಶತಮಾನ. ಈ ಸ್ಮಾರಕವನ್ನು ಮೇ ೪ರಂದು ಜೀವನವನ್ನು ತೊರೆದ ಮೇಜರ್ ಜಾರ್ಜ್ ಹೇರ್ ಎಂಬುವವನ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED
TO THE MEMORY
OF
Major George Hare
of the
2nd Battn 19th Reg. of M.Ni.
Who Departed this life on the 4th day May 182(1)
Aged 38years
This tomb is erected by his
Brother Officers as a mark of the
Respect for the deceased[೩೪]

೭

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ಕ್ರಿ.ಶ.೩೦-೧೦-೧೮೨೮. ಈ ಸ್ಮಾರಕವನ್ನು ೨೬ ವರ್ಷ ವಯಸ್ಸಿನ ಲೆಫ್ಟನೆಂಟ್ ಥಾಮಸ್ ಸೆಟ್‌ರೆಟ್ ಎಂಬುವವನು ಕಲಾದಗಿಯಲ್ಲಿ ಜೀವನವನ್ನು ತೊರೆದ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

OF

LIEUTENANT THOMAS SETRETE

Of the 23rd Regiment on Wallajahbad

Light infantry who departed this life

at Kulladghei on the 30th day of October

A.D.1828

Aged 26

This Mone is erected by

BROTHER OFFICERS[೩೫]

## ೮

## ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ೧೯ನೆಯ ಶತಮಾನ. ಈ ಸ್ಮಾರಕವನ್ನು ಮೇರಿ ಅನ್ನೆ ಮತ್ತು ಹೆನ್ರಿ ರೈಸ್ ಕಿಂಗ್ ಎಂಬುವವನ ಪುತ್ರಿ ೧೩ ತಿಂಗಳ ಪೌಲೈನ್ ಕಿಂಗ್‌ನ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

OF

MARY PAULINA KING

DAUGHTER OF

MARY ANNE & HENRY RICE KIN[G]

of the

2nd BATTN 19TH REG. MNI

Who departed this life on the

day of October A.D.182.

AGED 13 MONTHS

in the midst of life we are in dead[೩೬]

೯

## ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ೧೮೫೧ ಆಗಸ್ಟ್ ೧೮ ೩೧ ವರ್ಷದ ಅಲೆಮಾಮ್ ಲೆಫ್ಟಿನೆಂಟ್ ಚ.ಕೆನ್‌ಸಿಂಗ್‌ಟನ್ ಮತ್ತು ೩೦ ವರ್ಷದ ಲೆಫ್ಟಿನೆಂಟ್ ಅಲೆಕ್ಸ್ ಸ್ಟೆನಸ್ ಸ್ಮರಣಾರ್ಥ ಕಟ್ಟಿಸಲಾಗಿದೆ.

SACRED

TO THE MEMORY

OF

LIEUT. CH.KENSINGTON

Aged 31

And

LIEUT. TH.ALEX STANNUS

Aged 30

Of the

VI Regiment M.Ṇ.I

WHO WERE DROWNED BY THE... OF A BOAT

IN THE NULAH EAST OF THE CANTONMENT

1ST AUGUST 1851

THIS MONUMENT IS ERECTED

BY THEIR BROTHER OFFICERS

AS.O.EN OF THEIR SINCERE REGARD[೩೭]

೧೦

## ಫಿರಂಗಿಯರ ಗೋರಿಗಳ ಮೇಲೆ

ಈ ಶಾನದ ಕಾಲ ಕ್ರಿ.ಶ.೯-೦೬-೧೮೨೦. ಈ ಸ್ಮಾರಕಶಿಲೆಯನ್ನು ಕಲಾದಗಿ ಕ್ಯಾಂಪಿನಲ್ಲಿ ಸತ್ತ ೩೮ ವರ್ಷದ ಸ್ಕಾಟ್‌ಲೆಂಡಿನ ಸ್ಲೆಂಟಾನ್‌ನ ಅಲೆಕ್ಸ್ ಸ್ಟೆವಾರ್ಟನ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

ALEX STEWART

of Slenton in Scotland

CAPTAIN IN THE 3RD REG

Madras Establishment

DIED 9TH JUNE A.D.1820

IN CAMP AT KULADGEE

AGED38[೩೮]

೧೧

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ೧೯ನೆಯ ಶತಮಾನ(೧೮೨...). ಈ ಶಾಸನವನ್ನು ಲೆಫ್ಟಿನೆಂಟ್ ಹ್ಯೂಗ್ ವಾರನ್‌ನ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

OF

LIEUT. HUGH WARRAND

Of the

2nd Battn 22nd Reg.. MNI

WHO DEPARTED THIS LIFE

On the

DAY OF MAY 182...

Aged 21 years[೩೯]

೧೨

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ಕ್ರಿ.ಶ.೧೧-೦೭-೧೮೨೨. ಲೆಫ್ಟಿನೆಂಟ್ ಹೆನ್ರಿ ರೈಸ್ ಕಿಂಗ್‌ನ ಪತ್ನಿ ೨೨ ವರ್ಷದ ಮೇರಿ ಆನ್ನ್ ಕಿಂಗ್ ಸ್ಮರಣಾರ್ಥ ಈ ಶಾಸನವನ್ನು ನಿಲ್ಲಿಸಲಾಗಿದೆ.

SACRED

TO THE MEMORY

OF

MARY ANN KING

WIFE OF

L. HENRY RICE KING

DIED JULY 11 A.D.

1822 AGED XXII

Go thy way and forget not theyself

Remember that to dry that his't life in it.

however tomorrow perhaps that may be a breath(?)

..less..corpss[೪೦]

೧೩

**ಫಿರಂಗಿಯರ ಗೋರಿಗಳ ಮೇಲೆ**

ಈ ಶಾಸನದ ಕಾಲ ಕ್ರಿ.ಶ.೧೮೪೮, ಮಾರ್ಚ್ ತಿಂಗಳು. ಈ ಶಾಸನವನ್ನು ಎನ್‌ಸಿಗ್ನೆಫ್ ರಾಕ್‌ಶಂಕನ ಸ್ಮರಣಾರ್ಥವಾಗಿ ಆತನ ಸಹೋದ್ಯೋಗಿ ಅಧಿಕಾರಿಗಳು ಹಾಕಿಸಿರುತ್ತಾರೆ.

SACRED

To The

MEMORY

Of

ENSIGNE. F.WCROCK SHANK

6TH REG. MNI

WHO DIED.. OF MARCH 1848

AGED 21 YEARS

ERECTED BY HIS BROTHER

OFFICERS AS A MARK OF

ESTEEM[೪೧]

೧೪

## ಫಿರಂಗಿಯರ ಗೋರಿಗಳ ಮೇಲೆ

ಈ ಶಾಸನದ ಕಾಲ ಏಪ್ರಿಲ್ ೧೮, ೧೮೨೩. ಇದನ್ನು ೪೩ ವರ್ಷದ ೨ನೇ ಬೆಟಾಲಿಯನ್ ಮೇಜರ್ ಜಾನ್ ಡೈಮೋಕನ ಸ್ಮರಣಾರ್ಥ ನಿಲ್ಲಿಸಲಾಗಿದೆ.

SACRED

TO THE MEMORY

of

MAJOR JOHN DYMOCK

Of the

2nd BATT$^{n}$. 22nd Reg. M.N.I

WHO DEPARTED THIS LIFE

ON THE

18th DAY OF APRIL 1823

Aged 43 years[೪೨]

೧೫

## ಕಲಾದಗಿ–ಫಿರಂಗಿಯರ ಗೋರಿಗಳ ಸ್ಥಳ

## ಅತಿಥಿಗೃಹದ ಸಮೀಪ, ದಕ್ಷಿಣ ಭಾಗದಲ್ಲಿ

ಈ ಶಾಸನದ ಕಾಲ ೧೮೪೪ ಡಿಸೆಂಬರ್. ಈ ಶಾಸನವನ್ನು ಜೆ.ಎಫ್.ಡೌಗ್ಲಾಸ್ ಮತ್ತು ಎನ್‌ಸೈನ್ ಡಬ್ಲಿಯೂ.ಎಸ್.ಹೊರಕ್ಸರ ಸ್ಮರಣಾರ್ಥ ನಿಲ್ಲಿಸಲಾಗಿದೆ. ಇವರು ಕಾಲರಾ ರೋಗದಿಂದ ತೀರಿಕೊಂಡಂತೆ ಹೇಳಿದೆ.

.......

IN MEMORY

OF

LIEUTENANT

J.F.DOUGLAS

AND OF

ENSIGN

W.S.HORROCKS

WHO DIED OF CHOLERA

IN THE MONTH OF

DECEMBER

1844೪೩

೧೬

## ಅಲ್ಲೇ ಇನ್ನೊಂದು

ಶಾಸನದಲ್ಲಿ ಕಾಲಸೂಚಕ ಭಾಗದಲ್ಲಿನ ಇಸವಿ ಹಾಳಾಗಿದೆ. ಕಲಾದಗಿಯಲ್ಲಿ ಮಡಿದ ಲೆಫ್ಟಿನೆಂಟ್ ವಿಲಿಯಂ ಬೈಲಿಗ್ರಾಪಿಟ್ಟಿ ಎಂಬುವವನ ಜ್ಞಾಪಕಾರ್ಥ ಈ ಕಲ್ಲನ್ನು ನಿಲ್ಲಿಸಿದಂತೆ ಹೇಳಿದೆ. ಕಲ್ಲನ್ನು ನಿಲ್ಲಿಸಿದವರು ಮದ್ರಾಸ್ ನೇಟೀವ್ ಇನ್‌ಫಂಟ್ರಿ ರೆಜಿಮೆಂಟಿನವರು.

ERECTED

By the

officers of the Regiment Madras

Native Infantary

As a mark [R]respet

in Momery

of

Lieut.. ant William Bayly Graffitti

Who died at Kulladghee

On the 28 agust

.....AE೪೪

೧೭

## ಅದೇ ಊರಿನ ಅಗಸಿ ಸಮೀಪದಲ್ಲಿ

ಈ ಶಾಸನದ ಕಾಲ ಕ್ರಿ.ಶ.೧೮೬೦. ಮರಾಠಿ ಭಾಷೆಯಲ್ಲಿದೆ. ಕಂಪನಿ ಸರ್ಕಾರದ ಶ್ರೀಪತ ವಿಠಲ ಮಾಮಲೇದಾರ, ಇವರ ಕಾಲದಲ್ಲಿ ಬಾಗಲಕೋಟೆ ಠಂಕಸಾಲೆಯ ಕಾರಕೂನನಾದ ಕೃಷ್ಣಾಜಿ ತಂಮಾಜಿ ಬಾಗಲಕೋಟೆಯ ಈ ಅಗಸಿಯನ್ನು ಕಟ್ಟಿಸಿದರು.

೧. ಕುಂ(ಕ)ಪಣಿ ಸರ್ಕಾರ ಚೇ ಶ್ರೀಪತ ವಿಠಲ ಮಾಮಾ

೨. ಲೇದರ ಯಾಂಚೀ ಕಾಲಕಿರ್ಧಿತ ಕೃಷ್ಣಾಜಿ ತಂಮಾ

೩. ಜಿ ಟಂಕಸಾಲ ಕಾರಕೂನ ಬಾಗಲಕೋ

೪. ಟ ಯಾಣಿ ಬಾಂದಿವಿಲೆ ಶಕ ೧೭೭೨

೫. ಸಾಧಾರಣ ಸಂವತ್ಸ ಸಂನ(೧೮೬೦)[೪೫]

**ಕಲಾದಗಿ: ಅಪ್ರಕಟಿತ ಶಾಸನಗಳು**

ಕಲಾದಗಿ ಗ್ರಾಮದ ಹೊರವಲಯದಲ್ಲಿರುವ ಬ್ರಿಟಿಷರ ಸಮಾಧಿ ಸ್ಮಾರಕಗಳಲ್ಲಿರುವ ಶಾಸನಗಳು ಈಗಾಗಲೇ ದಾಖಲಾಗಿದ್ದು, ಪ್ರಕಟಣೆಗೊಂಡಿವೆ. ಆದರೆ ಈಗಿನ ಕಲಾದಗಿ ಅಂಚೆ ಕಚೇರಿ ಹತ್ತಿರ ಚರಂಡಿ ಮಾರ್ಗಕ್ಕೆ ಹೊಂದಿರುವ ಚಿಕ್ಕ ಸ್ಥಳದಲ್ಲಿ ಬ್ರಿಟಿಷರ ಗೊರಿಗಳು ಮತ್ತು ಶಾಸನಗಳನ್ನು ಗುರುತಿಸಲಾಗಿದೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಈ ಪ್ರದೇಶವು ಕಾಡು ಮೇಡಿನಿಂದ ಆವೃತ್ತವಾಗಿತ್ತು. ಇಲ್ಲಿ ಬ್ರಿಟಿಷರು ಬಂಗಲೆ, ಆಸ್ಪತ್ರೆ, ಅಂಚೆ ಕಚೇರಿ, ಶಾಲೆ ನಿರ್ಮಿಸಿದ್ದರು. ಈ ಕಟ್ಟಡಗಳಿಗೆ ಸ್ವಲ್ಪ ದೂರದಲ್ಲಿ ಮತ್ತೊಂದು ಬ್ರಿಟಿಷರ ಸಮಾಧಿ(ಗೋರಿ)ಗಳಿರುವ ಸ್ಥಳವಿದೆ. ಬ್ರಿಟಿಷರ ಎರಡು ಪಂಗಡ (ಕೆಥೋಲಿಕ, ಪ್ರೋಟೆಸ್ಟೆಂಟ್)ಗಳ ಸಮಾಧಿಗಳಿರುವುದನ್ನು ಗುರುತಿಸಲಾಗಿದೆ.

**ಶಾಸನ: ೧**

TO

THE ENBEARED MEMORY OF

LUFZA MARTA CARVALHO

AXAH TO THE CHILD B...

EDERICK X KATHLE...

ಎಂದು ಮಾತ್ರ ಅಕ್ಷರಗಳು ಸ್ವಸ್ಪಷ್ಟವಾಗಿವೆ. ಇನ್ನುಳಿದ ಶಾಸನದ ಭಾಗ ನೆಲದಲ್ಲಿ ಹೂತು ಹೋಗಿದೆ. ಶಾಸನದ ಮೇಲ್ಭಾಗದಲ್ಲಿ ಏಸುವಿನ ಶಿಲುಬೆ ಇದ್ದು, ಈ ಶಾಸನವು ಸಮಾಧಿ ಶಾಸನವೆಂದು ಗುರುತಿಸಬಹುದು. ಬ್ರಿಟಿಷ ದಂಪತಿಗಳು ತಮ್ಮ ಮಗುವಿನ ನೆನಪಿಗಾಗಿ ಈ ಸಮಾಧಿಯನ್ನು ನಿರ್ಮಿಸಿರಬೇಕು. ನೆಲ ಅಗೆದು ಸಂಪೂರ್ಣ ಶಾಸನ ಗೋಚರಿಸಿದರೆ ಮಾತ್ರ ಇನ್ನೂ ಹೆಚ್ಚಿನ ಮಾಹಿತಿಯು ಹೊರಬರಲು ಸಾಧ್ಯವಾಗುತ್ತದೆ.

**ಶಾಸನ: ೨**

SAGRED

TO THE MEMORN....

AGAN2 OF GOA....HO

R.KULLAD GHEE...WHO...

EUT HISE HPE ON THE

MAY 1810 AGED 40 YEAR...

EPITAFIO

EEPICATED A MEMORIA

DOMICOSXA VIERDE

ANOANATURAE DE

...VIIEA EMBARDECU

...GO A MERCANTEMKUL

DCHEE DORE...

ಈ ಶಾಸನವು ಸಹ ಸಮಾಧಿ ಶಾಸನವಾಗಿದ್ದು ೪೦ ವರ್ಷದವರು ಮಡಿದಾಗ ಅವರ ನೆನಪಿಗಾಗಿ ಈ ಶಾಸನ ನಿಲ್ಲಿಸಲಾಗಿದ್ದು, ಶಾಸನ ತ್ರುಟಿತಗೊಂಡಿರುವುದರಿಂದ ದಿನಾಂಕ, ಹೆಸರು, ಅಸ್ಪಷ್ಟವಾಗಿದೆ. ಶಾಸನದ ಮೇಲು ಭಾಗದಲ್ಲಿ ಮಧ್ಯದಲ್ಲಿ ಏಸುವಿನ ಶಿಲುಬೆ, ಬಲಗಡೆ ನಕ್ಷತ್ರಕಾರದ ಚಿತ್ರವಿದೆ.

**ಶಾಸನ: ೩**

ಈ ಶಾಸನವು ತಮಿಳು ಅಕ್ಷರದಿಂದ ರಚಿಸಲಾಗಿದೆ. ಇದರಲ್ಲಿ ೧೮೨೦ ಎಂದು ಸ್ಪಷ್ಟವಾದ ಆಂಗ್ಲ ಅಕ್ಷರಗಳಿವೆ. ಆದರೂ ಸಹ ಇದು ಸಹ ಬ್ರಿಟಿಷ ಅಧಿಕಾರಿಗಳ ಸಮಾಧಿ ಎಂದು ಗುರುತಿಸಬಹುದು.

ಈ ಸಮಾಧಿಯ ಸಮುಚ್ಚಯದಲ್ಲಿ ಕಾರಂಥಿಯನ್ ಶೈಲಿಯ ದುಂಡಾದ ಕಂಬದಾ ಕಾರದಲ್ಲಿ ಸಮಾಧಿಯು ನಿರ್ಮಾಣಗೊಂಡಿದೆ. ಈ ಸ್ಥಳದಲ್ಲಿರುವ ಎಲ್ಲಾ ಸಮಾಧಿ ಸ್ಮಾರಕಗಳು ದಿನನಿತ್ಯ ಹರಿಯುವ ಚರಂಡಿ ನೀರಿನಿಂದ ಅವಸಾನದತ್ತ ಸಾಗಿವೆ. ಹಂದಿ, ಬೀದಿ ನಾಯಿ, ಮಲಿನ ತ್ಯಾಜ್ಯ ತಂದು ಎಸೆಯುವ ಸ್ಥಳ ಇದಾಗಿದೆ. ಇದರ ರಕ್ಷಣೆ ಮಾಡಿ ಶಾಸನ ಪಡಿಯಚ್ಚು ತೆಗೆದುಕೊಂಡು ಅಧ್ಯಯನಿಸಿದರೆ ಇನ್ನು ಹೆಚ್ಚಿನ ವಿಚಾರಗಳು ಹೊರಬರಲು ಸಾಧ್ಯವಾಗುತ್ತದೆ. ಮದ್ರಾಸ್ ಪ್ರಾಂತ್ಯಕ್ಕೂ ಕಲಾದಗಿಗೂ ಮತ್ತು ಬಾಂಬೆ ಪ್ರಾಂತ್ಯಕ್ಕೂ ಕಲಾದಗಿ ಕಲೆಕ್ಟರೇಟ್ ಪ್ರದೇಶಕ್ಕೂ ಆಡಳಿತಾತ್ಮಕ ಅವಿನಾಭಾವ ಸಂಬಂಧವಿದ್ದುದು ಕಂಡುಬರುತ್ತದೆ.

ಮದ್ರಾಸನಿಂದ ಬೋಜಗಾರ ಸಮುದಾಯ ಬ್ರಿಟಿಷರ ಆಜ್ಞೆ ಮೇರೆಗೆ ಇಲ್ಲಿ ಬಂದು ನೆಲೆಸಿದರಂತೆ. ಬೋಜ ಅಂದರೆ ಮಧ್ಯ, ಭೋಜಗಾರ ಎಂದರೆ ಮದ್ಯ ತಯಾರಿಸುವವರು ಎಂದರ್ಥ. ಕಲಾದಗಿಯಲ್ಲಿ ಬೆಳೆಯುವ ಸಪೋಟ, ದ್ರಾಕ್ಷಿ, ಬಾಳೇಹಣ್ಣು, ದಾಳಿಂಬೆ ಇತ್ಯಾದಿ ಹಣ್ಣುಗಳನ್ನು ಉಪಯೋಗಿಸಿ ಬೋಜಗಾರರು ಮದ್ಯ(ಸಾರಾಯಿ) ತಯಾರಿಸಿ ಬ್ರಿಟಿಷ ಅಧಿಕಾರಿಗಳಿಗೆ ಮತ್ತು ಸೈನಿಕರಿಗೆ ಒದಗಿಸುತ್ತಿದ್ದರು. ಬಂಗಲೆ ಹತ್ತಿರ ಹರಿಣಸಿಕಾರಿ ಸಮುದಾಯ ಹೆಚ್ಚಾಗಿದ್ದು, ಇವರು ತಮ್ಮ ದುರ್ಗಾದೇವಿ ದರ್ಶನ ಮಾಡಿ ಬ್ರಿಟಿಷರೊಂದಿಗೆ ಜೊತೆಗೂಡಿ ಯುದ್ಧಕ್ಕೆ ಹೋಗುತ್ತಿದ್ದರು. ಹಾಗಾಗಿ ಈ ದುರ್ಗಾದೇವಿಗೆ ಇವತ್ತಿಗೂ ಸಹ ದಂಡಿನ ದುರ್ಗಮ್ಮ ಎಂದು ಸ್ಥಳೀಯರು ಕರೆಯುತ್ತಾರೆ. ನವಲಗುಂದದ ಶ್ರೀ ನಾಗಲಿಂಗ ಮಹಾಸ್ವಾಮಿಗಳು ಬಂದು ಬ್ರಿಟಿಷರು ಇನ್ನೂ ದೇಶ ಖಾಲಿ ಮಡುತ್ತಾರ ಎಂದು ಭವಿಷ್ಯ ನುಡಿದಿದ್ದರಂತೆ. ನಂತರದ ವರ್ಷದಲ್ಲಿ ಅಂದರೆ ೧೯೪೭ರಲ್ಲಿ ಭಾರತ ಬ್ರಿಟಿಷರಿಂದ ಮುಕ್ತವಾಗಿದ್ದು ಚರಿತ್ರೆಯಲ್ಲಿ ದಾಖಲಾಗಿರುವುದು ಗಮನಾರ್ಹವಾಗಿದೆ.

ಬ್ರಿಟಿಷರ ಕೈಕೆಳಗೆ ಅಂದು ಹಲವಾರು ಸಮುದಾಯಗಳು ಕೆಲಸಕಾರ್ಯಗಳನ್ನು ಮಾಡಿವೆ. ಬೋಜಗಾರರು ಕಾಲಕ್ರಮೇಣ ಮದ್ಯ ತಯಾರಿಕೆ ಬಿಟ್ಟು, ಸುಣ್ಣ ತಯಾರಿಕೆಯ ಕೆಲಸದಲ್ಲಿ ತೊಡಗಿದರು. ಅಂದು ಬ್ರಿಟಿಷರು ಕಟ್ಟಡಗಳನ್ನು ನಿರ್ಮಿಸಲು ಅವಶ್ಯಕವಾಗಿ ಸುಣ್ಣ, ಗಾರೆಗಚ್ಚು ಬೇಕಾಗಿರುತ್ತಿತ್ತು. ಕಲಾದಗಿಯಲ್ಲಿ ಬ್ರಿಟಿಷರು ನಿರ್ಮಿಸಿದ ಅನೇಕ ಕಟ್ಟಡಗಳು ನೆಲಸಮಗೊಂಡಿವೆ. ಇನ್ನೂ ಅಳಿದುಳಿದಂತಹ ಕೆಲವು ಕಟ್ಟಡಗಳನ್ನಾದರೂ ಸಂರಕ್ಷಿಸಬೇಕಾದ ಅನಿವಾರ್ಯತೆವಿದೆ ಎಂದು ಹೇಳಬಹುದು.

## ೪.೭. ಜಮಖಂಡಿ ಮತ್ತು ಮುಧೋಳ ಸಂಸ್ಥಾನಿಕರ ಕಟ್ಟಡಗಳು

### ಜಮಖಂಡಿ ಪಟವರ್ಧನ ಸಂಸ್ಥಾನಿಕರ ಕಾಲದ ಕಟ್ಟಡಗಳು

#### ಶೈಕ್ಷಣಿಕ ಕಟ್ಟಡಗಳು

**ಪಿ.ಬಿ.ಹೈಸ್ಕೂಲ್:** ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರು ಶಿಕ್ಷಣ ಪ್ರೇಮಿಗಳಾಗಿದ್ದು ತಮ್ಮ ಪ್ರಜೆಗಳಿಗೆ ಇಂಗ್ಲಿಷ್ ಶಿಕ್ಷಣವನ್ನು ಕೊಡಿಸುವುದಕ್ಕಾಗಿ ಕ್ರಿ.ಶ.೧೮೮೮ರಲ್ಲಿ ತಮ್ಮ ಮುತ್ತಜ್ಜರ ಹೆಸರಿನಿಂದ ಪರಸುರಾಮ ಭಾವು ಹೈಸ್ಕೂಲನ್ನು ಸ್ಥಾಪಿಸಿದರು. ಇದಕ್ಕೆ ೧,೨೦,೦೦೦.೦೦ ರೂಪಾಯಿ ವೆಚ್ಚ ಮಾಡಿ ಅತ್ಯಂತ ಸುಂದರ ಹಾಗೂ ಭವ್ಯವಾದ ಕಟ್ಟಡವನನು ಕಟ್ಟಿಸಿದರೂ, ಅಂದು ಸ್ಥಾಪಿಸಿದ ಈ ವಿದ್ಯಾ ಮಂದಿರವು ಕ್ರಿ.ಶ.೧೯೮೮ರಲ್ಲಿ ತನ್ನ ಶತ ಸಂವತ್ಸರವನ್ನು ಆಚರಿಸಿತು. ಈ ಹೈಸ್ಕೂಲಿನ ಕಟ್ಟಡವು ಪ್ರಾರಂಭವಾದದ್ದು ಕ್ರಿ.ಶ.೧೮೯೦ರಲ್ಲಿ, ಕಟ್ಟಡ ಪೂರ್ತಿಯಾದದ್ದು ೧೮೯೮ರಲ್ಲಿ[೪೬] ಎಂದು ಗುರುತಿಸಲಾಗಿದೆ.

**ಶ್ರೀಮತಿ ರಮಾಬಾಯಿ ವಾಚನಾಲಯ:** ಸಂಸ್ಥಾನಿಕರಾದ ಕ್ಯಾಪ್ಟನ್ ಸರ್ ಪರಶುರಾಮ ಭಾವು ಸಾಹೇಬರು ಶಿಕ್ಷಣ ಪ್ರೇಮಿಗಳಾಗಿದ್ದು, ತಮ್ಮ ಆಳ್ವಿಕೆಯಲ್ಲಿ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ಕೈಗೊಂಡು ಪ್ರಜೆಗಳಿಗೆ ಓದಲು ಅನುಕೂಲ ಮಾಡಿಕೊಡಲು ತಮ್ಮ ಪ್ರಥಮ ಮಹಾರಾಣಿಯವರಾದ ಶ್ರೀಮಂತ ಸೌಭಾಗ್ಯವತಿ ರಮಾಬಾಯಿ ಸಾಹೇಬರ ಸ್ಮರಣಾರ್ಥವಾಗಿ ದಿನಾಂಕ ೨೫-೦೬-೧೯೦೫ರಲ್ಲಿ ಒಂದು ಗ್ರಂಥಾಲಯವನ್ನು ಸ್ಥಾಪಿಸಿದರು. ಇದಕ್ಕಿಂತ ಪೂರ್ವದಲ್ಲಿ ತಮ್ಮ ಮನೆಯಲ್ಲಿಯೇ "ವಿದ್ಯಾಭಿವೃದ್ಧಿ ವರ್ಧಕ ಮಂಡಳಿ"ಯ ಆಶ್ರಯದಲ್ಲಿ ಈ ಗ್ರಂಥಾಲಯವಿತ್ತು. ಇದಲ್ಲದೆ "ವಾಚನ ಮಂದಿರ" ಎಂಬ ಹೆಸರಿನ ಚಿಕ್ಕ ಗ್ರಂಥಾಲಯವು ಶಂಕರ ಬಾಲಚಂದ್ರ ಎಂಬ ಕಾರಭಾರಿಯ ಪ್ರಯತ್ನದಿಂದ ಸ್ಥಾಪಿಸಲ್ಪಟ್ಟಿತು. ಮುಂದೆ ಸರ್ ಪರಶುರಾಮ ಭಾವು ಸಾಹೇಬರು ಈ ಎರಡೂ ಗ್ರಂಥಾಲಯಗಳನ್ನು ಒಂದುಗೂಡಿಸಿ, ದೊಡ್ಡ ವಾಚಾನಾಲಯವನ್ನಾಗಿ ಮಾರ್ಪಡಿಸಿದರು. ಕ್ರಿ.ಶ.೧೯೨೩ರಲ್ಲಿ ಇದೇ ವಾಚನಾಲಯವು ಪ್ರಥಮ ದರ್ಜೆಯ ಗ್ರಂಥಾಲಯವೆಂದು ಮಾನ್ಯತೆಯನ್ನು ಪಡೆಯಿತು. ಇದರ ಅಭಿವೃದ್ಧಿಗಾಗಿ ಮುಂದೆ ಆಳಿದ ಪಟವರ್ಧನ ಅರಸರೆಲ್ಲರೂ ಉದಾರ ಧನ ಸಹಾಯ ಮಾಡಿದರು. ಈ ಗ್ರಂಥಾಲಯವು ಅನೇಕ ಮಹತ್ವದ ಇಂಗ್ಲೀಷ್, ಹಿಂದಿ, ಮರಾಠಿ, ಸಂಸ್ಕೃತ, ಕನ್ನಡ, ಉರ್ದು ಭಾಷೆಗಳ ಗ್ರಂಥಗಳನ್ನು ಹೊಂದಿದೆ. ಮುಂದೆ ಕ್ರಿ.ಶ.೧೯೪೯ರಲ್ಲಿ ಈ ವಾಚನಾಲಯವು ಧಾರವಾಡದ ಕರ್ನಾಟಕ ಪ್ರಾದೇಶಿಕ ಗ್ರಂಥಾಲಯಕ್ಕೆ ವರ್ಗಾಯಿಸಲಾಯಿತು.[೪೭] ಅಂದಿನಿಂದ ಇದು ಸಾರ್ವಜನಿಕ ಗ್ರಂಥಾಲಯವಾಗಿ ಕಾರ್ಯನಿರ್ವಹಿಸುತ್ತಾ ಬಂದಿದೆ. ಈ ಗ್ರಂಥಾಲಯಕ್ಕೆ ಯೋಗ್ಯವಾದ ಸುಂದರ ಕಟ್ಟಡವನ್ನು ಕ್ರಿ.ಶ.೧೯೦೮ರಲ್ಲಿ ಪಿ.ಬಿ.ಹೈಸ್ಕೂಲಿನ ಎದುರಗಡೆ ಕಟ್ಟಿಸಲಾಗಿದೆ. ಅದೇ ಇಂದಿನ ರಮಾಬಾಯಿ ವಾಚನಾಲಯವಾಗಿದೆ.

**ಗವ್ವರ್ನರ್ಸ ಬಂಗ್ಲೊ(ಪೋಲೊ ಪ್ಯಾಲೇಸ್):** ಸಂಸ್ಥಾನಿಕರಾದ ಸರ್ ಪರಶುರಾಮ ಭಾವು ಸಾಹೇಬರು ತಮ್ಮ ಕಾಲದಲ್ಲಿ ಅನೇಕ ಶೈಕ್ಷಣಿಕ ಸುಧಾರಣೆಗಳನ್ನು ಮಾಡಿದರು. ಇವರು ಯುರೋಪಿಯನ್ ರಾಷ್ಟ್ರಗಳಾದ ಇಂಗ್ಲೆಂಡ್, ಫ್ರಾನ್ಸ್, ಇಟಲಿ ಮೊದಲಾದ ದೇಶಗಳಿಗೆ ಸಂದರ್ಶನವನ್ನಿತ್ತು ಅಲ್ಲಿಯ ಪ್ರಗತಿಪರವಾದ ಸುಧಾರಣೆಗಳನ್ನು ಕಂಡು ಪ್ರಭಾವಿತರಾಗಿ ಅದೇ ಮಾದರಿಯ ಸುಧಾರಣೆಗಳನ್ನು ತಮ್ಮ ರಾಜ್ಯದಲ್ಲಿ ಕೈಕೊಂಡರು. ಇವರು ತಮ್ಮ ರಾಜ್ಯದಲ್ಲಿ ಯುರೋಪಿಯನ್ನ ಮಾದರಿಯ ಅನೇಕ ಸುಂದರವಾದ ಕಟ್ಟಡಗಳನ್ನು ಕಟ್ಟಿಸಿ ನಗರದ ಸೌಂದರ್ಯವನನು ಹೆಚ್ಚಿಸಿದರು. ಅಂದು ಇವರು ಕಟ್ಟಿಸಿದ ಅನೇಕ ಕಟ್ಟಡಗಳು ಇಂದಿಗೂ ಸಹ ಸುಸ್ಥಿತಿಯಲ್ಲಿದ್ದದ್ದನ್ನು ಕಾಣಬಹುದು. ಅಂತಹ ಸುಂದರ ಮುತ್ತು ಸುಭದ್ರವಾದ ಕಟ್ಟಡಗಳಲ್ಲಿ ಇಂದಿನ ಬಿ.ಎಲ್.ಡಿ ಶಿಕ್ಷಣ ಸಂಸ್ಥೆಯ ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯದ ಕಟ್ಟಡವು ಒಂದಾಗಿದೆ. ಇದನ್ನು ಕ್ರಿ.ಶ.೧೯೦೬ರಲ್ಲಿ ಕಟ್ಟಿಸಲಾಗಿದೆ. ಇದಕ್ಕೆ ಗವ್ವರ್ನರ್ಸ್ ಬಂಗ್ಲೋ ಅಥವಾ ಪೋಲೊ ಪ್ಯಾಲೇಸ್ ಎಂದು ಕರೆಯುತ್ತಾರೆ.

ಕಾರಣ ಸಂಸ್ಥಾನಿಕರ ಕಾಲದಲ್ಲಿ ಮುಂಬೈ ಪ್ರಾಂತದ ಗವ್ಹರ್ನರರು ಅವರ ಸಿಬ್ಬಂದಿ ವರ್ಗ ಅಲ್ಲದೆ ವಿವಿಧ ಆಡಳಿತಾಧಿಕಾರಿಗಳು ರಾಜ್ಯಕ್ಕೆ ಸಂದರ್ಶನವನ್ನಿಯತ್ತಿದ್ದರು. ಅವರ ವಾಸ್ತವ್ಯಕ್ಕಾಗಿ ನಿರ್ಮಿಸಿದ ಭವ್ಯ ಹಾಗೂ ಸುಂದರವಾದ ಕಟ್ಟಡವಿದು. ಪರಶುರಾಮ ಭಾವು ಸಾಹೇಬರ ಆಳ್ವಿಕೆಯಲ್ಲಿ ಕ್ರಿ.ಶ.೧೯೧೭ರಲ್ಲಿ ಮುಂಬೈ ಪ್ರಾಂತದ ಗವ್ಹರ್ನರಾದ ಲಾರ್ಡ್ ವಿಲಿಂಗ್ಟನ್ನರು ಮತ್ತು ಕ್ರಿ.ಶ.೧೯೨೨ರಲ್ಲಿ ಲಾರ್ಡ್ ಲಾಯಿಡ್‌ರವರು ಜಮಖಂಡಿ ಸಂಸ್ತಾನಕ್ಕೆ ಭೇಟಿ ನೀಡಿದರು. ಅವರು ಇಲ್ಲಿ ಕೆಲವು ದಿವಸಗಳವರೆಗೆ ವಾಸ್ತವ್ಯಮಾಡಿ ಇಲ್ಲಿಯ ವ್ಯವಸ್ಥಿತವಾದ ಆಡಳಿತವನ್ನು ಪ್ರಗತಿಪರವಾದ ಸುಧಾರಣೆಗಳನ್ನು ಮತ್ತು ಸಂಸ್ಥಾನದ ಸಾಂಪತ್ತಿಕ ಸ್ಥಿತಿಯನ್ನು ಪ್ರತ್ಯಕ್ಷ ಕಂಡು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.[೪೮]

ಕ್ರಿ.ಶ.೧೯೪೮ರಲ್ಲಿ ಜಮಖಂಡಿ ಸಂಸ್ಥಾನವು ಅಖಿಲ ಭಾರತದ ಒಕ್ಕೂಟದಲ್ಲಿ ವಿಲೀನ ವಾಯಿತು. ಮುಂದೆ ಜೂನ್ ತಿಂಗಳ ೧೯೪೯ರಲ್ಲಿ ಇದೇ ಕಟ್ಟಡದಲ್ಲಿ(ಗವ್ಹರ್ನರ್ಸ್ ಬಂಗ್ಲೋ) ಸರಕಾರಿ ಪ್ರಾಥಮಿಕ ಶಿಕ್ಷಕರ ತರಬೇತಿ ಕಾಲೇಜನ್ನು ಪ್ರಾರಂಭಿಸಲಾಯಿತು. ಆಗ ಈ ಕಟ್ಟಡದ ಕೋಣೆಗಳಲ್ಲಿ ವಿದ್ಯಾರ್ಥಿಗಳಿಗೆ ವಿವಿಧ ವಿಷಯಗಳನ್ನು ಬೋಧಿಸಿದ್ದರು. ಮುಂದೆ ಕ್ರಿ.ಶ.೧೯೬೨ರಲ್ಲಿ ಈ ಟ್ರೈನಿಂಗ್ ಕಾಲೇಜನ್ನು ಹುನಗುಂದಕ್ಕೆ ವರ್ಗಾಯಿಸಲಾಯಿತು. ನಂತರ ಕ್ರಿ.ಶ.೧೯೬೩ರ ಜೂನ್ ತಿಂಗಳಲ್ಲಿ ಬಿಜಾಪುರದ ಬಿ.ಎಲ್.ಡಿ. ಶಿಕ್ಷಣ ಸಂಸ್ಥೆಯವರು ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯವನ್ನು ಇದೇ ಕಟ್ಟಡದಲ್ಲಿ ಪ್ರಾರಂಭಿಸಿದರು. ಇಂದು ಈ ಭವ್ಯ ಕಟ್ಟಡದಲ್ಲಿ ಜೀವಶಾಸ್ತ್ರ, ಭೌತಶಾಸ್ತ್ರ ಸಂಖ್ಯಾಶಾಸ್ತ್ರ ಮೊದಲಾದ ವಿಜ್ಞಾನ ವಿಷಯಗಳ ಪ್ರಯೋಗಾಲಯಗಳು ಆಡಳಿತ ಕಛೇರಿ, ಪ್ರಾಚಾರ್ಯರ ಕೋಣೆ(ಚೆಂಬರ್) ಪ್ರಾಧ್ಯಾಪಕರ ಕೋಣೆ ಹೀಗೆ ವಿವಿಧ ಭಾಗಗಳನ್ನು ಮಾಡಲಾಗಿದೆ. ಯುರೋಪಿಯನ್ ಮಾದರಿಯಲ್ಲಿ ನಿರ್ಮಿಸಿದ ಈ ಕಟ್ಟಡವು ಅತ್ಯಂತ ಸುಂದರವೂ, ಸುಭದ್ರವೂ ಆಗಿದ್ದು ಶೈಕ್ಷಣಿಕ ವಾತಾವರಣವನ್ನು ಸೃಷ್ಟಿಸುವಂತಿದೆ. ಇತ್ತಿಚೆಗೆ ಈ ಮೂಲ ಕಟ್ಟಡದಲ್ಲಿ ಅನೇಕ ಪ್ರಗತಿಪರವಾದ ಬದಲಾವಣೆಗಳಾಗಿ ಅದರ ಸೌಂದರ್ಯಕ್ಕೆ ಹೆಚ್ಚಿನ ಕಳೆ ಏರಿದೆ. ಕ್ರಿ.ಶ.೧೯೦೬ರಲ್ಲಿ ಕಟ್ಟಿಸಿದ ಭವ್ಯ ಹಾಗೂ ಸುಂದರವಾದ ಕಟ್ಟಡವು ಕ್ರಿ.ಶ.೨೦೦೬ರಲ್ಲಿ ತನ್ನ ಶತಸಂವತ್ಸರದಲ್ಲಿ ಪಾದಾರ್ಪಣೆ ಮಾಡಿದೆ(ಕೊಲ್ಲಾಪುರದಲ್ಲಿಯ ಗೋಖಲೆ ಕಾಲೇಜಿನ ಕಟ್ಟಡ, ಬೆಳಗಾವಿಯಲ್ಲಿನ ಆರ್.ಪಿ.ಡಿ.(ರಾಣಿ ಪಾರ್ವತಿದೇವಿ) ಕಾಲೇಜಿನ ಕಟ್ಟಡ ಮತ್ತು ಜಮಖಂಡಿಯ ಇಂದಿನ ಬಿ.ಎಲ್.ಡಿ ಕಟ್ಟಡ ಇವು ಮೂರು ಒಂದೇ ಮಾದರಿಯ ಕಟ್ಟಡಗಳಾಗಿದ್ದು, ಯುರೋಪಿಯನ್ ಶೈಲಿಯಲ್ಲಿ ನಿರ್ಮಿಸಲಾಗಿದೆ.[೪೯] ಇಂತಹ ಅಮೂಲ್ಯವಾದ ಕಟ್ಟಡಗಳನ್ನು ಕಟ್ಟಿಸಿ ಇಂದಿನವರೆಗೆ ಮಹದುಪಕಾರ ಮಾಡಿದ ಸಂಸ್ಥಾನಿಕರು ನಿಜವಾಗಿಯೂ ಪ್ರಶಂಸನೀಯರು. ಇಂದಿಗೂ ಜನರಿಗೆ ಸದಾ ಕಾಲ ಸೇವೆಗೆ ಮುಕ್ತವಾಗಿವೆ.

**೨ನೇ ನಂಬರ್ ಮರಾಠಿಶಾಲೆ:** ಪಟವರ್ಧನ ಸಂಸ್ಥಾನಿಕರ ಕಾಲದಲ್ಲಿ ಆಡಳಿತದ ಭಾಷೆಯು ಮರಾಠಿಯಾಗಿದ್ದರಿಂದ ಜನರಿಗೆ ಮರಾಠಿ ಭಾಷೆಯಲ್ಲಿಯೇ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಅದಕ್ಕಾಗಿ ಕ್ರಿ.ಶ.೧೮೭೦ರಲ್ಲಿ ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರು ನಗರದ ಉತ್ತರ ದಿಕ್ಕಿಗಿದ್ದ ಪಶುಚಿಕಿತ್ಸಾಲಯದ ಬದಿಗೆ ಸುಂದರವಾದ ಕಟ್ಟಡವನ್ನು ಕಟ್ಟಿಸಿ ಅಲ್ಲಿ ಎರಡನೇ ನಂಬರ್ ಮರಾಠಿ ಶಾಲೆಯನ್ನು ಪ್ರಾರಂಭಿಸಿದರು. ಈ ಶಾಲೆಗೆ ರೂಢಿಯಲ್ಲಿ ಜನರು "ದೋ ನಂಬರ್ ಮರಾಠಿ ಶಾಲೆ"ಯೆಂದೇ ಕರೆಯುತ್ತಾರೆ. ಆದರೆ ಮುಂದೆ ಕ್ರಿ.ಶ.೧೯೪೮ರಲ್ಲಿ ಸಂಸ್ಥಾನವು ವಿಲೀನವಾದ ನಂತರ ಕರ್ನಾಟಕವು ಏಕೀಕರಣ ಹೊಂದಿ ಕನ್ನಡ ಭಾಷೆಗೆ ಆದ್ಯತೆ ದೊರೆತು ಇಂದು ಅದು ಕನ್ನಡ ಹಿರಿಯ ಪ್ರಾಥಮಿಕ ಶಾಲೆಯಾಗಿ ಪರಿವರ್ತನೆ ಹೊಂದಿದೆ. ಈಗ ಈ ಶಾಲೆಗೆ ಎರಡನೇ ನಂಬರ್ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಎಂದು ಕರೆಯುತ್ತಾರೆ.[೫೦] ಇಲ್ಲಿ ಕನ್ನಡ ಒಂದನೇ ಈಯತ್ತೆಯಿಂದ ಏಳನೇ ಈಯತ್ತೆಯವರೆಗೆ ವರ್ಗಗಳು ನಡೆಯುತ್ತವೆ. ಮುಧೋಳದಲ್ಲಿಯೂ ಮರಾಠಿ ಶಾಲೆಗಳು ನಿರ್ಮಾನಗೊಂಡಿದ್ದವು.

**ಪಾಗಾ ಶಾಲೆ:** ಪಟವರ್ಧನ ಸಂಸ್ಥಾನಿಕರ ಮೊದಲಿನ ಅರಮನೆಯ ಇಂದಿನ ಉಪ ವಿಭಾಗಾಧಿ ಕಾರಿಗಳ ಕಚೇರಿಯ ಆವರಣದಲ್ಲಿತ್ತು. ಆವಾಗ್ಗೆ ಈಗಿದ್ದ ಪಾಗಾಶಾಲೆಯಲ್ಲಿ ಕುದುರೆಗಳನ್ನು ಕಟ್ಟುತ್ತಿದ್ದರು. ಮುಂದೆ ಕ್ರಿ.ಶ.೧೮೫೯ರಲ್ಲಿ ಇವರು ತಮ್ಮ ಮೊದಲಿದ್ದ ಅರಮನೆಯನ್ನು ಬಿಟ್ಟು ರಾಮತೀರ್ಥದಲ್ಲಿ ಹೊಸ ಅರಮನೆಯನ್ನು ಕಟ್ಟಿಸಿ ಅಲ್ಲಿ ಪ್ರತ್ಯೇಕ ಕುದುರೆಗಳನ್ನು ಕಟ್ಟಲು ಅಶ್ವ ಶಾಲೆಯನ್ನು ನಿರ್ಮಿಶಿದರು. ಮುಂದೆ ಈಗಿದ್ದ(ಪಾಗಾಶಾಲೆಯಲ್ಲಿ) ಕಟ್ಟಡದಲ್ಲಿ ಮರಾಠಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದರು. ಹೀಗಾಗಿ ಮೊದಲು ಕುದುರೆಗಲನ್ನು ಕಟ್ಟುವ ಸ್ಥಳವಾಗಿದ್ದು ಮುಂದೆ ಶಾಲೆಯಾಗಿ ಪರಿವರ್ತನೆಯಾಗಿದ್ದರಿಂದ ಇದಕ್ಕೆ "ಪಾಗಾಶಾಲೆ" ಎಂದು ಕರೆಯುತ್ತಾರೆ. ಮರಾಠಿಯಲ್ಲಿ ಕುದುರೆಗೆ ಪಾಗಾ ಎಂದು ಹೆಸರು(ಹೀಗಾಗಿ ಈ ಶಾಲೆಗೆ ಅಂದಿನಿಂದ ಪಾಗಾಶಾಲೆ ಎಂದು ಹೆಸರು ಬಂದಿದೆ). ಈ ಶಾಲೆಯನ್ನು ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರ ಕಾಲದಲ್ಲಿ ಕ್ರಿ.ಶ.೦೧-೦೪-೧೮೭೪ರಲ್ಲಿ ಸ್ಥಾಪಿಸಲಾಯಿತು. ಅಂದಿನಿಂದ ಇಲ್ಲಿಯವರೆಗೆ ಈ ಶಾಲೆಯಲ್ಲಿ ಮರಾಠಿ ೧ನೇ ಈಯತ್ತೆಯಿಂದ ಏಳನೇ ಈಯತ್ತೆಯವರೆಗೆ ಶಿಕ್ಷಣವನ್ನು ಕೊಡಲಾಗುತ್ತದೆ.[೫೧] ಇಂದು ಈ ಶಾಲೆಗೆ ಮರಾಠಿ ಹಿರಿಯ ಪ್ರಾಥಮಿಕ ಶಾಲೆಯೆಂದು ಕರೆಯುತ್ತಾರೆ. ಕುದುರೆಗಳ ಹಿಂಡು ಜಮಖಂಡಿ ಸಂಸ್ಥಾನಿಕರ ಸೈನ್ಯದಲ್ಲಿ ಇದ್ದದ್ದುನ್ನು ಗುರುತಿಸಬಹುದು.

**ಸಾರ್ವಜನಿಕ ಕಟ್ಟಡಗಳು**

**ದರ್ಬಾರ ಹಾಲ್:** ಇತಿಹಾಸ ಪ್ರಸಿದ್ಧವಾದ ಪೋಲೊ ಮೈದಾನದ ದಕ್ಷಿಣದ ಬದಿಗೆ ರಾಜ ಠೀವಿಯಿಂದ ತಲೆ ಎತ್ತಿ ನಿಂತಿರುವ ಭವ್ಯವಾದ ಕಟ್ಟಡವೇ ಈ ದರ್ಬಾರ ಹಾಲ. ಸಂಸ್ಥಾನಿಕರು

ಈ ಸುಂದರವಾದ ಕಟ್ಟಡದಲ್ಲಿ ವಿಶೇಷ ಸಂದರ್ಭಗಳಲ್ಲಿ ತಮ್ಮ ದರ್ಬಾರವನ್ನು ನಡೆಸುತ್ತಿದ್ದರು. ಸರ್ ಪರಶುರಾಜ ಭಾವು ಪಟವರ್ಧನರು ತಮ್ಮ(ಸಿಂಹಾಸನಾರೋಹಣ) ಪಟ್ಟಾಭಿಷೇಕ ಸಮಾರಂಭವನ್ನು ಒಳ್ಳೆಯ ಸಡಗರದಿಂದ ಆಚರಿಸುವುದಕ್ಕಾಗಿ ಕ್ರಿ.ಶ.೧೯೦೩ರಲ್ಲಿ ಈ ಸುಂದರವಾದ ಕಟ್ಟಡವನ್ನು ಕಟ್ಟಿಸಿದರು. ಅಲ್ಲದೇ ಪ್ರತಿವರ್ಷ ರಾಜ್ಯಾರೋಹಣದ ವಾರ್ಷಿಕೋತ್ಸವವನ್ನು ಈ ಕಟ್ಟಡದಲ್ಲಿಯೇ ನೆರವೇರಿಸುತ್ತಿದ್ದರು. ಈ ಸಮಾರಂಭಕ್ಕೆ ಮುಂಬೈ ಪ್ರಾಂತದ ಗವ್ಹರ್ನರರನ್ನು ಉನ್ನತ ಬ್ರಿಟಿಷ್ ಅಧಿಕಾರಿಗಳನ್ನು ನೆರೆಯ ಸಂಸ್ಥಾನದ ದೊರೆಗಳನ್ನು ಆಡಳಿತದ ಸಿಬ್ಬಂದಿ ವರ್ಗದವರನ್ನು ಮತ್ತು ಪ್ರತಿಷ್ಠಿತ ಪ್ರಜೆಗಳನ್ನು ಆಮಂತ್ರಿಸಿಕೊಳ್ಳುತ್ತಿದ್ದರು.[೫೨] ಇಂದಿಗೂ ವಿದೇಶದವರನ್ನು ರಾಷ್ಟ್ರೀಯ ಕಾರ್ಯಕ್ರಮಗಳಿಗೆ ಆಮಂತ್ರಿಸುವ ಪದ್ಧತಿ ಭಾರತದಲ್ಲಿದೆ.

ಸಂಸ್ಥಾನಿಕರು ಪ್ರತಿ ವರುಷ ವಿಜಯದಶಮಿ ಹಬ್ಬವನ್ನು(ದಸರಾ ಹಬ್ಬವನ್ನು) ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಅಂದೂ ಉಮಾರಾಮೇಶ್ವರ ದೇವಸ್ಥಾನದಿಂದ ಅರಸರು (ರಾಜಾಸಾಹೇಬರು) ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತು ತಮ್ಮ ಅಶ್ವದಳ, ಕಾಲ್ದಳ, ಪೋಲಿಸ್ ಬ್ಯಾಂಡ್ ಮತ್ತಿತರ ವಾದ್ಯಗಳೊಂದಿಗೆ ಒಳ್ಳೆಯ ಸಡಗರದಿಂದ ಮೆರವಣಿಗೆಯು ಹೊರಟು ಊರ ಹೊರಗಿದ್ದ ಸಜ್ಜಿಯ ಹನುಮಂತ ದೇವರ ಗುಡಿಯ ಮುಂದಿದ್ದ ಶಮಿವೃಕ್ಷಕ್ಕೆ ಪೂಜೆ ಸಲ್ಲಿಸಿ ಬನ್ನಿಯನ್ನು ಮುಡಿಯುತ್ತಿದ್ದರು. ನಂತರ ಈ ಮೆರವಣಿಗೆಯು ದರ್ಬಾರ ಹಾಲಿನವರೆಗೆ ಬಂದು ಅಲ್ಲಿ ಸಭೆ ಸೇರಿ ರಾಜರು ಪ್ರಜೆಗಳಿಗೆ ಶುಭವನ್ನು ಕೋರುತ್ತಿದ್ದರು. ಅಲ್ಲದೇ ಕೆಲವು ಕೈದಿಗಳನ್ನು ಬಿಡುಗಡೆ ಮಾಡುತ್ತಿದ್ದರೆಂದು ಹೇಳುತ್ತಾರೆ.[೫೩] ಪ್ರಾಮಾಣಿಕತೆ, ಸಭ್ಯತೆಯ ಆಧಾರದ ಮೇಲೆ ಕೈದಿಗಳನ್ನು ಹಬ್ಬದ ದಿನದಂದು ಬಿಡುಗಡೆಗೊಳಿಸುತ್ತಿರುವುದು ಮಾನವೀಯ ಮೌಲ್ಯಗಳಲ್ಲೊಂದಾಗಿದೆ.

ಜಮಖಂಡಿ ಸಂಸ್ಥಾನವು ಕ್ರಿ.ಶ.೧೯೪೮ರಲ್ಲಿ ಭಾರತದ ಒಕ್ಕೂಟದಲ್ಲಿ ವಿಲೀನವಾದ ನಂತರ ಕ್ರಿ.ಶ.೧೯೪೯ ಜೂನ್ ತಿಂಗಳಲ್ಲಿ ಪೋಲೊ ಪ್ಯಾಲೇಸ್ ಕಟ್ಟಡದಲ್ಲಿ(ಗವ್ಹರ್ನರ ಬಂಗ್ಲೋ) ಅಂದರೆ ಇಂದಿನ ಬಿ.ಎಲ್.ಡಿ.ಇ. ಕಾಲೇಜ ಕಟ್ಟಡದಲ್ಲಿ ಸರಕಾರಿ ಪ್ರಾಥಮಿಕ ಶಿಕ್ಷಕರ ತರಬೇತಿ ಕಾಲೇಜು ಪ್ರಾರಂಭವಾಯಿತು. ಆಗ ದರ್ಬಾರ ಹಾಲನಲ್ಲಿ ವಿದ್ಯಾರ್ಥಿಗಳಿಗೆ ಪಾಠಗಳನ್ನು ಕೊಡಲಾಗುತ್ತಿತ್ತು. ಅಲ್ಲದೆ ಅಲ್ಲಿ ನೂಲುವ, ನೇಯುವ, ಕೃಷಿ ಮೊದಲಾದ ಮೂಲ ಉದ್ಯೋಗಗಳ ಬಗೆಗೆ ತರಬೇತಿಯನ್ನು ಕೊಡಲಾಗುತ್ತಿತ್ತು. ಈ ತರಬೇತಿ(ಟ್ರೇನಿಂಗ್) ಕಾಲೇಜಿನ ಪ್ರಥಮ ಪ್ರಾಚಾರ್ಯರು ಶ್ರೀಯುತ ರಾಯಣ್ಣನವರೆಂಬುವರಿದ್ದರು. ನಂತರ ಶ್ರೀ ಜಾಲಿಯವರಾದರು. ಈ ದರ್ಬಾರ ಹಾಲ ಕಟ್ಟಡದ ನೀಲನಕ್ಷೆಯನ್ನು ಸಂಸ್ಥಾನದ ಇಂಜಿನೀಯರರಾದ ಶ್ರೀಯುತ ಮಣ್ಣೂರ ಎಂಬುವರು ತಯಾರಿಸಿದ್ದರೆಂದೂ ಹೇಳುತ್ತಾರೆ. ಶ್ರೀಯುತ ಶಂಕರರಾವ್

ಅಪ್ಪಾಸಾಹೇಬರ ಕಾಲದಲ್ಲಿ ಶಿವರಾತ್ರಿಯ ಉತ್ಸವವು ಐದು ದಿವಸಗಳವರೆಗೆ ನಡೆಯುತ್ತಿತ್ತು. ಆ ಸಮಯದಲ್ಲಿ(ಈ ದರ್ಬಾರ ಹಾಲಿನಲ್ಲಿ) ಇಲ್ಲಿ ಅನೇಕ ಸಭೆ–ಸಮಾರಂಭಗಳು ನಡೆಯುತ್ತಿದ್ದವು. ಸಂಸ್ಥಾನಿಕ ಸಿಂಹಾಸನಾರೋಹಣದ ವಾರ್ಷಿಕ ಸಮಾರಂಭವು ದರ್ಬಾರ ಹಾಲಿನಲ್ಲಿಯೇ ನಡೆಯುತ್ತಿತ್ತು.[೫೪] ಆ ಸಂದರ್ಭದಲ್ಲಿ ಅನೇಕ ಕೈದಿಗಳನ್ನು ಬಿಡುಗಡೆ ಮಾಡುತ್ತಿದ್ದರು.

ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಟ್ರೈನಿಂಗ್ ಕಾಲೇಜು ಕ್ರಿ.ಶ.೧೯೬೭ರಲ್ಲಿ ಜಮಖಂಡಿ ಯಿಂದ ಹುನಗುಂದಕ್ಕೆ ವರ್ಗಾಯಿಸಿದ ನಂತರ ಪೋಲೊ ಪ್ಯಾಲೇಸ್ ಕಟ್ಟಡದಲ್ಲಿ ಬಿಜಾಪುರ ಬಿ.ಎಎಲ್.ಡಿ. ಸಂಸ್ಥೆಯವರು ಜೂನ್ ತಿಂಗಳ ೧೯೬೩ರಲ್ಲಿ ಕಲೆ ಮತ್ತು ವಿಜ್ಞಾನ ಮಹಾವಿದ್ಯಾಲಯವನ್ನು ಪ್ರಾರಂಭಿಸಿದರು. ಆವಾಗ್ಗೆ ಈ ದರ್ಬಾರ ಹಾಲಿನಲ್ಲಿ ವರ್ಗಗಳನ್ನು ನಡೆಸಲಾಯಿತು. ಅಲ್ಲದೆ ಕಾಲೇಜಿನ ಎಲ್ಲ ಸಭೆ–ಸಮಾರಂಭಗಳನ್ನು ಮತ್ತು ವಾರ್ಷಿಕ ಸ್ನೇಹ ಸಮ್ಮೇಳನವನ್ನು ಇದೇ ಕಟ್ಟಡದಲ್ಲಿ ಆಚರಿಸಲಾಗುತ್ತಿದೆ. ಇತ್ತೀಚೆಗೆ ಈ ಭವ್ಯ ಕಟ್ಟಡವನ್ನು ಬಿ.ಎಲ್.ಡಿ.ಇ. ಕಾಲೇಜಿನ ಗ್ರಂಥಾಲಯಕ್ಕಾಗಿ ಉಪಯೋಗಿಸುತ್ತಿರುವುದು, ಇದಕ್ಕೆ ಹೆಚ್ಚಿನ ಮೆರಗನ್ನು ತಂದಿದೆ. ಇಲ್ಲಿ ಏಕಕಾಲಕ್ಕೆ ಸುಮಾರು ೨೦೦–೩೦೦ ವಿದ್ಯಾರ್ಥಿಗಳನ್ನೊಳಗೊಂಡ ಸುಮಾರು ೪೭,೫೦೦ದಷ್ಟು ಪುಸ್ತಕಗಳಿದ್ದು ವಿದ್ಯಾರ್ಥಿಗಳಿಗೆ ಬಹಳೇ ಉಪಯೋಗ ಕಾರಿಯಾಗಿದೆ ಎಂದು ಹೇಳಬಹುದು. ಅಂದು ಸಂಸ್ಥಾನಿಕ ರಿಂದ(ಪರಶುರಾಮ ಭಾವು) ಕಟ್ಟಿಸಲ್ಪಟ್ಟ ಈ ಭವ್ಯ ಮತ್ತು ಸುಂದರವಾದ ಕಟ್ಟಡವು ಇಂದು ಜಮಖಂಡಿ ನಗರದ ಒಂದು ಅಮೂಲ್ಯವಾದ ಆಸ್ತಿಯೇ ಸರಿ ಎಂದು ಹೇಳಬಹುದು. ರಾಜರ ಉದಾರತೆಯ ಪ್ರತೀಕವಾಗಿ ಈ ಸ್ಮಾರಕವಿದೆ.

**ಸರಕಾರಿ ಆಸ್ಪತ್ರೆ:** ಸಂಸ್ಥಾನಿಕರಾದ ರಾಮಚಂದ್ರರಾವ್ ಅಪ್ಪಾಸಾಹೇಬರು ಜಮಖಂಡಿಯಲ್ಲಿ ಸಾರ್ವಜನಿಕ ರಿಗಾಗಿ ಅಲೋಪಥಿಕ್ ಹಾಗೂ ಮೈಲಿ ಬೇನೆಯ ನಿವಾರಣೆಗಾಗಿ ಕ್ರಿ.ಶ.೧೮೬೧ರಲ್ಲಿ ಒಂದು ಆಸ್ಪತ್ರೆಯನ್ನು ಸ್ಥಾಪಿಸಿ ಎಲ್ಲ ರೀತಿಯ ಔಷದೋಪಚಾರದ ವ್ಯವಸ್ಥೆಯನ್ನು ಮಾಡಿದರು. ವಿವಿಧ ಬಗೆಯ ರೋಗ–ರುಜಿನಗಳನ್ನು ಪರೀಕ್ಷಿಸಿ ಉಪಚರಿಸಲು ಯೋಗ್ಯವಾದ ವೈದ್ಯಾಧಿಕಾರಿ ಗಳನ್ನು ನೇಮಿಸಿದರು. ಹೀಗೆ ಸುಸಜ್ಜಿತವಾಗಿ ಸ್ಥಾಪಿಸಲ್ಪಟ್ಟ ಆಸ್ಪತ್ರೆಗೆ "ಪ್ರಿನ್ಸ್ ಆಫ್ ವೆಲ್ಸ್ ಆಸ್ಪತ್ರೆ" ಎಂದು ಹೆಸರಿಸಿದರು. ಇಂದು ಜಮಖಂಡಿಯಲ್ಲಿದ್ದ ಸರಕಾರಿ ಆಸ್ಪತ್ರೆಗೆ ಅದೆಷ್ಟೋ ವರುಷಗಳವರೆಗೆ 'ಪಿ.ಡಬ್ಲ್ಯೂ ಆಸ್ಪತ್ರೆ ಅಂದರೆ Prince of wals ಆಸ್ಪತ್ರೆ ಎಂದೇ ಕರೆಯುತ್ತಿದ್ದರು.[೫೫] ಆದರೆ ಇತ್ತೀಚೆಗೆ ಅದಕ್ಕೆ ಸಾರ್ವಜನಿಕ(ಸರಕಾರಿ ಆಸ್ಪತ್ರೆ) ಎಂದು ಕರೆಯುತ್ತಾರೆ.

**ಅತಿಥಿ ಗೃಹ (ರಮಾ ನಿವಾಸ):** ಪಟವರ್ಧನ ಸಂಸ್ಥಾನಿಕರ ಕಾಲದಲ್ಲಿ ಮುಂಬೈ ಪ್ರಾಂತದ ಗವರ್ನರರು, ಗೌರವಾನ್ವಿತ ಬ್ರಿಟಿಷ್ ಅಧಿಕಾರಿಗಳು ಹಾಗೂ ಅವರ ಸಿಬ್ಬಂದಿ ವರ್ಗ ಸಂಸ್ಥಾನದ ಆಡಳಿತವನ್ನು ವೀಕ್ಷಿಸಲು ಮೇಲಿಂದ ಮೇಲೆ ಜಮಖಂಡಿಗೆ ಆಗಮಿಸುತ್ತಿದ್ದರು. ಈ ಅಧಿಕಾರಿ

ವರ್ಗದವರ ವಾಸ್ತವ್ಯಕ್ಕಾಗಿ ರಾಮಚಂದ್ರರಾವ್ ಅಪ್ಪಾಸಾಹೇಬರು ರಾಜವೈಭವ ಸೌಲಭ್ಯಗಳನ್ನೊಳಗೊಂಡ ಸುಂದರವಾದ ಅತಿಥಿ ಗೃಹವನ್ನು ಕಟ್ಟಿಸಿದರು. ಇವರ ಆಳ್ವಿಕೆಯಲ್ಲಿ ಮುಂಬೈ ಪ್ರಾಂತದ ಗವ್ಹರ್ನರರಾದ "ರಿಚರ್ಡ್ ಟೆಂಪಲ್" ಮತ್ತು "ಸರ್ ಜೇಮ್ಸ್ ಫರ್ಗುಶನ್" ಎಂಬುವರು ಜಮಖಂಡಿ ಸಂಸ್ಥಾನಕ್ಕೆ ಭೇಟಿ ನೀಡಿ ಇಲ್ಲಿಯ ವ್ಯವಸ್ಥಿತವಾದ ಆಡಳಿತವನ್ನು ಕಂಡು ತುಂಬ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.[೫೬] ಬ್ರಿಟಿಷರೊಂದಿಗೆ ಸಂಸ್ಥಾನಿಕರು ಸ್ನೇಹಪೂರ್ವಕವಾಗಿದ್ದರು.

**ಎಸ್.ಆರ್.ಎ.ಕ್ಲಬ್:** ಸಂಸ್ಥಾನಿಕರಾದ ಕ್ಯಾಪ್ಟನ್ ಸರ್ ಪರಶುರಾಮ ಬಾವು ಸಾಹೇಬರು ತಮ್ಮ ತಂದೆಯವರಾದ ಶ್ರೀಮಂತ ರಾಮಚಂದ್ರರಾವ್ ಅಪ್ಪಾಸಾಹೇಬ್ ಸ್ಮರಣಾರ್ಥ ಪೋಲೊ ಮೈದಾನಕ್ಕೆ ಹೊಂದಿಕೊಂಡು ಒಂದು ಸುಂದರವಾದ ಕಟ್ಟಡವನ್ನು ಕಟ್ಟಿಸಿ ಅಲ್ಲಿ ಸಾಮಾಜಿಕ ಕ್ಲಬ್‌ನ್ನು ಸ್ಥಾಪಿಸಿದರು. ಇದೇ ಇಂದಿನ ಎಸ್.ಆರ್.ಎ.ಕ್ಲಬ್ ಇವರು ದೇಶಿ ಹಾಗೂ ವಿದೇಶಿ ಆಟಗಳನ್ನಾಡುವುದರಲ್ಲಿ ಹೆಚ್ಚಿನ ಅಭಿರುಚಿವುಳ್ಳವರಾಗಿದ್ದರು. ಅದಕ್ಕಾಗಿ ಅತ್ಯುತ್ತಮವಾದ ಟೆನಿಸ್ ಮತ್ತು ಬ್ಯಾಟಮಿಟ್‌ನ್ ಕೋರ್ಟುಗಳನ್ನು ನಿರ್ಮಿಸಿದರು. ಅಲ್ಲದೇ ಬಿಲಿಯರ್ಡ್ಸ್ ಮತ್ತು ಟೆಬಲ್ ಟೆನಿಸ್ ಕೋರ್ಟುಗಳನ್ನು(ಅಂಕಣ) ನಿರ್ಮಿಸಿದರು. ಅಲ್ಲದೆ ಬಿಲಿಯರ್ಡ್ಸ್ ಮತ್ತು ಟೆಬಲ್ ಟೆನಿಸ್ ಆಟಗಳನ್ನಾಡುವ ಸೌಲಭ್ಯವನ್ನು ಈ ಕ್ಲಬ್ಬಿನಲ್ಲಿ ಮಾಡಲಾಗಿತ್ತು. ಈ ಕ್ಲಬ್ಬಿನ ವತಿಯಿಂದ ಪ್ರತಿ ವರುಷ ವಿವಿಧ ಆಟಗಳ ಸ್ಪರ್ಧೆಗಳನ್ನು ಏರ್ಪಡಿಸಲಾಗುತ್ತಿತ್ತು. ಈ ಸ್ಪರ್ಧೆಗಳಲ್ಲಿ ಸ್ವತಃ ಮಹಾರಾಜರೇ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಿದ್ದರು. ವಿಜಯಶಾಲಿಗಳಾದ ಕ್ರೀಡಾಪಟುಗಳಿಗೆ ರಾಜರು ಅತ್ಯಂತ ಆಕರ್ಷನೀಯ ಬೆಲೆಯುಳ್ಳ ಶುದ್ಧ ಬೆಳ್ಳಿಯ ಟ್ರೋಪಿಗಳನ್ನು ಕೊಟ್ಟು ಗೌರವಿಸುತ್ತಿದ್ದರು. ಸುಮಾರು ೪೦೦ ತೊಲೆ ಶುದ್ಧ ಬೆಳ್ಳಿಯಿಂದ ಮಾಡಿದ ಅತ್ಯಂತ ಸುಂದರವಾದ ಟ್ರೋಪಿಗಳು ಇಂದಿಗೂ ಎಸ್.ಆರ್.ಎ.ಕ್ಲಬ್ಬಿನಲ್ಲಿವೆ. ಬಹುತರವಾಗಿ ಜಗತ್ತಿನಲ್ಲಿ ನಡೆಯುವ ಯಾವ ಕ್ರೀಡಾ ಸ್ಪರ್ಧೆಗಳಲ್ಲಿಯೂ ಇಂತಹ ಅಮೂಲ್ಯವಾದ ಟ್ರೋಫಿಗಳಿದ್ದದ್ದು ಕಂಡುಬರುವುದಿಲ್ಲ. ಅದರಂತೆ ಬಿಲಿಯಡ್ಸ್ ಆಟವಾಡುವ ಸೌಲಭ್ಯವು(ಇಂದು ರಾಜ್ಯದ ಕೆಲವೇ ಸ್ಥಳಗಳಲ್ಲಿದೆ) ಇಂದಿಗೂ ಸಹ ಈ ಕ್ಲಬ್ಬಿನಲ್ಲಿದೆ. ಸುಮಾರು ೪.೫ ಲಕ್ಷ ರೂ. ಬೆಲೆಬಾಳುವ ಬಿಲಿಯರ್ಡ್ಸ್ ಆಟದ ಟೇಬಲ್ ಇದ್ದು, ಅನೇಕರು ದಿನ ನಿತ್ಯ ಈ ಆಟವಾಡುವುದನ್ನು ಕಾಣಬಹುದು.[೫೭] ಅಂದು ವಿವಿಧ ಕ್ರೀಡಾಪಟುಗಳಿಗೆ ರಾಜರು ಕೊಡುತ್ತಿದ್ದ ಪ್ರೋತ್ಸಾಹ ಪರಂಪರೆಯು ಇಂದಿಗೂ ಜಮಖಂಡಿಯ ನಾಗರಿಕರಲ್ಲಿ ಬೆಳೆದು ಬಂದಿದೆ. ಸ್ಥಳೀಯ ಕ್ರೀಡೆಗಳಾದ ಕುಸ್ತಿ, ಕಬಡ್ಡಿ, ಆಟಗಳ ಜೊತೆಗೆ ವಿದೇಶಿ ಕ್ರೀಡೆಗಳನ್ನು ಸಹ ರಾಜರು ಪರಿಚಯಿಸಿ ಪ್ರೋತ್ಸಾಹಿಸಿದರು.

**ಪೋಲೊ ಮೈದಾನ:** ಸಂಸ್ಥಾನಿಕರಾದ ಪರಶುರಾಮ ಭಾವು ಸಾಹೇಬರು ಕ್ರೀಡಾಪಟುಗಳಾಗಿದ್ದು, ವಿವಿಧ ದೇಶಿ ಹಾಗೂ ವಿದೇಶಿ ಆಟಗಳನ್ನಾಡುವುದರಲ್ಲಿ ಆಸಕ್ತಿಯುಳ್ಳವರಾಗಿದ್ದರು. ಅದರಲ್ಲಿ ವಿಶೇಷವಾಗಿ ಪೋಲೊ ಆಟವನ್ನಾಡುವುದರಲ್ಲಿ ಹೆಚ್ಚಿನ ಅಭಿರುಚಿಯಿತ್ತು. ಪೋಲೊ ಆಟವನ್ನು

ಕುದುರೆಯ ಮೇಲೆ ಆಡುತ್ತಿದ್ದರಿಂದ ಅದಕ್ಕೆ ವಿಶಾಲವಾದ ಸ್ಥಳಾವಕಾಶ ಬೇಕಾಗುತ್ತಿತ್ತು. ಹಾಗಾಗಿ ಈಗಿದ್ದ ಸ್ಥಳವೇ ಅದಕ್ಕೆ ಯೋಗ್ಯವಾಗಿತ್ತು. ಆದರೆ ಈಗಿದ್ದ ಮೈದಾನವು ಹಿಂದಕ್ಕೆ ಒಂದು ಕೃಷಿ ಕ್ಷೇತ್ರವಾಗಿದ್ದು, ಅದರ ಒಡೆತನವು ಸಂಸ್ಥಾನದಲ್ಲಿ ಖಾಸಗಿ ಕಾರಭಾರಿಯಾಗಿದ್ದ ಶ್ರೀಯುತ ಮಂಗಳವೇಡ ತಾತ್ಯಾಪಂತ ಎಂಬವರದಾಗಿತ್ತಂತೆ. ಆಗ ಪರಶುರಾಮ ಭಾವು ಅವರು ಈ ವಿಶಾಲವಾದ ಭೂಪ್ರದೇಶವು ಪೋಲೊ ಆಟವಾಡಲು ಹೆಚ್ಚು ಅನುಕೂಲವಾದ ಸ್ಥಳವಾಗಿದ್ದರಿಂದ ಇದನ್ನು ಮಂಗಳವೇಡೆಯವರಿಂದ ಪಡೆದುಕೊಂಡು ಕಡಕೋಳ ಗ್ರಾಮದ ಹದ್ದಿನಲ್ಲಿ ಇದರಷ್ಟೇ ಕ್ಷೇತ್ರವಿದ್ದ ಫಲವತ್ತಾದ ಭೂಮಿಯನ್ನು ಮಂಗಳವೇಡರವರಿಗೆ ಕೊಟ್ಟರೆಂದು ಹೇಳುತ್ತಾರೆ. ಮುಂದೆ ಮಂಗಳವೇಡೆಯವರಿಂದ ಪಡೆದುಕೊಂಡ ಈ ಭೂಮಿಯನ್ನು ಸಮತಟ್ಟಾಗಿ ಮಾಡಿ ಪೋಲೊ ಆಟವಾಡಲು ಅತ್ಯುತ್ತಮವಾದ ಮೈದಾನವನ್ನು ನಿರ್ಮಿಸಿದರು.[೨೮] ಅಂದು ಪರಶುರಾಮ ಭಾವು ಸಾಹೇಬರು ನಿರ್ಮಿಸಿದ ಮೈದಾನವೇ ಇಂದು ನಗರದಲ್ಲಿದ್ದ ಇತಿಹಾಸ ಪ್ರಸಿದ್ಧವಾದ ಪೋಲೊ ಮೈದಾನವಾಗಿದೆ. ಇದರ ಕ್ಷೇತ್ರವು ಸುಮಾರು ೨೦ ಎಕರೆಯಷ್ಟಿದೆ.

ಈ ಪೋಲೊ ಮೈದಾನದಲ್ಲಿ ಹಿಂದೆ ಅನೇಕ ಸಲ ರಾಜ್ಯ ಹಾಗೂ ರಾಷ್ಟ್ರಮಟ್ಟದ ಕ್ರೀಡೆಗಳು ಹಾಗೂ ಇತರೆ ಬೃಹತ್ ಸಭೆ–ಸಮಾಂಭಗಳು ಅತ್ಯಂತ ಅದ್ದೂರಿಯಿಂದ ಆಚರಿಸಲ್ಪಟ್ಟ ಪ್ರಸಂಗಗಳನ್ನು ಸ್ಮರಿಸಿಕೊಂಡಾಗ ಇದರ ಮಹತ್ವವು ಗೊತ್ತಾಗುತ್ತದೆ. ಇಲ್ಲಿ ನಡೆಯುವ ಕ್ರೀಡೆ ಯನ್ನಾಗಲೀ ಸಭೆ–ಸಮಾರಂಭಗಳನ್ನಾಗಲೀ ವೀಕ್ಷಿಸಲು ಸುಂದರವಾದ ನೈಸರ್ಗಿಕ ವಿಚಕ್ಷಣಾಲಯ(ಪೆವೇಲಿಯನ್ನ)ವಿದ್ದು ಇದಕ್ಕೆ ಹೆಚ್ಚಿನ ಮೆರಗನ್ನು ತಂದಿದೆ. ಇಲ್ಲಿ ಲಕ್ಷಾಂತರ ಜನರು ಏಕಕಾಲದಲ್ಲಿ ನಿರಾಂತಕವಾಗಿ ನೆಲೆಸಲು ಸ್ಥಳಾವಕಾಶವಿದ್ದು ಇದರ ಇನ್ನೊಂದು ವಿಶೇಷವೆನ್ನಬಹುದು. ಇಂತಹ ಸುಂದರ ಹಾಗೂ ವಿಶಾಲವಾದ ಮೈದಾನವನ್ನು ನಿರ್ಮಿಸಿದ ಸಂಸ್ಥಾನಿಕರು ಸದಾ ಸ್ಮರಣೀಯರಾಗಿದ್ದಾರೆ.

ರಾಮಚಂದ್ರ ಅಪ್ಪಾಸಾಹೇಬರ ಕಾಲದಲ್ಲಿ(ಕ್ರಿ.ಶ.೧೮೫೩–೧೯೪೭) ಪ್ರಾರಂಭವಾದ ಅಮರಾಯಿ ದನಗಳ ಜಾತ್ರೆಯ ಸಂದರ್ಭದಲ್ಲಿ ಬಲಿಷ್ಠ ಎತ್ತುಗಳಿಂದ ಉಸುಕು ತುಂಬಿದ ಚೀಲಗಳನ್ನು ಜಗ್ಗಿಸುವ ಸ್ಪರ್ಧೆಗಳು ಇದೇ ಮೈದಾನದಲ್ಲಿ ಜರುಗುತ್ತಿದ್ದವು. ಅಲ್ಲದೆ ವಿವಿಧ ಜಾತಿಯ ದನಗಳು ಪ್ರದರ್ಶನವೂ ಇಲ್ಲಿಯೇ ನಡೆಯುತ್ತಿತ್ತು. ಆಗ ಸಾವಿರಾರು ಜನರು ವಿಶೇಷವಾಗಿ ಈ ಭಾಗದ ಕೃಷಿಕರು ಉಸುಕು ಜಗ್ಗಿಸುವ ಸ್ಪರ್ಧೆಯನ್ನು ನೋಡಲು ಇಲ್ಲಿ ಕಿಕ್ಕಿರಿದು ಕೂಡುತ್ತಿದ್ದರು. ಗೆಲುವು ಸಾಧಿಸಿದ ಎತ್ತುಗಳಿಗೆ ಸಂಸ್ಥಾನಿಕರು ಯೋಗ್ಯವಾದ ಬಹುಮಾನಗಳನ್ನು ನೀಡಿ ಗೌರವಿಸುತ್ತಿದ್ದರು.

**ಪರಶುರಾಮ ತಾಲೀಮ ಖಾನೆ(ಗರಡಿ ಮನೆ):** ಶ್ರೀಮಂತ ರಾಮಚಂದ್ರರಾವ್ ಅಪ್ಪಾಸಾಹೇಬರು ಈಗಿದ್ದ ಪಿ.ಬಿ.ಹೈಸ್ಕೂಲನ್ನು ಕಟ್ಟಿಸಿ ಅದರ ಎಡ ಬದಿಗೆ ಒಂದು ಗರಡಿ ಮನೆಯನ್ನು ನಿರ್ಮಿಸಿದರು. ಇದರಿಂದ ಹೈಸ್ಕೂಲ ವಿದ್ಯಾರ್ಥಿಗಳಿಗೆ ಅಂಗ ಸಾಧನೆಯನ್ನು ಮಾಡಲು ಮತ್ತು ಕುಸ್ತಿ ಆಡಲು ಬಹಳೇ ಅನುಕೂಲವಾಗಿತ್ತು. ಆ ಗರಡಿ ಮನೆಯು ಇಂದಿಗೂ ಸಹ ಪಿ.ಬಿ.ಹೈಸ್ಕೂಲಿನಲ್ಲಿದೆ. ಸರ್ ಪರಶುರಾಮ ಭಾವು ಸಾಹೇಬರು ಕೊಲ್ಲಾಪೂರದ ಶಾಹು ಮಹಾರಾಜರಂತೆ ಸ್ವತಃ ಕುಸ್ತಿಪಟುಗಳಾಗಿದ್ದರು. ದಿನನಿತ್ಯ ತಪ್ಪದೇ ಅಂಗ ಸಾಧನೆಯನ್ನು ಮಾಡಿ ಕುಸ್ತಿ ಆಡುತ್ತಿದ್ದರು. ಅದಕ್ಕಾಗಿ ಇವರು ರಾಮತೀರ್ಥದಲ್ಲಿ ರಾಜವಾಡೆಯಲ್ಲಿ ಒಂದು ಗರಡಿಮನೆಯನ್ನು ಕಟ್ಟಿಸಿದ್ದರು. ಆದರೆ ಇಂದು ಗರಡಿ ಮನೆಯ ಅವಶೇಷಗಳು ಮಾತ್ರ ಉಳಿದಿವೆ. ಯುವ ಪ್ರಜೆಗಳು ಬೈರಕಿ, ಸಾಮು, ಮಲ್ಲಕಂಬ ಹತ್ತುವುದು ಇವೇ ಮೊದಲಾದ ಅಂಗಸಾಧನೆಗಳನ್ನು ಮಾಡಿ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಮತ್ತು ಕುಸ್ತಿ ಆಡುವ ಕಲೆಯನ್ನು ಕಲಿತುಕೊಳ್ಳಲು ಅನುಕೂಲವಾಗಲೆಂದು ನಗರದ ಮಧ್ಯದಲ್ಲಿ ಒಂದು ಗರಡಿ ಮನೆಯನ್ನು ಕಟ್ಟಿಸಿದರು. ಈ ಗರಡಿ ಮನೆಯಲ್ಲಿ ಅಂಗ ಸಾಧನೆಯನ್ನು ಮಾಡುವ ಎಲ್ಲಾ ಸಲಕರಣೆಗಳು ಇಂದಿಗೂ ಸಹ ಇಲ್ಲಿ ಲಭ್ಯವಿದೆ. ದಿನನಿತ್ಯ ಈಗಲೂ ಅನೇಕ ತರುಣ ಕುಸ್ತಿಪಟುಗಳು ಇಲ್ಲಿ ಕುಸ್ತಿ ಸಾಧನೆಯನ್ನು ಮಾಡುತ್ತಿರುತ್ತಾರೆ. ಈ ಗರಡಿ ಮನೆಗೆ "ಪರಶುರಾಮ ತಾಲೀಮು ಖಾನೆ" ಎಂದು ಕರೆಯುತ್ತಾರೆ. ಈ ತಾಲೀಮು ಖಾನೆಯಲ್ಲಿ ಆಡಿ ತರಬೇತಿ ಪಡೆದ ಅನೇಕ ಕುಸ್ತಿ ಪಟುಗಳು ರಾಜ್ಯ ಹಾಗೂ ರಾಷ್ಟ್ರಮಟ್ಟದ ಕುಸ್ತಿ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಶಸ್ತಿ ಪಡೆದ ಅನೇಕ ಪ್ರತಿಭೆಗಳು ಇಲ್ಲಿದ್ದಾರೆ.

**ಸುವರ್ಣ ಚಿತ್ರ ಮಂದಿರ:** ಜಮಖಂಡಿ ನಗರದಲ್ಲಿರುವ ಈ ಚಿತ್ರಮಂದಿರವನನು ಸಂಸ್ಥಾನಿಕರಾದ ಶ್ರೀಮಂತ ಶಂಕರರಾವ್ ಅಪ್ಪಾಸಾಹೇಬ್ ಕ್ರಿ.ಶ.೧೯೩೬ರಲ್ಲಿ ಕಟ್ಟಿಸಿದರು. ಈ ಕಟ್ಟಡವನ್ನು ನಿರ್ಮಿಸಬೇಕೆಂದು ಇದರಲ್ಲಿ ಸ್ಫೂರ್ತಿ ಬರಲು ಕಾರಣವೆನೆಂದರೆ, ಶಂಕರರಾವ್ ಅವರು ಒಮ್ಮೆ ಕೊಲ್ಲಾಪುರಕ್ಕೆ ಹೋದಾಗ ಅಲ್ಲಿ ಶಾಹು ಮಹಾರಾಜರು ಕಟ್ಟಿಸಿದ "ಕೇಶವರಾವ್ ಬೋಸಲೆ ನಾಟ್ಯ ಮಂದಿರ"ವನ್ನು ನೋಡಿದರಂತೆ. ಕೇಶವ ಬೋಸಲೆ ಅವರು ಸುಪ್ರಸಿದ್ಧ ಸಂಗೀತಗಾರರೂ ಹಾಗೂ ನಾಟ್ಯಕಲಾವಿದರೂ ಆಗಿದ್ದರು. ಅವರ ಮೇಲಿನ ಅಭಿಮಾನಕೋಸ್ಕರ ಶಾಹು ಮಹಾರಾಜರು ಕಲಾ ನಗರಿಯಾದ ಕರವೀರ ನಗರದಲ್ಲಿ ನಾಟ್ಯ ಮಂದಿರವನ್ನು ಕಟ್ಟಿಸಿ ಅವರ ಹೆಸರನ್ನಿಟ್ಟಿದ್ದಾರೆ. ಅದು ಇಂದಿಗೂ ಸಹ ಸುಸ್ಥಿತಿಯಲ್ಲಿದೆ. ಅದರಂತೆ ಶಾಹು ಮಹಾರಾಜರು ಖಾಸಭಾಗದಲ್ಲಿ ಶಾಹುಕುಸ್ತಿ ಮೈದಾನದ ಕಟ್ಟಡವನ್ನು ಅಷ್ಟೇ ಸುಂದರವಾಗಿ ಹಾಗೂ ಯೋಜನಾ ಬದ್ಧವಾಗಿ ಕಟ್ಟಿಸಿದ್ದಾರೆ. ಈ ಎರಡೂ ಸುಂದರ ಹಾಗೂ ಭವ್ಯವಾದ ಕಟ್ಟಡಗಳನ್ನು ನೋಡಿ ಪ್ರಭಾವಿತರಾಗಿ ಶಂಕರರಾವ್ ಅವರು ಜಮಖಂಡಿಯಲ್ಲಿ ನಾಟಕ ಮತ್ತು ಕುಸ್ತಿ ಪ್ರದರ್ಶನಗಳನ್ನು ನೋಡಲು ಜನರಿಗೆ ಅನುಕೂಲವಾಗಲೆಂದು ಅತ್ಯಂತ ಭವ್ಯ ಹಾಗೂ ಸುಂದರವಾದ "ಸುವರ್ಣ ಚಿತ್ರ ಮಂದಿರ"ವನ್ನು ಕಟ್ಟಿಸಿದರು.[೫೯] ಈ ಚಿತ್ರಮಂದಿರದ ಕಟ್ಟಡ ಕಾರ್ಯವನ್ನು ಮಾಡಿ

ಮುಗಿಸಿದವರು ರಾವಸಾಹೇಬ ಸತಪ್ಪ ಆರಭಾವಿಯವರು. ಈ ಮಂದಿರದಲ್ಲಿ ಚಿತ್ರಗಳನ್ನು (ಸಿನೇಮಾಗಳನ್ನು) ಪ್ರದರ್ಶಿಸುವ ಕಾರ್ಯವು ಕ್ರಿ.ಶ.೧೯೪೩ರಲ್ಲಿ ಪ್ರಾರಂಭಿಸಲಾಯಿತು.

**ಜಮಖಂಡಿ ಅರ್ಬನ್ ಬ್ಯಾಂಕ್:** ಜಮಖಂಡಿ ನಗರದ ಮಧ್ಯದಲ್ಲಿ ಅತ್ಯಂತ ಭವ್ಯವಾದ ಗಡಿಯಾರ ಗೋಪುರ ಕಟ್ಟಡದಿಂದ ಶೋಭಿಸುತ್ತಿರುವ ಜಮಖಂಡಿಯ ಅರ್ಬನ್ ಬ್ಯಾಂಕ್ ಕ್ರಿ.ಶ.೧೯೪೦ರಲ್ಲಿ ಅಂದಿನ ಪಟವರ್ಧನ ಸಂಸ್ಥಾನಿಕರಾದ ಶ್ರೀ ಶಂಕರರಾವ್ ಅಪ್ಪಾಸಾಹೇಬರ ಉದಾರ ಆಶ್ರಯದಿಂದಲೂ ಸಾಂಗಲಿಯ ಶ್ರೀ ವೇಳನಕರ ಮತ್ತು ಮುಂಬೈಯ ಶ್ರೀ ಲಾಹೋಟಿ ಇವರ ಧನ ಸಹಾಯದಿಂದಲೂ ಸ್ಥಾಪಿಸಲ್ಪಟ್ಟಿತು. ಸಂಸ್ಥಾನಿಕರಾದ ಶ್ರೀ ಶಂಕರರಾವ್ ಅಪ್ಪಾಸಾಹೇಬರು ಕ್ರಿ.ಶ.೧೯೪೦ ಅಕ್ಟೋಬರ್ ತಿಂಗಳಿನಲ್ಲಿ ಈ ಬ್ಯಾಂಕನ್ನು ಉದ್ಘಾಟಿಸಿದರು. ಆದರೆ ಇದು ಮರು ವರುಷ ಮಾರ್ಚ್ ತಿಂಗಳಿನಲ್ಲಿ ಕಾರ್ಯಾರಂಭ ಮಾಡಿತು. ಸಂಸ್ಥಾನದ ದಿವಾಣರಾಗಿದ್ದ ಶ್ರೀ ಭಾವುರಾವ್ ಅಪ್ಪೆ, ಶ್ರೀ ಭಾಗವತ ಮಾಮಲೇದಾರ ಹಾಗೂ ಸರಕಾರಿ ಸಂಘಗಳ ನಿಬಂಧಕರಾಗಿದ್ದ ಶ್ರೀ ಜಿ.ವಿ.ಕೇಳಕರ, ಶ್ರೀ ಎಸ್.ಡಿ.ಆನಿಖಂಡಿ, ಶ್ರೀ ಎ.ಎಮ್.ಘೋರ್ಪಡೆ ಹಾಗೂ ಶ್ರೀ ಅಪ್ಪಾರಾವ್ ಸೀಂಧೆ, ಶ್ರೀ ಜಿ.ಕೆ.ರಾನಡೆ ಮುಂತಾದ ಮಹನೀಯರು ಈ ಬ್ಯಾಂಕಿನ ಸ್ಥಾಪನೆಗಾಗಿ ಹಗಲಿರುಳು ಶ್ರಮಿಸಿದರು.[೬೦] ಈ ಹಣಕಾಸು ಸಂಸ್ಥೆಯು ಬೆಳೆದು ಹೆಮ್ಮರವಾಗಿ ಕ್ರಿ.ಶ.೧೯೯೦ರಲ್ಲಿ ತನ್ನ ಸುವರ್ಣಮಹೋತ್ಸವ ಆಚರಿಸಿದ್ದು ಸ್ಮರಣೀಯ ಹಾಗೂ ೨೦೧೭ಕ್ಕೆ ಎಪ್ಪತ್ತೇಳು ವರ್ಷ ಸಂಭ್ರಮ. ಅಂದು ಬ್ಯಾಂಕ್ ಕೇವಲ ೧೨೮ ಜನ ಸದಸ್ಯರು, ರೂ.೨೨೦೨೫ ಏರು ಬಂಡವಾಳದೊಂದಿಗೆ ಆರಂಭವಾಗಿ, ಇಂದು ೨೨೧೫೦ ಸದಸ್ಯರನ್ನು ಒಳಗೊಂಡು ರೂಪಾಯಿ ೧,೮೩,೫೨,೫೪೦ ಶೇರು ಬಂಡವಾಳ ಹೊಂದಿ, ಜಮಖಂಡಿ ಭಾಗದ ಜನರಿಗೆ ಆರ್ಥಿಕ ನೆರವನ್ನು ನೀಡುವ ಬೃಹತ್ ಹಣಕಾಸಿನ ಸಂಸ್ಥೆಯಾಗಿದೆ.

ಸಂಸ್ಥಾನಿಕರು ಜಮಖಂಡಿ ಪರಿಸರದಲ್ಲಿ ವೈಭವಪೂರಿತ ಬಂಗಲೆ, ಆಟದ ಮೈದಾನ, ಗರಡಿಮನೆ, ವಾಚನಾಲಯ ಇತ್ಯಾದಿ ಕಟ್ಟಡಗಳನ್ನು ಬ್ರಿಟಿಷ ಅಧಿಕಾರಿಗಳಿಗೆ, ತಮ್ಮ ಸ್ವಂತಕ್ಕಾಗಿ ನಿರ್ಮಿಸಿದ ಪ್ರಮುಖ ಅಂಶವಾಗಿದೆ. ಅದರಂತೆ ಜನಪಯೋಗಿ ಕಾರ್ಯಗಳಾಗಿ ಕಟ್ಟೆಯ ಕೆರೆ, ಲಕ್ಕಣ ಕೆರೆ, ಮಾದಪ್ಪ ಕೆರೆ, ರಾಮತೀರ್ಥ ಕೆರೆ, ಆನೆಯ(ಅಗಸರ)ಕೆರೆ, ಅಕ್ಕತಂಗಿಯರ ಬಾವಿ, ತಿಮ್ಮಪ್ಪನ ಬಾವಿ, ಹಾಳು ಬಾವಿ, ಜಂಬುಕೇಶ್ವರ ಬಾವಿ, ಸಿಹಿ ನೀರಿನ ಬಾವಿ, ಹೊಕ್ಕಳ ಬಾವಿ, ಸಕ್ಕರೆಯ ಬಾವಿ, ಉಮಾರಾಮೇಶ್ವರ ಬಾವಿ, ಸದಾನಂದರ ಬಾವಿ, ನಂದಿಗೆಪ್ಪನ ಬಾವಿ, ಹರಿಜನ ಕೇರಿಯ ಬಾವಿ ಇನ್ನೂ ಹಲವಾರು ಬಾವಿಗಳನ್ನು ತೊಡಿಸುವ ಮೂಲಕ ಜನಮನ್ನಣೆಗೆ ಪ್ರೀತಿಪಾತ್ರರಾದರು. ಬ್ರಿಟಿಷರೊಂದಿಗೆ ಅವಿನಾಭಾವ ಸಂಬಂಧವಿರುವುದರಿಂದ ಕಟ್ಟಡಗಳ ನೀಲನಕ್ಷೆ ಯುರೋಪಿನ ಇಂಜನಿಯರದ್ದಾಗಿದ್ದು, ಹಣಕಾಸು ರಾಜರದಾಗಿರುತ್ತಿತ್ತು. ಹಾಗೆಯೇ ಸ್ಥಳೀಯ

ಶ್ರಮಿಕವರ್ಗದವರ ಸೇವೆ, ವಿದೇಶಿ ಮತ್ತು ಸ್ಥಳೀಯ ಪರಿಕರಗಳನ್ನು ಉಪಯೋಗಿಸಿ ನಿರ್ಮಿಸಿದ ಸಂಸ್ಥಾನಿಕರ ಕಟ್ಟಡಗಳು ಸಕಲರ ಸೇವೆಗೆ ನಿರಂತರ ಕಾರ್ಯಾಚರಿಸುತ್ತಿವೆ ಎಂದು ಸ್ಪಷ್ಟಪಡಿಸಬಹುದು.

## ಮುಧೋಳ ಘೋರ್ಪಡೆ ಸಂಸ್ಥಾನಿಕರ ಕಟ್ಟಡಗಳು

ಮುಧೋಳ ಮಹಾರಾಜರ ಕಾಲದಿಂದ ಇಂದಿನವರೆಗೂ "ಮುಧೋಳ ಮಲ್ಲ, ಲೋಕಾಪುರ ಕಲ್ಲ, ಮಹಾಲಿಂಗಪುರ ಬೆಲ್ಲ" ಎಂಬ ನಾಣ್ಣುಡಿ ಹೆಸರುವಾಸಿಯಾಗಿದೆ. ಶಾಸನಗಳಲ್ಲಿ 'ಮುದುವೊಳಲ್' ಅಂದರೆ ಸುಂದರವಾದ ಪಟ್ಟಣ ಎಂದು ಉಲ್ಲೇಖಗೊಂಡಿದೆ. ಕನ್ನಡ ಭಾಷೆಯ ಅದ್ವಿತೀಯ ಕವಿಯೆಂದು ಹೆಸರು ಪಡೆದಿರುವ ರನ್ನನ ಜನ್ಮಸ್ಥಳವಿರುವುದು ರನ್ನ ಬೆಳಗಲಿ ಮುಧೋಳ ಹತ್ತಿರದಲ್ಲಿದೆ. ಮುಧೋಳವನ್ನು ಆಳಿದ ಘೋರ್ಪಡೆ ಬೋಸಲೆ ಮನೆತನವು ಮಹಾರಾಷ್ಟ್ರದ ಪ್ರಾಚೀನ ಮನೆತನವಾಗಿದೆ. ಈ ಸಂಸ್ಥಾನವನ್ನಾಳಿದವರಲ್ಲಿ ವೆಂಕಟರಾವ್ ಘೋರ್ಪಡೆ, ನಾರಾಯಣರಾವ್ ಘೋರ್ಪಡೆ, ಮಾಲೋಜಿರಾವ್ ಘೋರ್ಪಡೆ ಹಾಗೂ ಕೊನೆಯವರಾಗಿ ರಾಜ ಬೈರವಸಿಂಗ್ ಘೋರ್ಪಡೆ ಅವರು ಪ್ರಮುಖರಾಗಿದ್ದಾರೆ.

ಮುಧೋಳ ಸಂಸ್ಥಾನವು ೮೧ ಹಳ್ಳಿಗಳನ್ನು ಹೊಂದಿದ್ದು ಇದರಲ್ಲಿ ಮುಧೋಳ, ಢವಳೇಶ್ವರ, ಜಂಬಗಿ, ಮಾಚಕನೂರ ಹಾಗೂ ಲೋಕಾಪುರ ಎಂಬ ಪಂಚ ಮಹಲಗಳಿದ್ದವು. ಮುಧೋಳ ರಾಜರ ಆಡಳಿತ ವೈಖರಿಯನ್ನು ನೋಡಿ ಅಂದಿನ ಮುಂಬಯಿ ಸರಕಾರ ಒಂಬತ್ತು ಕುಶಾಲ ತೋಪುಗಳನ್ನು ಹಾರಿಸುವ ಗೌರವ ನೀಡಿತ್ತು. ಪ್ರಾದೇಶಿಕವಾಗಿ ಪ್ರಬಲವಾಗಿದ್ದ ಮುಧೋಳ ಸಂಸ್ಥಾನ ೧೯೪೮ರಲ್ಲಿ ಮುಂಬೈ ರಾಜ್ಯದಲ್ಲಿ ವಿಲೀನಗೊಂಡು ವಿಜಯಪುರ ಜಿಲ್ಲೆಯಲ್ಲಿ ಒಂದು ತಾಲೂಕಾಗಿ ಸೇರಿತು.[೬೧] ಮುಧೋಳ ಸಂಸ್ಥಾನಿಕರು ಜನರಿಗಾಗಿ ಹಾಗೂ ತಮ್ಮ ಸ್ವಂತಕ್ಕಾಗಿ ಮುಧೋಳ ಹಾಗೂ ತಮ್ಮ ಆಡಳಿತದ ವ್ಯಾಪ್ತಿಯಲ್ಲಿಯ ಕೆಲವೊಂದು ಹಳ್ಳಿಗಳಲ್ಲಿ ಸ್ಮಾರಕಗಳನ್ನು ನಿರ್ಮಿಸಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

**ಮಹರಾಯನ ಕೆರೆ:** ಮುಧೋಳದಲ್ಲಿ ನೀರಿಗಾಗಿ ಹಾಹಾಕಾರವಿರುವುದನ್ನು ಗಮನಿಸಿದ ರಾಜಾ ವೆಂಕಟರಾವ್ ಘೋರ್ಪಡೆಯು 'ಮಹಾರಾಯನ ಕೆರೆಯನ್ನು(೧೮೦೦-೧೮೫೪) ವ್ಯವಸ್ಥಿತವಾಗಿ ಕಟ್ಟಿಸಿದನು. ಇದರಿಂದ ಮುಧೋಳ ನಗರಕ್ಕೆ ಕುಡಿಯುವ ನೀರಿನ ಸರಬರಾಜು ಇವತ್ತಿನವರೆಗೂ ಸರಾಗವಾಗಿ ನಡೆಯುತ್ತಿದೆ. ಕೆರೆಗೆ ಚಿಕ್ಕದಾದ ಕಪ್ಪು ಕಲ್ಲಿನಿಂದ ಅಣೆಕಟ್ಟೆ ಕಟ್ಟಲಾಗಿದೆ. ಇದರ ನಡುವೆ ಗೇಟುಗಳ ಮೂಲಕ ನೀರನ್ನು ಶುದ್ಧೀಕರಣ ಘಟಕಕ್ಕೆ ಸರಬರಾಜು ಮಾಡಿ ಶುದ್ಧಿಕರಿಸಿದ ನೀರನ್ನು ನಗರಕ್ಕೆ ಸರಬರಾಜು ಮಾಡಲಾಗುತ್ತಿದೆ. ಕೆರೆಗೆ ಸುತ್ತಲೂ ತಂತಿ ಬೇಲಿ, ಕಬ್ಬಿಣದ ಸರಳು, ಕಲ್ಲು, ಸಿಮೆಂಟ್ ಮಿಶ್ರಿತ ಕಂಪೌಂಡ ನಿರ್ಮಿಸಿ

ಕೆರೆಯನ್ನು ಸಂರಕ್ಷಿಸಲಾಗಿದೆ. ಕೆರೆಯಲ್ಲಿ ತುಂಬಿದ ಹೂಳನ್ನು ಆಗಾಗ ತೆಗೆದು ಸ್ವಚ್ಛಗೊಳಿಸಲಾಗುತ್ತಿದ್ದು, ಯಾವುದೇ ರೀತಿಯ ಘನತ್ಯಾಜ್ಯ ಕೆರೆಗೆ ಪ್ರವೇಶಿಸುವುದಿಲ್ಲ. ಏಕೆಂದರೆ ಸೂಕ್ತ ಭದ್ರತೆಯ ಕಣ್ಣಾಗವಲಿನಲ್ಲಿ ಈ ಕೆರೆಗೆ ಕಾವಲುಗಾರರಿದ್ದಾರೆ. ಮಹಾರಾಜರ ಜನಪಯೋಗಿ ಕೆಲಸಕಾರ್ಯ ಇಂದಿಗೂ ಸಹ ಜನರಲ್ಲಿ ಉಳಿದಿದೆ.

**ಗರಡಿ ಮನೆ(ತಾಲೀಮ ಮನೆ):** ಮುಧೋಳದ ಮಧ್ಯಭಾಗದಲ್ಲಿ ವೆಂಕಟರಾವ್ ಘೋರ್ಪಡೆಯವರು ಗರಡಿ ಮನೆ ನಿರ್ಮಿಸಿದ್ದಾರೆ. ಇದು ರಾಜರ ಕುಸ್ತಿ ಕ್ರೀಡೆಯ ಪ್ರೀತಿ ವಿಶ್ವಾಸಕ್ಕೆ ಸಾಕ್ಷಿಯಂತಿದೆ. ಇಡಿಯಾದ ಗರಡಿ ಮನೆಯನ್ನು ಕಪ್ಪು ಕಲ್ಲಿನಿಂದ, ಗಾರೆಗಚ್ಚು ಉಪಯೋಗಿಸಿ ನಿರ್ಮಿಸಿದ್ದಾರೆ. ಗರಡಿ ಮನೆಯಲ್ಲಿ ಕಸರತಿಗಾಗಿ ಕಲ್ಲು, ಕಟ್ಟಿಗೆಯ ಆಯುಧಗಳು ಸಹ ಕಂಡುಬರುತ್ತವೆ. ಈ ಗರಡಿ ಮನೆಯಲ್ಲಿ ತಾಲೀಮ ಮಾಡಿ ಪಳಗಿದ ಕುಸ್ತಿ ಪಟು(ಜಟ್ಟಿ)ಗಳು ಮೈಸೂರು ದಸರಾ, ರಾಜ್ಯ, ಹೊರ ರಾಜ್ಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡು ಅನೇಕ ಬಹುಮಾನ, ಫಲಕ, ಡಾಲ, ಗಧೆ, ಬೆಳ್ಳಿ ಕಡಗ ಇತ್ಯಾದಿಗಳನ್ನು ಪಡೆದುಕೊಳ್ಳುವುದರ ಮೂಲಕ ಮುಧೋಳದ ಗರಡಿ ಮನೆಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

**ಮರಾಠಿ ಮತ್ತು ಕನ್ನಡದ ಶಾಲೆ:** ಮುಧೋಳದಲ್ಲಿ ಮುಖ್ಯವಾಗಿ ಆಡಳಿತ ಭಾಷೆಯು ಮರಾಠಿಯಾಗಿತ್ತು. ಹಾಗಾಗಿ ಇಲ್ಲಿ ಹೆಚ್ಚಾಗಿ ಮರಾಠಿ ಶಾಲೆಗಳನ್ನು ಮಹಾರಾಜರು ಆರಂಭಿಸಿದ್ದರು. ಸಂಸ್ಥಾನದಲ್ಲಿ ಅಧಿಕಾರಿಗಳಾಗಿದ್ದ ಭಂಟನೂರಿನವರಾದ ಶ್ರೀ ರಾಮಣ್ಣ ಸೊನ್ನದ ಅವರ ಪ್ರಯತ್ನದ ಫಲವಾಗಿ ಮುಧೋಳ ಹಾಗೂ ಮುಧೋಳ ವ್ಯಾಪ್ತಿಯ ಪ್ರದೇಶಗಳಲ್ಲಿ ಕನ್ನಡ ಶಾಲೆಗಳು ಪ್ರಾರಂಭವಾದವು. ರಾಜರು ಪ್ರಾರಂಭಿಸಿದ ಶಾಲೆಗಳು ಇಂದಿಗೂ ಕಾರ್ಯನಿರ್ವಹಿಸುತ್ತಿರು ವುದು ಹೆಮ್ಮೆಯ ವಿಷಯವಾಗಿದೆ.

**ಅರಮನೆ:** ಮುಧೋಳ ಸಂಸ್ಥಾನಿಕರು ತಮಗಾಗಿ ಸುವ್ಯವಸ್ಥಿತವಾದ ಅರಮನೆಯನ್ನು ನಿರ್ಮಿಸಿಕೊಂಡಿದ್ದಾರೆ. ಈ ಅರಮನೆ ಸುತ್ತಲೂ ಕಂಪೌಂಡನಿಂದ ಸಂರಕ್ಷಿಸಲ್ಪಟ್ಟಿದೆ. ಇಲ್ಲಿಯ ಪರಿಸರಕ್ಕೆ ಹೊಂದಾಣಿಕೆಯಾಗುವ ರೀತಿಯಲ್ಲಿ ನಿರ್ಮಿಸಲಾಗಿದೆ. ಅರಮನೆಯಲ್ಲಿ ಕೇವಲ ಪರಿಕರಗಳು ಮಾತ್ರ ಇದ್ದು, ಸಂಸ್ಥಾನದ ಕುಟುಂಬಸ್ಥರಿಗೆ ಪ್ರವೇಶವು ಸೀಮಿತವಾಗಿದ್ದು, ಸಂಸ್ಥಾನಿಕರ ವಂಶಸ್ಥರು ಮಹಾರಾಷ್ಟ್ರದ ಪುಣೆಯಲ್ಲಿ ನೆಲೆನಿಂತಿದ್ದಾರೆ. ಆದರೆ ಮುಧೋಳ ಅರಮನೆಗೆ ಹಬ್ಬ ಹರಿದಿನಗಳಲ್ಲಿ ಬಂದು ಭೇಟಿ ನೀಡುತ್ತಾರೆ. ಮುಧೋಳ ಅರಮನೆ ಸಂಸ್ಥಾನಿಕರ ಖಾಸಗಿ ಸ್ವತ್ತಾಗಿರುವುದರಿಂದ ಸಾರ್ವಜನಿಕರಿಗೆ ಪ್ರವೇಶ ನಿಷೇಧಿಸಲಾಗಿದೆ.

**ಲೋಕಾಪುರ ಬಂಗಲೆ:** ಪಂಚಮಹಲ ಒಳಗೊಂಡ ಮುಧೋಳ ಸಂಸ್ಥಾನದಲ್ಲಿ ಲೋಕಾಪುರ ಒಂದು ಮಹಲಾಗಿತ್ತು. ರಾಜರು ಲೋಕಾಪುರಕ್ಕೆ ಆಗಾಗ ಬೇಟೆಯಾಡಲು ಬರುತ್ತಿದ್ದರು.

ಹಾಗಾಗಿ ತಮಗೆ ಮತ್ತು ಸೈನಿಕರಿಗೆ ವಾಸ್ತವ್ಯಕ್ಕಾಗಿ ಬಂಗಲೆಯನ್ನು ನಿರ್ಮಿಸಿದ್ದಾರೆ. ಇದರ ಕುರಿತು ಈಗಾಗಲೇ ವಿವರಿಸಲಾಗಿದ್ದು, ಲೋಕಾಪುರ ಬಂಗಲೆ ಇಂದು ರಾಜಾ ಬೈರವಸಿಂಗ ಘೋರ್ಪಡೆ ಸಂಯುಕ್ತ ಪದವಿಪೂರ್ವ ಮಹಾವಿದ್ಯಾಲಯವಾಗಿ ಸಾವಿರಾರು ಬಡ ಮಕ್ಕಳಿಗೆ ಅಕ್ಷರ ಜ್ಞಾನವನ್ನು ನೀಡುತ್ತಿದೆ. ೧೯೩೮-೪೦ರಲ್ಲಿ ಈ ಬಂಗಲೆಯನ್ನು ಮಹಾರಾಜರು ನಿರ್ಮಿಸಿದ್ದಾರೆ. ಆದರೆ ೧೯೬೧ರಲ್ಲಿ ಆರ್.ಬಿ.ಜಿ.ಶಾಲೆ ಪ್ರಾರಂಭಗೊಂಡಿತು.

**ಸಂಸ್ಥಾನಿಕರ ಇತರೆ ಕೆಲಸಕಾರ್ಯಗಳು:** ಮುಧೋಳದಲ್ಲಿ ಗ್ರಂಥಾಲಯ, ಶಾಲೆ, ರಸ್ತೆಗಳ ನಿರ್ಮಾಣ, ನೀರು ಸರಬರಾಜು, ಅಂಚೆ ಕಚೇರಿ, ಮುಧೋಳ ನಗರಕ್ಕೆ ಪ್ರವೇಶಿಸಲು ಸುರಕ್ಷಿತ ರಸ್ತೆ ಮಾರ್ಗ, ಅಲ್ಲಲ್ಲಿ ನದಿ, ಹಳ್ಳ, ಕೊಳ್ಳ ಇರುವ ಸ್ಥಳಗಳಲ್ಲಿ ಸೇತುವೆ. ಉದಾಹರಣೆಗೆ ಯಾದವಾಡ ಸೇತುವೆ, ಚಿಂಚಖಂಡಿ ಸೇತುವೆ, ಹಾಗೇನೆ ಶ್ರೀ ಗಣೇಶ ಮಹೋತ್ಸಹ ವಿಜೃಂಭಣೆಯಾಗಿ ಆಚರಣೆ ಇತ್ಯಾದಿಯಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕವಾಗಿ ಹಲವಾರು ಜನಪಯೋಗಿ ಕೊಡುಗೆಗಳನ್ನು ಮುಧೋಳ ಸಂಸ್ಥಾನಿಕರು ನೀಡಿದ್ದಾರೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ಹಾಗೂ ಇಂದು ಭಾರತೀಯ ಸೈನ್ಯದಲ್ಲಿ ಗಡಿ ರಕ್ಷಣೆಗೆ ಆಯ್ಕೆಯಾಗಿರುವ 'ಮುಧೋಳ ಬೇಟೆ' ನಾಯಿಯು ಸಹ ಮಹಾರಾಜರ ಪಾಲನೆ, ಪೋಷಣೆಯ ದ್ಯೂತಕವಾಗಿ ಇಂದು ನಮ್ಮೆದುರಿಗಿದೆ. ಮುಧೋಳ ತಾಲೂಕಿನಲ್ಲಿ ಹೆಚ್ಚಾಗಿ ಮುಧೋಳ ಬೇಟೆ ನಾಯಿಗಳನ್ನು ಸಾಕುತ್ತಿರುವುದರಿಂದ ಇತ್ತೀಚೆಗೆ ಲೋಕಾಪುರ ಹತ್ತಿರ ತಿಮ್ಮಾಪುರ ಗ್ರಾಮದಲ್ಲಿ ಮುಧೋಳ ಬೇಟೆ ನಾಯಿ ತಳಿ ಸಂರಕ್ಷಣೆ ಮತ್ತು ಸಂಶೋಧನಾ ಕೇಂದ್ರ ಪ್ರಾರಂಭವಾಗಿರುವುದರಿಂದ ಮುಧೋಳ ತಳಿ ನಾಯಿಗಳು ಮತ್ತಷ್ಟು ಬೇಡಿಕೆ ಬಂದಿದೆ. ಈ ನಾಯಿಯನ್ನು ಹೆಚ್ಚಾಗಿ ಬೇಟೆ ಮತ್ತು ಕಾವಲಿಗಾಗಿ ಬಳಸಿಕೊಳ್ಳಲಾಗುತ್ತದೆ. ಮುಧೋಳ ಸಂಸ್ಥಾನಿಕರ ಕಾಲದಲ್ಲಿ ಹೊಸಕೋಟೆ, ದಾದನಟ್ಟಿಯಲ್ಲಿ ಕಿಲ್ಲೆ(ಬುರುಜು)ಗಳನ್ನು ನಿರ್ಮಿಸಿದ್ದಾರೆ. ಇದರಿಂದ ಈ ಊರಿಗೆ ಕಿಲ್ಲೆ ಹೊಸಕೋಟೆ ಎಂದು ಕರೆಯುತ್ತಾರೆ. ಈ ಕಿಲ್ಲೆಗಳು ಇಂದಿಗೂ ಸಹ ಗಟ್ಟಿಮುಟ್ಟಾಗಿವೆ.

ವೆಂಕಟರಾವ್ ರಾಜರ ಕಾಲದಲ್ಲಿ ಬೇಟೆ ನಾಯಿ ಮತ್ತು ಕುದುರೆಗೆ ಪ್ರಸಿದ್ಧಿ ಪಡೆದಿತ್ತು. ಕುಸ್ತಿ ಅಖಾಡ, ಕುದುರೆ ಅಖಾಡ ಮುಧೋಳದಲ್ಲಿದ್ದು, ಆಂಗ್ಲರ ಮತ್ತು ಮರಾಠರ ನಡುವಿನ ಯುದ್ಧದಲ್ಲಿ ಮುಧೋಳದ ಸೈನಿಕರು ಮತ್ತು ಕುದುರೆಗಳ ಪಾತ್ರ ಬಹಳ ಮುಖ್ಯವಾಗಿತ್ತು.[೨] ಮುಧೋಳ ಸುತ್ತಮುತ್ತಲಿನ ಪರಿಸರವೇ ಇವೆಲ್ಲ ಕೆಲಸ ಕಾರ್ಯಗಳು ಯಶಸ್ವಿಯಾಗಲು ಬಹುಮುಖ್ಯ ಕಾರಣವೆಂದು ಗುರುತಿಸಬಹುದು. ಕರಣಸಿಂಗನ ಮಗ ಭೀಮಸೇನನು ತನ್ನ ಎದುರಾಳಿಗಳನ್ನು ಚಾಣಾಕ್ಷ ಬುದ್ಧಿ ಉಪಯೋಗಿಸಿ ಕೋಟೆ ಹತ್ತಲು

ಹಲ್ಲಿ ಜಾತಿಗೆ ಸೇರಿದ 'ಉಡ'ವನ್ನು ಬಳಸಿದನು. ಇದರಿಂದ ಅವನಿಗೆ ಹೋರಾಟದಲ್ಲಿ ಜಯ ಲಭಿಸಿತು 'ಉಡವನ್ನು' ಮರಾಠಿ ಭಾಷೆಯಲ್ಲಿ 'ಘೋರ್ಪಡೆ ಎಂದು ಕರೆಯುತ್ತಾರೆ. ಆ ಕಾರಣದಿಂದ ಇವರ ವಂಶಸ್ಥರಿಗೆ 'ಬೋಸಾಜಿ' ಜೊತೆಗೆ 'ಘೋರ್ಪಡೆ'ಎಂಬ ನಾಮಧೇಯವು ಚಲಾವಣೆಗೆ ಬಂದಿತು.[೬೩] ಹೀಗೆ ಮುಧೋಳ ಸಂಸ್ಥಾನಿಕರ ಹೆಸರು ಕಾಲಾಂತರದಲ್ಲಿ ಪರಿವರ್ತನೆಗೊಂಡು, ಅದುವೆ ಚರಿತ್ರೆಯ ಪುಟಗಳಲ್ಲಿ ಅಚ್ಚಳಿಯದೇ ದಾಖಲಾಗಿದೆ. ಸಂಸ್ಥಾನಿಕರ ಚರಿತ್ರೆ, ತೆರಿಗೆ, ಆಡಳಿತ, ಕೆಲಸಕಾರ್ಯ ಫರ್ಮಾನು ಕುರಿತು ದಪ್ತರ್‌ಗಳಲ್ಲಿ ದಾಖಲಿಸುತ್ತಿದ್ದರು.

ಮುಧೋಳ ಸಂಸ್ಥಾನದ ಆಡಳಿತದ ಚುಕ್ಕಾಣಿಯನ್ನು ೧೮೮೪ರಲ್ಲಿ ಮಾಲೋಜಿರಾವ್ ಹಿಡಿದರು. ೧೯೦೪ರಲ್ಲಿ ಇವರಿಗೆ ಸರ್ವಾಧಿಕಾರ ಪ್ರಾಪ್ತವಾಯಿತು. ಮಹಾರಾಜರು ಬಡವರ ಮೇಲಿನ ಕಾಳಜಿಗೊಸ್ಕರ ತನ್ನ ರಾಜ್ಯದಲ್ಲಿ ಉನ್ನತ ಶಿಕ್ಷಣವನ್ನು ಪ್ರಾರಂಭಿಸಿದರು. ಅನೇಕ ಸಂಘ ಸಂಸ್ಥೆಗಳಿಗೆ ದಾನ ದತ್ತಿಯನ್ನು ನೀಡಿದರು. ಇದರಿಂದ ಇವು ಶಿಕ್ಷಣ ಸಂಸ್ಥೆಗಳಾಗಿ ಇಂದು ತಲೆ ಎತ್ತಿ ನಿಂತಿವೆ. ಅವುಗಳೆಂದರೆ ರಾಜ ಮಾಲೋಜಿರಾವ್ ಘೋರ್ಪಡೆ ಶಿಕ್ಷಣ ಸಂಸ್ಥೆ, ಲೋಕಾಪುರದಲ್ಲಿ ರಾಜಾ ಭೈರವಸಿಂಗ್ ಘೋರ್ಪಡೆ ಶಾಲೆ ಚಿರಸ್ಥಾಯಿಗಳಾಗಿ ಉಳಿದು ಇಂದಿಗೂ ಅಕ್ಷರ ಜ್ಞಾನದ ಮೂಲಕ ಶಿಕ್ಷಣ ವಂಚಿತರಿಗೆ ಶಿಕ್ಷಣವನ್ನು ನೀಡುವ ಮಹತ್ವದ ಕೆಲಸದಲ್ಲಿ ತೊಡಗಿಕೊಂಡಿವೆ ಎಂಬುದನ್ನು ಇಲ್ಲಿ ಗುರುತಿಸಬಹುದು.

**ಕೊನೆ ಟಿಪ್ಪಣಿಗಳು**


೧. ನರಹರಿ ವಿ., ೨೦೦೨, ಕ್ರೈಸ್ತಮತ, ಪು.೨೨

೨. ಯಳನಾಡು ಅಂಜನಪ್ಪ, ಧರ್ಮ ಮತ್ತು ಮುಕ್ತ ವಿಚಾರ, ಪು.೯

೩. ನಂದಿಮಠ ಎಸ್.ಸಿ., ೨೦೦೯, ಕನ್ನಡ ನಾಡಿನ ಚರಿತ್ರೆ, ಭಾಗ ೨, ಪು.೧೬೧

೪. ಶೇಷ ನವರತ್ನ, ೧೯೯೮, ಜಾಗತಿಕ ಧರ್ಮಗಳು, ಪು.೧೬೦

೫. ನಟರಾಜ ಎ.ಎಸ್., ದೇವರು ಸಮಗ್ರ ಚಿಂತನೆ, ಪು.೨೨೨

೬. ಅದೇ, ಪು.೨೨೩

೭. ಶೇಷ ನವರತ್ನ, ೧೯೯೮, ಪೂರ್ವೋಕ್ತ, ಪು.೧೬೮

೮. ಅದೇ, ಪು.೧೭೯-೧೮೦

೯. ನಟರಾಜ ಎ.ಎಸ್., ಪೂರ್ವೋಕ್ತ, ಪು.೨೨೪

೧೦.ಅದೇ, ಪು.೨೨೪

೧೧.ಅದೇ, ಪು.೨೨೪

೧೨.ಸ್ವಾಮಿ ಡಾ.ಐ.ಅಂತಪ್ಪ, ೨೦೦೧, ಉತ್ತರ ಕರ್ನಾಟಕದಲ್ಲಿ ಕ್ರೈಸ್ತಧರ್ಮ ಉಗಮ(೧೮೦೦ಕ್ಕೂ ಹಿಂದೆ), ಪು.೧೭೬

೧೩.ಮುನಿಸ್ವಾಮಿ ಆರ್.(ಪ್ರಸಂ.), ೧೯೯೯, ವಿಜಾಪುರ ಜಿಲ್ಲಾ ಗ್ಯಾಸೆಟಿಯರ್, ಪು.೧೭೦

೧೪.ಅದೇ, ಪು.೧೦೮೨

೧೫.ನರಹರಿ ವಿ., ೨೦೦೨, ಪೂರ್ವೋಕ್ತ, ಪು.೮೪

೧೬.ಯಳನಾಡು ಅಂಜನಪ್ಪ ಪೂರ್ವೋಕ್ತ, ಪು.೧೪೫

೧೭.ಜೋಸೆಫ್ ರಾಯ್(ಇಂಪ್ರಿಮೆಂಟರ್), ೨೦೧೧, ಪವಿತ್ರ ಬೈಬಲ್ ಕರ್ನಾಟಕ ಪ್ರಾಂತೀಯ ಕಥೋಲಿಕ್, ಪು.೩೨೬

೧೮.ಅದೇ, ಪು.೫೧೮

೧೯.ಅದೇ, ಪು.೫೧೧

೨೦.ಅಂಬಳಿಕೆ ಹಿರಿಯಣ್ಣ(ಪ್ರಸಂ.), ೨೦೧೫, ಕರ್ನಾಟಕ ಗ್ರಾಮ ಚರಿತ್ರೆ ಕೋಶ, ಬಾಗಲಕೋಟೆ, ಭಾಗ ೧, ಪು.೩೩೮

೨೧.ಅದೇ, ಪು.೪೫೮

೨೨.ಅದೇ, ಪು.೨೬೫

೨೩.ಅದೇ, ಪು.೧೫೫

೨೪.ಕನ್ನಡ ಸಂಶೋಧನಾ ಸಂಸ್ಥೆ(ಕೆ.ಆರ್.ಆಯ್) ರಿಪೋಟರರ್ಸ್, ೧೯೪೨-೪೩, ಲೋಕಾಪುರ

೨೫.ಅಂಬಳಿಕೆ ಹಿರಿಯಣ್ಣ(ಪ್ರಸಂ.), ೨೦೧೫, ಪೂರ್ವೋಕ್ತ, ಪು.೯೦

೨೬. ದೇವರಕೊಂಡಾರೆಡ್ಡಿ(ಪ್ರಸಂ.), ೨೦೧೫, ಇತಿಹಾಸ ದರ್ಶನ, ಸಂಪುಟ ೨೦, ಪು.೩೩೭

೨೭. ದೇವರಕೊಂಡಾರೆಡ್ಡಿ(ಮು.ಸಂ.), ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯, ಬಾಗಲಕೋಟೆ ಜಿಲ್ಲೆ, ಪು.೩, ಶಾಸನ ಸಂಖ್ಯೆ ೪

೨೮. ಅದೇ, ಪು.೫-೬, ಶಾಸನ ೮

೨೯. ಅದೇ, ಪು.೧

೩೦. ಅದೇ, ಪು.೨

೩೧. ಅದೇ, ಪು.೨-೩

೩೨. ಅದೇ, ಪು.೩

೩೩. ಅದೇ, ಪು.೪

೩೪. ಅದೇ, ಪು.೪-೫

೩೫. ಅದೇ, ಪು.೫

೩೬. ಅದೇ, ಪು.೫-೬

೩೭. ಅದೇ, ಪು.೬-೭

೩೮. ಅದೇ, ಪು.೭

೩೯. ಅದೇ, ಪು.೭-೮

೪೦. ಅದೇ, ಪು.೮

೪೧. ಅದೇ, ಪು.೯

೪೨. ಅದೇ, ಪು.೯-೧೦

೪೩. ಅದೇ, ಪು.೧೦

೪೪. ಅದೇ, ಪು.೧೧

೪೫. ಅದೇ, ಪು.೧೧-೧೨

೪೬. ಮಟೋಳಿ ಎಸ್.ಬಿ., ೨೦೦೮, ಜಮಖಂಡಿಯ ಇತಿಹಾಸ ದರ್ಪಣ(ಆರಂಭದಿಂದ ಕ್ರಿ.ಶ.೧೯೪೮ರ ವರಗೆ), ಪು.೩೦೧

೪೭. ಅದೇ, ಪು.೩೦೧-೩೦೨

೪೮. ಅದೇ, ಪು.೩೦೩-೩೦೪

೪೯. ಅದೇ, ಪು.೩೦೪-೩೦೫

೫೦. ಅದೇ, ಪು.೩೦೫

೫೧.ಅದೇ, ಪು.೩೦೫-೩೦೬

೫೨.ಅದೇ, ಪು.೩೦೭-೩೦೮

೫೩.ಅದೇ, ಪು.೩೦೮

೫೪.ಅದೇ, ಪು.೩೦೮-೩೦೯

೫೫.ಅದೇ, ಪು.೩೧೦

೫೬.ಅದೇ, ಪು.೩೧೦-೩೧೧

೫೭.ಅದೇ, ಪು.೩೧೩

೫೮.ಅದೇ, ಪು.೩೧೩-೩೧೪

೫೯.ಅದೇ, ಪು.೩೧೮-೩೧೯

೬೦.ಅದೇ, ಪು.೩೨೦

೬೧.ಮುನಿಸ್ವಾಮಿ ಆರ್.(ಪ್ರ.ಸಂ.), ೧೯೯೯, ಪೂರ್ವೋಕ್ತ, ಪು.೧೬೫-೧೬೬

೬೨.ಸಂಗಮೇಶ ಕಲ್ಯಾಣಿ, ೨೦೧೦, ಘೋರ್ಪಡೆ ಘರಾಣಾ, ಮಂಟಪ ಮಾಲೆ, ಪು.೨೦

೬೩.ಅದೇ, ಪು.೩೦-೩೧

# ಅಧ್ಯಾಯ: ಐದು

## ವಸಾಹತು ಕಾಲದ ಸ್ಮಾರಕಗಳ ಕಾರ್ಯವಿಧಾನ

೫.೧. ಶೈಕ್ಷಣಿಕ

೫.೨. ಧಾರ್ಮಿಕ

೫.೩. ಲೋಕೋಪಯೋಗಿ

೫.೪. ಆರ್ಥಿಕ

## ಅಧ್ಯಾಯ: ಐದು

# ವಸಾಹತು ಕಾಲದ ಸ್ಮಾರಕಗಳ ಕಾರ್ಯವಿಧಾನ

ಭಾರತದಲ್ಲಿ ವ್ಯವಸ್ಥಿತವಾದ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದ ಶ್ರೇಯಸ್ಸು ಬ್ರಿಟಿಷರಿಗೆ ಸಲ್ಲುತ್ತವೆ. ೧೮೫೪ರಲ್ಲಿ ಚಾರ್ಲ್ಸ್ ವುಡ್ಸ್ ಪ್ರಥಮ ಬಾರಿಗೆ ತನ್ನ ವರದಿಯಲ್ಲಿ ಶಿಕ್ಷಣ ನೀಡುವ ಜವಾಬ್ದಾರಿಯನ್ನು ಸರ್ಕಾರದ್ದು ಎಂದು ಘೋಷಿಸಿರುವ ಮೂಲಕ ಭಾರತೀಯರಿಗೆ ಸಮರ್ಪಕ ಶಿಕ್ಷಣವನ್ನು ಪ್ರತಿಪಾದಿಸಿದನು. ಅಂದಿನ ಶೈಕ್ಷಣಿಕವಾದ ಯೋಜನೆಗಳು ಇಂದಿಗೂ ಸಹ ಪ್ರಸ್ತುತ ಮತ್ತು ಅವಶ್ಯಕವಾಗಿ ಮುಂದುವರಿಯುತ್ತಲೇ ಇವೆ. ಭಾರತದಲ್ಲಿ ಕ್ರೈಸ್ತ ಧರ್ಮ ಪ್ರಸಾರ ಮತ್ತು ಮತಾಂತರದ ಕಾರಣ ಹಿಂದೂ ಧರ್ಮದಲ್ಲಿದ್ದಂತಹ ಕೆಲವೊಂದು ಮೌಢ್ಯ ಆಚರಣೆಗಳನ್ನು ಸರಳೀಕರಣಗೊಳಿಸಲಾಯಿತು. ಏಕೆಂದರೆ ಸರಳ ಆಚರಣೆ ಮಾನವೀಯ ಮೌಲ್ಯಗಳನ್ನು ಗೌರವಿಸುವಂತಹ ಕ್ರೈಸ್ತ ಮತದ ಆಚರಣೆಗಳು ವಸಾಹತು ಕಾಲದ ಸಂದರ್ಭದಲ್ಲಿ ಜನರನ್ನು ಆಕರ್ಷಿಸುವಂತೆ ಮಾಡಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕ್ರೈಸ್ತರು ಚರ್ಚಗಳ ಮೂಲಕ ಏಸುವಿನ ಹೆಸರಿನ ಮೇಲೆ ಅನೇಕ ಪವಾಡ ಸಾದೃಶಗಳನ್ನು ಮಾಡಿ ಜನರನ್ನು ಕ್ರೈಸ್ತಧರ್ಮದತ್ತ ಆಕರ್ಷಿಸಿದರು.

ಭಾರತದಲ್ಲಿ ಮೂಲಭೂತ ಸೌಕರ್ಯ, ಸಕಲ ಸೌಲಭ್ಯ ವಂಚಿತ ಜನಸಮುದಾಯಗಳಿಗೆ ಕ್ರೈಸ್ತ ಮಿಷನರಿಗಳು ಸಹಾಯ ಹಸ್ತ ಚಾಚಿದವು. ಅದರಂತೆ ಬ್ರಿಟಿಷ್ ಅಧಿಕಾರಿಗಳು ಮುಖ್ಯವಾಗಿ ಮೊದಲು ತಮ್ಮ ಅನುಕೂಲಕ್ಕಾಗಿ ತಮ್ಮ ರಕ್ಷಣೆಗಾಗಿ ಅನೇಕ ಶೈಕ್ಷಣಿಕ, ಧಾರ್ಮಿಕ, ಲೋಕೋಪ ಯೋಗಿ ಕೆಲಸ ಕಾರ್ಯಗಳನ್ನು ಕೈಗೊಂಡರು. ಈ ಸಮಾಜ ಸೇವೆಯ ಕೆಲಸಗಳು 'ಸಕಲರಿಗಾಗಿ ನಾವು ಕೈಗೊಂಡಿದ್ದೇವೆ' ಎಂದು ಜನರನ್ನು ನಂಬಿಸಿದರು. ಬ್ರಿಟಿಷರು ರಸ್ತೆ ಮತ್ತು ರೈಲು ಸೇತುವೆ, ಚರ್ಚ್, ನಿರೀಕ್ಷಣಾ ಮಂದಿರ, ಶಾಲೆ, ಆಸ್ಪತ್ರೆ, ಆಡಳಿತ ಕಚೇರಿ ಇತ್ಯಾದಿಗಳನ್ನು ಮೊದಲು ತಮ್ಮ ಹಿತಕ್ಕಾಗಿ ಸ್ಥಾಪಿಸಿಕೊಂಡರು. ನಂತರದಲ್ಲಿ ಇವುಗಳಿಂದ ಜನಮಾನ್ಯರಿಗೆ ನಿಜಕ್ಕೂ ಅನುಕೂಲಕರವಾಯಿತು. ಕಾಲಾಕ್ರಮೇಣ ವಸಾಹತು

ಕಾಲದ ಸ್ಮಾರಕಗಳ ಸೇವೆಯು ಸರ್ವಜನರಿಗೂ ಉಪಯೋಗವಾಗಲಾರಂಭಿಸಿತು. ಅಂತಹ ಸ್ಮಾರಕಗಳ ಕಾರ್ಯವಿಧಾನ, ಕೊಡುಗೆಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

## ೫.೧. ಶೈಕ್ಷಣಿಕ ಕೊಡುಗೆಗಳು ಅಥವಾ ಶೈಕ್ಷಣಿಕ ಸೇವೆ

ಯೇಸು ಕ್ರಿಸ್ತ ಜಗತ್ತಿಗೆ ಆಗಮಿಸಿದ್ದು ನವ ಜೀವನವನ್ನು ನೀಡುವುದಕ್ಕಷ್ಟೆ ಅಲ್ಲ, ಬದಲು ಮಾನವರ ಶೈಕ್ಷಣಿಕ ಬದುಕನ್ನು ಸರ್ವವ್ಯಾಪ್ತಿಗೊಳಿಸಿ ಬೆಳೆಸುವುದಕ್ಕೂ ಕೂಡಾ. “ಕಳ್ಳ ಕದಿಯಲು, ಕೊಲೆ ಮಾಡಲು ಮತ್ತು ನಾಶ ಮಾಡಲು ಬರುತ್ತಾನೆ. ಆದರೆ ನಾನಾದರೋ ನಿತ್ಯ ಜೀವ ನೀಡಲು ಯಥೇಚ್ಛವಾಗಿ ನೀಡಲು ಬಂದಿದ್ದೇನೆ ಎಂದು ಕ್ರಿಸ್ತನು ಹೇಳಿದ ಮಾತುಗಳನ್ನು ಆದರ್ಶವಾಗಿರಿಸಿಕೊಂಡು ವ್ಯಕ್ತಿಯನ್ನು ಸಶಕ್ತಗೊಳಿಸುವ, ಶುಭ ಸಂದೇಶದಿಂದ ಪ್ರಭಾವಿತವಾದ ಸಮಾಜ ನಿರ್ಮಿಸುವ ಜೊತೆಗೆ ಸಮಾನತೆಯ ಆಧಾರದ ಭ್ರಾತೃತ್ವ ರೂಪಿಸುವ ಮಾನವ ವ್ಯಕ್ತಿತ್ವದ ಸರ್ವತೋಮುಖ ಬೆಳವಣಿಗೆಯ ಗುರಿ ಸಾಧಿಸುವುದು ಕಥೋಲಿಕ ಶಿಕ್ಷಣ ಸಂಸ್ಥೆಗಳ ದ್ದಾಗಿದೆ.[೧] ಶೈಕ್ಷಣಿಕ ಸೇವೆಯ ಜೊತೆಗೆ ಕ್ರೈಸ್ತ ಶಾಲೆಗಳು ಔಪಚಾರಿಕ ಶಿಕ್ಷಣ ಕ್ಷೇತ್ರದಲ್ಲಿಯೂ ಗಣನೀಯ ಸೇವೆಯನ್ನು ಸಲ್ಲಿಸುತ್ತಿವೆ. ಅಲ್ಲದೇ ಅಂಗವಿಕಲರಿಗೆ ಹಾಗೂ ವಿಶೇಷ ಗಮನೀಯ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುವುದಲ್ಲಿಯೂ ಮುಂದಿವೆ. ಸಾಮಾಜಿಕ ಸೇವಾ ಸಂಸ್ಥೆಗಳೂ ಈ ದಿಕ್ಕಿನಲ್ಲಿ ಇಂದಿಗೂ ಸಹ ಕಾರ್ಯ ನಿರ್ವಹಿಸುತ್ತಿವೆ.

ಸಮಾಜದಲ್ಲಿ ದುರ್ಬಲ ವರ್ಗಗಳೆಂದರೆ, ವಿಶೇಷವಾಗಿ ದಲಿತರು, ಬುಡಕಟ್ಟು ಜನಾಂಗ, ಹಿಂದುಳಿದವರ್ಗ, ಸಾಮಾಜಿಕ, ಆರ್ಥಿಕವಾಗಿ ದುರ್ಬಲರು, ವಲಸಿಗರು ಹಾಗೂ ನೆಲೆಯಿಲ್ಲದವರು, ಹೆಣ್ಣುಮಕ್ಕಳು ಇತ್ಯಾದಿ ಈ ಪದವ್ಯಾಪ್ತಿಗೆ ಒಳಪಡುತ್ತಾರೆ. ಈ ಜನರಿಗೆ ಹೆಚ್ಚು ಗಮನ ನೀಡಬೇಕಾಗಿದೆ. ಜಾತಿಪದ್ಧತಿಯ ಕಾರಣದಿಂದ ಆದಿಕಾಲದಿಂದಲೂ ನಮ್ಮ ದೇಶದಲ್ಲಿ ದುರ್ಬಲ ವರ್ಗಗಳ ಸಂಖ್ಯೆ ಅಗಾಧವಾಗಿದೆ. ರಾಷ್ಟ್ರದಲ್ಲಿ ಈಗಲೂ ಮುಂದುವರಿದಿರುವ ಜಾತಿ ತಾರತಮ್ಯ ಧರ್ಮ ಸಭೆಯ ಮೇಲೂ ಹೆಚ್ಚು ಪ್ರಭಾವ ಬೀರಿರುವುದು ದುಃಖದ ಸಂಗತಿಯಾಗಿದೆ. ಇದನ್ನು ಮಹಾ ಪಾಪಕರವೆಂದು ಭಾರತದ ಧರ್ಮಾಧ್ಯಕ್ಷರು ಮನಸಾರೆ ಖಂಡಿಸಿದ್ದಾರೆ. ಜಾಗತಿಕ ರಣದ ಅಲೆಯಲ್ಲಿ ಇಂದು ಲಕ್ಷಾಂತರ ಮಂದಿ ಜೀವನದ ಕನಿಷ್ಠ ಅಗತ್ಯಗಳಿಂದಲೂ ವಂಚಿತರಾಗಿ ಬಡವರಾಗಿ ಮಾರ್ಪಟ್ಟಿದ್ದರಿಂದ ದೇಶದಲ್ಲಿ ದುರ್ಬಲ ವರ್ಗಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿವೆ.[೨] ರಾಷ್ಟ್ರದ ಬದುಕಿನ ಮುಖ್ಯ ವಾಹಿನಿಯಲ್ಲಿ ದುರ್ಬಲ ವರ್ಗಗಳು ತಮ್ಮ ನ್ಯಾಯಯುತ ಸ್ಥಾನಮಾನವನ್ನು ಪಡೆದುಕೊಳ್ಳಲಿ, ಗುಣಮಟ್ಟದ ಶಿಕ್ಷಣ ದೊರಕಲು ಸರ್ಕಾರ ಮುಂದಾಗಬೇಕೆಂದು ಬಿಷಪರ

ಆಶಯದಂತೆ ಧರ್ಮಸಭೆಯೆಂಬ ನಾಮದಡಿಯಲ್ಲಿ ಬಡವರ ಬಗ್ಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿಸುವ ನಾವು ರಾಷ್ಟ್ರದ ಬದುಕಿನ ಮುಖ್ಯವಾಹಿನಿಯಲ್ಲಿ ದುರ್ಬಲ ವರ್ಗಗಳು ತಮ್ಮ ನ್ಯಾಯಯುತ ಸ್ಥಾನಮಾನ ಪಡೆದುಕೊಳ್ಳಲೆಂದು ಹಾಗೂ ರಾಷ್ಟ್ರದ ಪ್ರಗತಿಗೆ ಅವರ ಕೊಡಗೆಯೂ ಸಲ್ಲಿತೆಂದು ಆಶಿಸಿ, ರಾಷ್ಟ್ರದ ಪ್ರಗತಿಗೆ ಜನತೆಯ ಕೊಡುಗೆಯೂ ಸಲ್ಲಲ್ಲಿ ಎಂದು ಬಡವರ ಬಗ್ಗೆ ಹೆಚ್ಚು ಕಾಳಜಿಯಿರುವ ಭಾರತದ ಬಿಷಪರುಗಳು ಸಿ.ಬಿ.ಸಿ.ಐ.ನ ಮಹಾನ ಸಮ್ಮೇಳನದಲ್ಲಿ ಈ ಕೆಳಕಂಡಂತೆ ನಿರ್ಧಾರಗಳನ್ನು ತೆಗೆದುಕೊಂಡಿದ್ದಾರೆ.

೧. ನಮ್ಮ ವಿದ್ಯಾಸಂಸ್ಥೆಗಳಲ್ಲಿ ಪ್ರತಿ ಕ್ಯಾಥೋಲಿಕ ಮಗುವಿಗೂ ಪ್ರವೇಶ ದೊರಕುವಂತೆ ಖಾತ್ರಿ ಪಡಿಸಿಕೊಳ್ಳುವುದು. ದಲಿತ/ಬುಡಕಟ್ಟು ಅಥವಾ ಬೇರೆ ಯಾವುದೇ ವರ್ಗದ ಕಥೋಲಿಕ ಮಗುವು, ತನ್ನ ಸಂಪನ್ಮೂಲಗಳ ಕೊರತೆಯ ಕಾರಣ ವಿದ್ಯೆಯಿಂದ ವಂಚಿತವಾಗಬಾರದು. ಕಥೋಲಿಕ ಮಕ್ಕಳ ಬಗ್ಗೆ ಕಥೋಲಿಕ ಶಾಲೆಗಳು ವಿಶೇಷ ಜವಾಬ್ದಾರಿ ಹೊಂದಿವೆಯೆಂಬು ದನ್ನು ನಾವು ಮನಗಂಡಿದ್ದೇವೆ.

೨. ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯ ವಸತಿನಿಲಯ/ಆಶ್ರಯ ಗೃಹಗಳನ್ನು ಸ್ಥಾಪಿಸಬೇಕಿದ್ದು, ಆ ಮೂಲಕ ದುರ್ಬಲ ವರ್ಗಗಳಿಗೆ ಪರಿಣಾಮಕಾರಿ ಶಿಕ್ಷಣ ಒದಗಿಸಲು ಅನುವು ಮಾಡುವುದು.

೩. ಕಥೋಲಿಕ ಶಿಕ್ಷಣ ಸಂಸ್ಥೆಗಳು ದುರ್ಬಲ ವರ್ಗಗಳ ಬಗ್ಗೆ ಮುಖ್ಯವಾಗಿ ಹೆಣ್ಣು ಮಗುವಿನ ಶಿಕ್ಷಣದ ಬಗ್ಗೆ ವಿಶೇಷ ಕಾಳಜಿ ವಹಿಸುವಂತೆ ಖಾತ್ರಿಪಡಿಸಿಕೊಂಡು, ನಮ್ಮದೇ ಒಂದು ಮೀಸಲಾತಿ ನೀತಿಯನ್ನು ದುರ್ಬಲ ವರ್ಗಗಳಿಗಾಗಿ ರೂಪಿಸಬೇಕು. ಅನಾನುಕೂಲತೆಯ ಅಂದರೆ, ಸಾಮಾಜಿಕ, ದೈಹಿಕ ಅಥವಾ ಬೌದ್ಧಿಕವಾಗಿ ಅನಾನುಕೂಲಕ್ಕೊಳಗಾಗಿರುವವನಿಗೆ ವಿಶೇಷ ರೀತಿಯಲ್ಲಿ ನೆರವು ಒದಗಿಸಿ, ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ಅವರನ್ನು ಸೇರಸಿಕೊಳ್ಳಲು ಪ್ರಮುಖವಾಗಿ ಶ್ರಮಿಸುವುದು. ಈ ಪ್ರಕ್ರಿಯೆಯಲ್ಲಿ ನಮ್ಮ ಶಿಕ್ಷಣದ ಪಾಂಡಿತ್ಯ ಕುಂಠಿತವಾದರೂ ಈ ಒಂದು ಪ್ರಾಶಸ್ತ್ಯಪರ ಆಯ್ಕೆಯನ್ನು ನಾವು ಕೈಗೆತ್ತಿಕೊಂಡಿದ್ದೇವೆ. ಶಿಕ್ಷಣವನ್ನು ವ್ಯಾಪರೀಕರಣಗೊಳಿಸುವುದನ್ನು ಖಂಡಿಸುವ ನಾವು ಧರ್ಮಕ್ಷೇತ್ರಗಳ ಅಡಿಯಲ್ಲಿ ಧಾರ್ಮಿಕ ಸಮುದಾಯಗಳ ಅಥವಾ ಇನ್ನಿತರೆ ಸಂಸ್ಥೆ ಹಾಗೂ ವ್ಯಕ್ತಿಗಳಿಂದ ನಡೆಸಲಾಗುವ ಕಥೋಲಿಕ ಶಿಕ್ಷಣ ಸಂಸ್ಥೆಗಳೆಲ್ಲವೂ ಈ ನಮ್ಮ ಯೋಜನೆಯಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಬೇಕೆಂದು ಆಪೇಕ್ಷಿಸುತ್ತೇವೆ. ವಿಶೇಷವಾಗಿ, ನಾವು ಕ್ಯಾಪಿಟೇಶನ್ ಶುಲ್ಕವನ್ನು ಒಪ್ಪಿಕೊಳ್ಳುವುದಿಲ್ಲ. ಈ ನಿಟ್ಟಿನಲ್ಲಿ

ಯಾವುದೇ ಶುಲ್ಕ ಅಥವಾ ವಂತಿಗೆ ಪಡೆಯಲಾಗದಂತೆ ಸರ್ಕಾರವು ನ್ಯಾಯ ಸಮ್ಮತವಾದ ವಿದ್ಯಾಶುಲ್ಕದ ನೀತಿಯನ್ನು ರೂಪಿಸಬೇಕೆಂದು ನಾವು ಸರ್ಕಾರವನ್ನು ಆಗ್ರಹಿಸುತ್ತೇವೆ.

೪. ದುರ್ಬಲ ವರ್ಗಗಳಿಗೆ ಸೇರಿದ ಪ್ರತಿಭಾನ್ವಿತ ಮಕ್ಕಳನ್ನು ಗುರುತಿಸಿ ಅವರನ್ನು ಉನ್ನತ ಹಾಗೂ ವೃತ್ತಿಪರ ಶಿಕ್ಷಣ ಹೊಂದಲು ಸಿದ್ಧಪಡಿಸಿ, ಅವರಲ್ಲಿ ಕೆಲವರನ್ನು ಸಾಮಾಜಿಕ ಹಾಗೂ ರಾಜಕೀಯ ನಾಯಕತ್ವ ನಿರ್ವಹಿಸಲು ಬೇಕಾದ ಸೂಕ್ತ ತರಬೇತಿ ನೀಡಲು ಉದ್ದೇಶಿಸಿದ್ದೇವೆ.

೫. ಈ ಎಲ್ಲಾ ಯೋಜನೆಗಳನ್ನು ಕಾರ್ಯಗತೊಳಿಸಲು ಎಲ್ಲಾ ಧರ್ಮಕ್ಷೇತ್ರಗಳು ಹಾಗೂ ಧಾರ್ಮಿಕ ಸಮುದಾಯಗಳು ಇದಕ್ಕಾಗಿ ಪ್ರತ್ಯೇಕ ನಿಧಿಯನ್ನು ಒದಗಿಸಬೇಕು.

೬. ಕಥೋಲಿಕ ಶಿಕ್ಷಣ ಸಂಸ್ಥೆಗಳು ಆರ್ಥಿಕವಾಗಿ ದುರ್ಬಲವಾದ ವರ್ಗಗಳಿಗೆ ನೆರವು ಒದಗಿಸಬೇಕು. ಈ ಎಲ್ಲ ಸಲಹೆ–ಸೂಚನೆಗಳನ್ನು ಈ ಕ್ಷಣದಿಂದಲೇ ನಮ್ಮ ಎಲ್ಲಾ ಸಂಸ್ಥೆಗಳು ಅನುಷ್ಠನಗೊಳಿಸಬೆಕು. ನಮ್ಮ ಶಿಕ್ಷಣ ಪ್ರೇಷಿತತ್ವದ ಮೂಲಕ ದುರ್ಬಲರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಒತ್ತು ನೀಡಲು ಸಿ.ಬಿ.ಸಿ.ಐನ ಮಹಾ ಅಧಿವೇಶನವು ಒಂದು ವರ್ಷದೊಳಗೆ ಧರ್ಮಸಭೆಗಾಗಿ "ರಾಷ್ಟ್ರೀಯ ಶಿಕ್ಷಣ ನೀತಿ"ಯನ್ನು ರೂಪಿಸಲು ನಿರ್ಧರಿಸಿತು.[೩]

ಪ್ರೀತಿ ಮತ್ತು ಸೇವೆ ಕ್ರೈಸ್ತ ಧರ್ಮದ ಎರಡು ಕಣ್ಣುಗಳು. 'ಮಿತ್ರರನ್ನು ಪ್ರೀತಿಸು, ಶತ್ರುವನ್ನು ದ್ವೇಷಿಸು' ಎಂದು ಹೇಳಿರುವುದು ನಿಮಗೆ ತಿಳಿದೇ ಇದೆ. ನಾನು ಹೇಳುವುದನ್ನು ಗಮನಿಸಿ; "ನೀವು ಶತ್ರುಗಳನ್ನು ಪ್ರೀತಿಸಿರಿ, ನಿಮ್ಮನ್ನು ಪ್ರೀತಿಸುವವರಿಗಾಗಿ ಪ್ರಾರ್ಥನೆ ಮಾಡಿರಿ, ಇದರಿಂದ ಸ್ವರ್ಗದಲ್ಲಿರುವ ನಿಮ್ಮ ತಂದೆಗೆ ನೀವು ಮಕ್ಕಳಾಗುವಿರಿ" ಎಂದು ಕ್ರೈಸ್ತ ಪ್ರೀತಿಗೆ ಹೊಸ ಅರ್ಥವನ್ನು ತಂದುಕೊಟ್ಟನು.[೪]

ಪ್ರೀತಿ ಮತ್ತು ಸೇವೆ ಕ್ರೈಸ್ತಧರ್ಮದ ಎರಡು ಕಣ್ಣುಗಳು. ಇವುಗಳ ಅನುಷ್ಠಾನಕ್ಕಾಗಿ ಕ್ರೈಸ್ತ ಮಿಷನರಿಗಳು, ಸನ್ಯಾಸಿ, ಸನ್ಯಾಸಿಯರು, ಕ್ರೈಸ್ತ ವಿಶ್ವಾಸಿಗಳು ಸದಾ ಶ್ರಮಿಸುತ್ತಾರೆ. ಅದಕ್ಕೆಂದೇ ಶಿಕ್ಷಣ, ವೈದ್ಯ ಹಾಗೂ ಸಮಾಜ ಸೇವೆಯಲ್ಲಿ ತಮ್ಮನೆಲ್ಲ ತಾವು ತೊಡಗಿಸಿ ಕೊಂಡಿದ್ದಾರೆ.[೫] ಭಾರತವು ಶೈಕ್ಷಣಿಕವಾಗಿ ಪ್ರಾಚೀನ ಕಾಲದಿಂದ ೧೮ನೇ ಶತಮಾನದವರೆಗೆ ಬೌದ್ಧಿಕವಾಗಿ ನಿಂತ ನೀರಾಗಿದ್ದಿತು. ಇದಕ್ಕೆ ಮುಖ್ಯ ಕಾರಣ ಜನಸಾಮಾನ್ಯರಿಗೆ ಶಿಕ್ಷಣದಿಂದ ವಂಚಿತಗೊಳಿಸ ಲಾಗಿತ್ತು. ಅಂದು ಶಿಕ್ಷಣ ಕೇವಲ ಬ್ರಾಹ್ಮಣರ ಹಾಗೂ ಮೇಲ್ಜಾತಿಗಳ

ಸ್ವತ್ತಾಗಿತ್ತು. ಬ್ರಿಟಿಷರು ಭಾರತಕ್ಕೆ ಬಂದು ಪ್ರಬಲ ರಾಜಕೀಯ ಶಕ್ತಿಗಳಾಗಿ ಬೆಳೆದು ನಂತರ ಶಿಕ್ಷಣ ನೆಲೆಯಲ್ಲಿ ಕೆಲವು ಸುಧಾರಣೆ ಹಾಗೂ ಬದಲಾವಣೆಗಳನ್ನು ಜಾರಿಗೆ ತಂದರು. ಬ್ರಿಟಿಷರು ಇಲ್ಲಿನ ಪ್ರಾಂತಗಳಲ್ಲಿ ಆಡಳಿತ ನಡೆಸಬೇಕಾಗಿದ್ದರಿಂದ ಅವರು ಇಲ್ಲಿನ ಭಾಷೆಗಳಾದ ಹಿಂದಿ, ಕನ್ನಡ, ತೆಲುಗು, ಬಂಗಾಳಿ, ಮರಾಠಿ, ತಮಿಳು ಮುಂತಾದ ವಿವಿಧ ಪ್ರದೇಶಗಳಿಗೆ ತಕ್ಕಂತೆ ಪ್ರಾದೇಶಿಕ ಭಾಷೆಗಳನ್ನು ಕಲಿಯಬೇಕಾಯಿತು. ಹೀಗೆ ಎಲ್ಲಾ ಭಾಷೆಗಳನ್ನು ಕಲಿಯುವುದು ಕಷ್ಟವೆಂದು ತಿಳಿದು ಎಲ್ಲಾ ಪ್ರಾಂತಗಳಿಗೆ ಏಕಭಾಷೆಯನ್ನು ಅಳವಡಿಸಿಕೊಳ್ಳಬೇಕಾಯಿತು. ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಜಾರಿಗೊಳಿಸಿದರು. ಅವರು ಇಂಗ್ಲಿಷ್ ಶಿಕ್ಷಣವನ್ನು ಜಾರಿಗೊಳಿಸಲು ಮುಖ್ಯ ಕಾರಣಗಳೆಂದರೆ ಕ್ರೈಸ್ತ ಧರ್ಮವನ್ನು ಪ್ರಚಾರಗೊಳಿಸುವುದು ಮತ್ತು ಇಲ್ಲಿನ ಸ್ಥಳೀಯರಿಗೆ ಇಂಗ್ಲೀಷ್ ಭಾಷೆಯನ್ನು ಕಲಿಸಿ ಕಡಿಮೆ ಸಂಬಳದಲ್ಲಿ ಅವರನ್ನು ಆಡಳಿತದ ಇಲಾಖೆಗಳಲ್ಲಿ ನೇಮಿಸಿಕೊಳ್ಳುವುದಾಗಿದೆ. ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಭಾರತಕ್ಕೆ ಬಂದ ಕ್ರೈಸ್ತ ಪಾದ್ರಿಗಳಾದ 'ಕ್ಯಾರಿವಾರ್ಡ್' ಮತ್ತು 'ಮಾರ್ಷಮನ್‌ರೂ' ಭಾರತೀಯ ವಿದ್ಯಾರ್ಥಿಗಳಿಗಾಗಿ ಶಾಲೆಗಳನ್ನು ತೆರೆದವರಲ್ಲಿ ಮೊದಲಿಗರಾಗಿದ್ದಾರೆ. ಇಲ್ಲಿನ ಶಿಕ್ಷಣದ ಬಗ್ಗೆ ಗಮನಹರಿಸಿದ ಬ್ರಿಟಿಷ್ ಅಧಿಕಾರಿಗಳಲ್ಲಿ ಗವರ್ನರ್ ಜನರಲ್ ವಾರ್ನ್ ಹೆಸ್ಟಿಂಗ್ಸ್ ಮೊದಲಿಗರಾಗಿದ್ದಾರೆ. ಇವನು ೧೭೮೨ರಲ್ಲಿ ಮುಸ್ಲಿಂರ ಶಿಕ್ಷಣಕ್ಕಾಗಿ ಕಲ್ಕತ್ತದಲ್ಲಿ ಒಂದು ಮದರಸಾವನ್ನು ಸ್ಥಾಪಿಸಿದನು. ನಂತರ ಇನ್ನೋರ್ವ ಬ್ರಿಟಿಷ್ ಅಧಿಕಾರಿ ಜೋನಾದನ್ ಡೆಂಕೆನ್ ಎಂಬುವರು ಹಿಂದೂಗಳಿಗಾಗಿ ಬನಾರಸ್‌ನಲ್ಲಿ ೧೭೮೨ರಲ್ಲಿ ಸಂಸ್ಕೃತ ಕಾಲೇಜುವೊಂದನ್ನು ಸ್ಥಾಪಿಸಿದರು. ತದನಂತರ ಈಸ್ಟ್ ಇಂಡಿಯಾ ಕಂಪನಿ ತನ್ನ ನೌಕರರ ಶಿಕ್ಷಣಕ್ಕಾಗಿ ಮದರಸಾನಲ್ಲಿ ಪೂರ್ವ ಸ್ಟಂಟ್‌ಜಾರ್ಜ್ ಕಾಲೇಜನ್ನು ಹಾಗೂ ಕಲ್ಕತ್ತದಲ್ಲಿ ಪೂರ್ವವಿಲಿಯಂ ಕಾಲೇಜನ್ನು ಪ್ರಾರಂಭಿಸಿದರು.

ಗವರ್ನರ ಜನರಲ್ ಅಮ್ ಹೆರ್ಸನು ೧೮೧೩ರಲ್ಲಿ ಚಾರ್ಟರ ಕಾಯ್ದೆಯ ಮುಖಾಂತರ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣ ಬೆಳವಣಿಗೆಗೆ ನಾಂದಿ ಹಾಡಿದನು. ಅವನು ಭಾರತದಲ್ಲಿನ ಇಂಗ್ಲಿಷ್ ಶಿಕ್ಷಣಕ್ಕಾಗಿ ಪ್ರತಿ ವರ್ಷ ೧ ಲಕ್ಷ ರೂಪಾಯಿಗಳನ್ನು ವ್ಯಯಿಸುವ ಯೋಜನೆಯೊಂದನ್ನು ತಯಾರಿಸಿದನು. ಅದು ಲಾರ್ಡ್ ವಿಲಿಯಂ ಬೆಂಟಿಂಗ್ ಗವರ್ನರ್ ಜನರಲ್‌ನಾಗುವವರೆಗೂ ಹಾಗೆಯೇ ಸಂಗ್ರಹವಾಯಿತು. ಸುಮಾರು ೨೭ ವರ್ಷಗಳಲ್ಲಿ ೨೨ ಲಕ್ಷ ಹಣ ಸಂಗ್ರಹವಾಯಿತು. ಆಗ ಆ ಹಣವನ್ನು ಪಾಶ್ಚಾತ್ಯ ಶಿಕ್ಷಣಕ್ಕಾಗಿ ಬಳಸಬೇಕೆ ಅಥವಾ ಭಾರತೀಯರ ದೇಶಿಯ ಶಿಕ್ಷಣಕ್ಕಾಗಿ ಬಳಸಬೇಕು ಎಂಬ ವಿವಾದ ಪ್ರಾರಂಭಗೊಂಡು ಶಿಕ್ಷಣವಾದಿಗಳಲ್ಲಿ ಎರಡು ಗುಂಪುಗಳು ಉದಯವಾದವು. ಜೇಮ್ಸ್ ಫ್ರಾನ್ಸಪ್ ಹೊರೆಸ್ ಮುಂತಾದ ಪೌರ್ವಾತ್ಯ

ದೇಶಿಯ ಶಿಕ್ಷಣ ಪರವಾದಿನವರನ್ನು ಓರಿಯಂಟಲಿಸ್ಟರು ಎಂದು ಕರೆಯಲಾದ ಒಂದು ಗುಂಪು, ಥಾಮಸ್ ಮೆಕಾಲೆ, ರಾಜಾರಾಮ ಮೋಹನರಾಯರು ಮುಂತಾದವರು ಇಂಗ್ಲಿಷ್ ಶಿಕ್ಷಣದ ಪರವಾದಿಯಾದವರನ್ನು ಆಂಗ್ಲಿಸಿಸ್ಟರು ಎಂದು ಕರೆಯಲಾದ ಮತ್ತೊಂದು ಗುಂಪು. ಈ ವಿವಾದ ಕ್ಲಿಷ್ಟ ಪರಿಸ್ಥಿತಿ ಉಂಟು ಮಾಡಿತು. ನಂತರ ಗವರ್ನರ್ ಜನರಲ್ ಲಾರ್ಡ್ ವಿಲಿಯಂ ಬೆಂಟಿಂಗ್ ಚಿಂತಕರ ಸಮಸ್ಯೆಯನ್ನು ಬಗೆಹರಿಸಲು ಸರ್ ಥಾಮಸ್ ಮೆಕಾಲೆ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿದನು. ಈ ಸಮಿತಿಯ ವರದಿಗೆ ಇಂದಿಗೂ ಸಹ ಥಾಮಸ್ ಮೆಕಾಲೆ ಸಮಿತಿ ಎಂದೇ ಕರೆಯಲಾಗುತ್ತದೆ.

### ಥಾಮಸ್ ಮೆಕಾಲೆ ವರದಿ

ಭಾರತದ ಇಂಗ್ಲಿಷ್ ಶಿಕ್ಷಣ ಪಿತಾಮಹನೆಂದು ಹೆಸರಾದ ಥಾಮಸ್ ಮೆಕಾಲೆ ೧೮೩೪ರಲ್ಲಿ ಭಾರತದ ಗವರ್ನರ್ ಜನರಲ್‌ನ ಕೌನ್ಸಿಲ್‌ನಲ್ಲಿ ಕಾನೂನು ಸಲಹೆಗಾರನಾಗಿದ್ದನು. ಇವನು ೧೮೩೫ರಲ್ಲಿ ತನ್ನ ಹೆಸರಿನ ಮೆಕಾಲೆ ವರದಿಯನ್ನು ಸಿದ್ಧಪಡಿಸಿ ಕೌನ್ಸಿಲ್‌ನ ಮುಂದಿಟ್ಟನು. ಭಾರತದಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಜಾರಿಗೆ ತರವುದು ಬೇಡವೆಂದು ಪ್ರತಿಪಾದಿಸಿದನು. ಅಲ್ಲದೇ ಸಂಪೂರ್ಣ ಭಾರತ ಮತ್ತು ಅರೇಬಿಯಾದ ಸಾಹಿತ್ಯ ಒಂದೆಡೆ ಸೇರಿದರೂ ಅದು ಯುರೋಪಿನ ಗ್ರಂಥಾಲಯದ ಕೇವಲ ಒಂದು ಕಪಾಟಿನ ಸಮವಾಗದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದನು. ಮುಂದುವರೆದು ಹೇಳುತ್ತಾ ಸಂಸ್ಕೃತ ಭಾಷೆ ಭಾರತವನ್ನು ಅಂಧಕಾರದಲ್ಲಿಟ್ಟಿದೆ. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ನಾಶ ಹೊಂದಬಹುದು. ಆದರೆ ಇಂಗ್ಲಿಷ್ ಸಾಹಿತ್ಯ ಮಾತ್ರ ಶಾಶ್ವತ ಎಂದು ಹೇಳಿದನು. ಮೆಕಾಲೆಯ ವರದಿಯನ್ನು ಒಪ್ಪಿದ ಲಾರ್ಡ್ ವಿಲಿಯಮ ಬೆಂಟಿಂಕ್ ೧೮೩೫ರಲ್ಲಿ ಭಾರತದಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಜಾರಿಯಲ್ಲಿ ತಂದನು. ಈ ವರದಿ ಜಾರಿಗೊಳಿಸಲು ರಾಜಾರಾಮ ಮೋಹನರಾಯರು ಸಹ ಬೆಂಟಿಂಕ್‌ನ ಮೇಲೆ ಒತ್ತಡ ಹೇರಿದ್ದರಿಂದ ಭಾರತದಲ್ಲಿ ಮೆಕಾಲೆ ವರದಿ ಶಿಕ್ಷಣವು ಜಾರಿಗೆ ಬಂದಿತು ಎಂದು ಹೇಳಬಹುದು.

### ಚಾರ್ಲ್ಸ್‌ವುಡ್‌ನ ವರದಿ(೧೮೫೪)

ಬೋರ್ಡ್ ಆಫ್ ಕಂಟ್ರೋಲ್‌ನ ಅಧ್ಯಕ್ಷನಾದ ಚಾರ್ಲ್ಸ್‌ವುಡ್‌ನು ಭಾರತದಲ್ಲಿನ ಶಿಕ್ಷಣ ವಿಸ್ತರಣೆಯ ಬಗ್ಗೆ ತನ್ನ ಹೆಸರಿನಲ್ಲಿ ವರದಿಯನ್ನು ಸಿದ್ಧಪಡಿಸಿ ಬ್ರಿಟಿಷ್ ಸರಕಾರದ ಮುಂದಿಟ್ಟನು. ಅದು ಭಾರತದ ಸಮಗ್ರ ಶಿಕ್ಷಣದ ಯೋಜನೆಯನ್ನು ಒಳಗೊಂಡಿದ್ದಿತು. ಹಾಗಾಗಿ ಈ ವರದಿಯನ್ನು ಭಾರತದ ಇಂಗ್ಲಿಷ್ ಶಿಕ್ಷಣದ "ಮ್ಯಾಗ್ನಕಾರ್ಟ್" ಎಂದು ಕರೆಯಲಾಗಿದೆ.

**ವರದಿಯ ಅಂಶಗಳು**

೧. ಭಾರತೀಯ ಭಾಷೆಗಳ ಅಧ್ಯಯನಕ್ಕೆ ಪ್ರೋತ್ಸಾಹ, ಪ್ರಾಥಮಿಕ ಶಿಕ್ಷಣವನ್ನು ಭಾರತೀಯ ಭಾಷೆಯಲ್ಲಿ ಉನ್ನತ ಶಿಕ್ಷಣವನ್ನು ಇಂಗ್ಲಿಷ್ ಭಾಷೆಯಲ್ಲಿ ನೀಡುವುದು.

೨. ಪಾಶ್ಚಾತ್ಯ ಶಿಕ್ಷಣದ ಮೂಲಕ ವಿಜ್ಞಾನ ಕಲೆ ತತ್ವಜ್ಞಾನ ಸಾಹಿತ್ಯವನ್ನು ಬೋಧಿಸುವುದು.

೩. ಪ್ರಾಥಮಿಕ ಶಾಲೆಗಳನ್ನು ಗ್ರಾಮಗಳಲ್ಲಿ ತೆರೆಯುವುದು.

೪. ಪ್ರೌಢಶಾಲೆಗಳನ್ನು ಮತ್ತು ಕಾಲೇಜುಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ತೆರೆಯುವುದು.

೫. ಪ್ರತಿಯೊಂದು ಪ್ರಾಂತ್ಯದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ತೆರೆಯುವುದು.

೬. ಸರಕಾರವು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಅನುದಾನ ಮತ್ತು ಪ್ರೋತ್ಸಾಹ ಧನ ನೀಡುವುದು.

೭. ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿ ವೇತನ ನೀಡುವುದು ಮತ್ತು ಸ್ತ್ರೀ ಶಿಕ್ಷಣಕ್ಕೆ ಪ್ರೋತ್ಸಾಹಿಸುವುದು.

೮. ಶಿಕ್ಷಕರ ತರಬೇತಿಗಾಗಿ, ತರಬೇತಿ ಶಾಲೆಗಳನ್ನು ಸ್ಥಾಪಿಸುವುದು

೯. ಲಂಡನ್ ಮಾದರಿಯಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸುವುದು.

ಚಾರ್ಲ್ಸ್‌ವುಡ್‌ನ ವರದಿಯನ್ನು ಒಪ್ಪಿದ ಬ್ರಿಟಿಷ್ ಸರಕಾರವು ಶಿಕ್ಷಣ ಕ್ಷೇತ್ರಗಳಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿತು. ೧೮೫೭ರಲ್ಲಿ ಕಲ್ಕತ್ತ, ಬಾಂಬೆ ಹಾಗೂ ಮದ್ರಾಸ್‌ನಲ್ಲಿ ವೈಸರಾಯಿ ಲಾರ್ಡ್‌ಕ್ಯಾನಿಂಗ್‌ನಿಂದ ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ಅದರಲ್ಲಿ ಕಲ್ಕತ್ತ ವಿಶ್ವವಿದ್ಯಾಲಯವು ಭಾರತದಲ್ಲಿ ಸ್ಥಾಪನೆಯಾದ ಮೊಟ್ಟಮೊದಲ ವಿಶ್ವವಿದ್ಯಾಲಯ ಎಂದು ಹೆಸರಾಯಿತು. ನಂತರ ಬೆಂಗಳೂರಿನಲ್ಲಿ ಸೆಂಟ್ರಲ್ ಸ್ಕೂಲ್‌ನ್ನು ೧೮೫೮ರಲ್ಲಿ ಹಾಗೂ ಸೆಂಟ್ರಲ್ ಕಾಲೇಜನ್ನು ೧೮೬೪ರಲ್ಲಿ ಸ್ಥಾಪನೆಯಾಯಿತು. ಪೂನಾದ ಪರ್ಗೋಸನ ಕಾಲೇಜು, ಬೊಂಬಾಯಿಯಲ್ಲಿ ಎಲ್ಫಿನಸ್ಟೆನ್ ಕಾಲೇಜನ್ನು ಖಾಸಗಿಯಾಗಿ ತೆರೆಯಲಾಯಿತು. ಒಟ್ಟಿನಲ್ಲಿ ಇಂಗ್ಲಿಷ್ ಶಿಕ್ಷಣದಿಂದ ಸಾಕಷ್ಟು ಪ್ರಭಾವ ಭಾರತೀಯರ ಮೇಲಾಯಿತು. ಅವು ಈ ಕೆಳಗಿನಂತೆ ದಾಖಲಿಸಬಹುದು.

೧. ಈ ಮುಂಚೆ ಇದ್ದ ಪರ್ಶಿಯನ್ ಆಡಳಿತದ ಬದಲು ಇಂಗ್ಲಿಷ್ ಆಡಳಿತ ಪ್ರಾರಂಭವಾಯಿತು.

೨. ಇಂಗ್ಲಿಷ್ ಶಿಕ್ಷಣದ ಮೂಲಕ ಪಾಶ್ಚಾತ್ಯ, ವಿಜ್ಞಾನ, ತಂತ್ರಜ್ಞಾನ, ರಾಜಕೀಯ ಚಿಂತನೆ, ಸಾಹಿತ್ಯ, ವೈದ್ಯಶಾಸ್ತ್ರ, ತತ್ವಶಾಸ್ತ್ರ ಮುಂತಾದವುಗಳನ್ನು ತಿಳಿಯುವಂತಾಯಿತು.

೩. ಬ್ರಾಹ್ಮಣರು, ಶೂದ್ರರು ಎಂಬ ತಾರತಮ್ಯವಿಲ್ಲದ ಶಿಕ್ಷಣ ನೀಡಲಾಯಿತು. ಪ್ರಪ್ರಥಮ ಬಾರಿಗೆ ಶೂದ್ರರು ಮತ್ತು ಅತಿಶೂದ್ರ(ಅಸ್ಪೃಶ್ಯ ವರ್ಗದವರೆಗೆ) ಶಾಲೆಯನ್ನು ಕಲಿಯಲು ಅವಕಾಶವನ್ನು ಕಲ್ಪಿಸಲಾಯಿತು.

೪. ಪುರುಷರು ಮತ್ತು ಸ್ತ್ರೀಯರು ಎಂಬ ಬೇಧಭಾವವಿಲ್ಲದೆ ಎಲ್ಲರೂ ಶಾಲೆಯನ್ನು ಕಲಿಯುವಂತಾಯಿತು.

೫. ಕೆಲವು ಇಂಗ್ಲಿಷ್ ಪದಗಳು ಭಾರತೀಯ ಭಾಷೆಯಲ್ಲಿ ಸೇರಿಕೊಂಡಿವೆ. ಉದಾ: ರೈಲು, ಸಿನಿಮಾ, ಬಸ್ಸು, ಕಾರು, ಹಾಸ್ಪಿಟಲ್, ಎಲೆಕ್ಟ್ರಾನ್, ಸೊಸೈಟಿ, ಬುಕ್ ಇತ್ಯಾದಿ.

೬. ಇಂಗ್ಲಿಷ್ ಶಿಕ್ಷಣದ ವೈಭವದಿಂದ ಪಾಶ್ಚಾತ್ಯ ವಾಸ್ತುಶಿಲ್ಪ ಮತ್ತು ಶೈಲಿಯೂ ಭಾರತೀಯ ಕಟ್ಟಡಗಳ ನಿರ್ಮಾಣದಲ್ಲಿ ಕಾಣಿಸಿಕೊಂಡಿತು. ಉದಾಹರಣೆಗೆ ಟೌನ್‌ಹಾಲ್‌ನ್ನು ರಿಸಾನೆಸನ್ಸ್ ಶೈಲಿಯಲ್ಲಿ, ಚರ್ಚುಗಳನ್ನು ಗೋಥಿಕ್ ಶೈಲಿಯಲ್ಲಿ, ಸರಕಾರಿ ಆಡಳಿತ ಕಟ್ಟಡಗಳನ್ನು ಪಾಶ್ಚಾಮಾತ್ಯ ಮತ್ತು ಮೊಗಲ್ ಶೈಲಿಗಳ ಸಂಮಿಶ್ರಣಗೊಳಿಸಿ ನಿರ್ಮಿಸಿದ್ದಾರೆ. ಅದರಂತೆ ಚಿತ್ರಕಲೆಯಲ್ಲಿ ರವಿವರ್ಮ, ಶರಗಿಲ್ ಚಾರ್ಮಿನರಾಯ, ಗೋಗೇಂದ್ರನಾಥ ಮುಂತಾದವರು ಪಾಶ್ಚಿಮಾತ್ಯ ಚಿತ್ರಕಲೆಯ ಶೈಲಿಯಿಂದ ಪ್ರಭಾವಿರಾಗಿದ್ದರು.

೭. ಇಂಗ್ಲಿಷ್ ಶಿಕ್ಷಣದ ಪ್ರಭಾವ ಸಾಹಿತ್ಯದ ಮೇಲಾಯಿತು. ರವೀಂದ್ರನಾಥ ಠಾಗೂರ್, ಆರ್.ವಿ.ನಾರಾಯಣ, ಸರೋಜಿನಿ ನಾಯ್ಡು, ಮುಲ್ಕರಾಜ ಆನಂದ, ರಾಜಾರಾಮ ಮೋಹನ ರಾಯ, ಅರವಿಂದ ಮುಂತಾದವರು ಇಂಗ್ಲಿಷ್ ಸಾಹಿತ್ಯ ಶೈಲಿಯಿಂದ ಪ್ರಭಾವಿತರಾದರು.

೮. ಮಹಿಳೆಯ ಶಿಕ್ಷಣಕ್ಕಾಗಿ ೧೮೫೪ರ ಚಾರ್ಲ್ಸ್‌ವುಡ್ ವರದಿ ವಿಶೇಷ ಸವಲತ್ತುಗಳನ್ನು ನೀಡಿತು. ೧೮೮೨ರಲ್ಲಿ ಹಂಟರ ಆಯೋಗ ಪ್ರತ್ಯೇಕ ಸ್ತ್ರೀ ಶಿಕ್ಷಣಕ್ಕಾಗಿ ಮಹತ್ವದ ಬದಲಾವಣೆ ತರಲು ಪ್ರಯತ್ನಿಸಿತು.

ಕರ್ವೆಯವರು ೧೯೨೬ರಲ್ಲಿ ಮುಂಬಾಯಿಯಲ್ಲಿ ಮಾತ್ರ ಮೊದಲು ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ಒಟ್ಟಿನಲ್ಲಿ ಪಾಶ್ಚಾತ್ಯ ಶಿಕ್ಷಣ ಭಾರತಿಯರಲ್ಲಿದಂತಹ ಅಜ್ಞಾನ, ಅಂದಕಾರ, ಮೂಢನಂಬಿಕೆಗಳನ್ನು ಅಳಿಸಿ ಹಾಕಲು ಪ್ರಯತ್ನಿಸಿತು. ಒಟ್ಟಾರೆಯಾಗಿ ಬ್ರಿಟಿಷರ ಆಡಳಿತದಲ್ಲಿ ಆಧುನಿಕ ಶಿಕ್ಷಣ ಹಲವಾರು ದೃಷ್ಟಿಯಿಂದ ಭಾರತೀಯರಿಗೆ ಅನುಕೂಲ ವಾದರೂ ಅದರ ವ್ಯಾಪ್ತಿ ಮಾತ್ರ ಸೀಮಿತವಾಗಿತ್ತು. ಇದು ಭಾರತೀಯರಲ್ಲಿ ರಾಷ್ಟ್ರೀಯತೆಯು ಪ್ರಸಾರವಾಗಲು ಸಹ ಸಾಧನವಾಯಿತು. ಆದರೆ ಶಿಕ್ಷಣದ ಸಂರಚನೆ, ಧ್ಯೇಯ್ಯೋದ್ದೇಶ, ವಿಧಾನ, ಪಠ್ಯ ಹಾಗೂ ವಿಷಯಗಳಲ್ಲಿ ವಸಾಹತುಶಾಹಿಯ ಹಿತಾಸಕ್ತಿಯನ್ನು ಕಾಪಾಡು

ವುದಾಗಿದ್ದವು. ಬ್ರಿಟಿಷ ಶಿಕ್ಷಣದ ಇನ್ನೊಂದು ದೋಷವೆಂದರೆ, ಅದು ಆಧುನಿಕ ತಾಂತ್ರಿಕ ಶಿಕ್ಷಣವನ್ನು ಕಡೆಗಣಿಸಿತ್ತು. ಇದರಿಂದ ಆಧುನಿಕ ಕೈಗಾರಿಕೆಗಳ ಉಗಮ ಹಾಗೂ ಬೆಳವಣಿಗೆಗೆ ತೊಡಕಾಯಿತು. ಇಂಗ್ಲಿಷ್‌ನ್ನು ಮಾಧ್ಯಮದ ಭಾಷೆಯಾಗಿಸಿದ್ದರಿಂದ ಜನಸಾಮಾನ್ಯರಿಗೆ ಶಿಕ್ಷಣ ಮುಟ್ಟಲಿಲ್ಲ. ಇದು ಸುಶಿಕ್ಷಿತರು ಹಾಗೂ ಜನಸಮಾನ್ಯರ ಮಧ್ಯ ಭಾಷಿಕ ಹಾಗೂ ಸಾಂಸ್ಕೃತಿಕ ಕಂದಕವಾಗಿ ಪರಿಣಮಿಸಿತು.

ಭಾರತದಲ್ಲಿ ವುಡ್ಸ್ ವರದಿಯಂತೆ ಔಪಚಾರಿಕ ಶಿಕ್ಷಣ ೧೮೫೪ರಲ್ಲಿ ಪ್ರಾರಂಭವಾದಾಗ ವಿಜಯಪುರ ಜಿಲ್ಲೆ ರಚನೆಯಾಗಿರಲಿಲ್ಲ. ಇದು ಮರಾಠಾ ಸರದಾರರ ವಶದಲ್ಲಿದ್ದಿತು. ವಿಜಯಪುರದಲ್ಲಿ ೧೮೫೨ರಲ್ಲಿ ಸರಕಾರದಿಂದ ಪ್ರಾರಂಭವಾದ ಜಿಲ್ಲೆಯ ಪ್ರಥಮ ಆಂಗ್ಲೋ ವರ್ನಾಕ್ಯುಲರ್(ಎ.ವಿ.) ಶಾಲೆಯಲ್ಲಿ ಮೂರು ವರ್ಗಗಳವರೆಗೆ ಇಂಗ್ಲಿಷ್‌ನ್ನು ಕಲಿಸಲಾಗುತ್ತಿತ್ತು. ಇದೇ ವರ್ಷ ಇಲ್ಲಿ ಒಂದು ಸೆಕೆಂಡ್ ಗ್ರೇಡ್ ಎ.ವಿ.ಶಾಲೆ ಪ್ರಾರಂಭವಾಯಿತು. ವಿಜಯಪುರದಲ್ಲಿ ೧೮೫೪ರಲ್ಲಿ ಪ್ರಾರಂಭವಾದ ಮುನಿಸಿಪಾಲಿಟಿ ಈ ಎರಡೂ ಶಾಲೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಕಲಾದಗಿ ಜಿಲ್ಲೆ ೧೮೬೪ರಲ್ಲಿ ರಚನೆಯಾಯಿತು. ಈ ಜಿಲ್ಲೆಯಲ್ಲಿ ೧೮೬೬ರ ವರೆಗೆ ಒಟ್ಟು ೪೬ ಪ್ರಾಥಮಿಕ ಶಾಲೆಗಳಿದ್ದು, ಇವುಗಳಲ್ಲಿ ಒಟ್ಟು ೩,೪೭೭ ಮಕ್ಕಳು ಶಿಕ್ಷಣ ಅಭ್ಯಾಸ ಮಾಡುತ್ತಿದ್ದರು. ೧೮೮೩ರ ವೇಳೆಗೆ ಒಟ್ಟು ಶಾಲೆಗಳ ಸಂಖ್ಯೆ ೧೫೬ ಆಗಿದ್ದು, ಇವುಗಳಲ್ಲಿ ೧೪೧ ಕನ್ನಡ ಗಂಡು ಮಕ್ಕಳ ಶಾಲೆಗಳು, ಒಂದು ಕನ್ನಡ ಹೆಣ್ಣುಮಕ್ಕಳ ಶಾಲೆ, ಒಂದು ಕನ್ನಡ ಮತ್ತು ಇಂಗ್ಲಿಷ್ ಕಲಿಸುವ ಹೆಣ್ಣಮಕ್ಕಳ ಶಾಲೆ, ಮೂರು ಮರಾಠಿ ಶಾಲೆಗಳು, ನಾಲ್ಕು ಉರ್ದು ಶಾಲೆಗಳು ಮತ್ತು ಆರು ಎ.ವಿ.ಶಾಲೆಗಳಿದ್ದವು. ಇದಲ್ಲದೆ ೨೫ ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳೂ ಕಾರ್ಯನಿರ್ವಹಿಸುತ್ತಿದ್ದು, ಇವುಗಳಲ್ಲಿ ಒಂದು ಹೆಣ್ಣುಮಕ್ಕಳ ಶಾಲೆಯಾಗಿದ್ದಿತು. ಇವುಗಳಲ್ಲಿ ೧೬ ಶಾಲೆಗಳು ಉತ್ತಮ ಶಾಲೆಗಳೆಂದು ಪರಿಗಣಿಸಲ್ಪಟ್ಟಿದ್ದು, ಇವುಗಳಲ್ಲಿ ಮಾತ್ರ ಆರನೇ ಇಯತ್ತೆಗೆ ಅನುಮತಿ ಕೊಡಲಾಗಿದ್ದಿತು. ಈ ತರಗತಿಯ ನಂತರ 'ವರ್ನಾಕ್ಯೂಲರ್ ಫೈನಲ್' ಪರೀಕ್ಷೆ ನಡೆಯುತ್ತಿತ್ತು. ಇದು 'ಮುಲ್ಕಿ ಪರೀಕ್ಷೆ' ಎಂದು ಕರೆಯುತ್ತಿದ್ದರು.[೬] ಈ ಪರೀಕ್ಷೆಯನ್ನು ಪಾಸಾದವರಿಗೆ ನೌಕರಿ ಮತ್ತು ಸಮಾಜದಲ್ಲಿ ಬಾರಿ ಸನ್ಮಾನ, ಗೌರವ ದೊರೆಯುತ್ತಿತ್ತು.

ಕನ್ನಡದ ಪ್ರದೇಶಗಳನ್ನು ಲಂಡನ್ ಕ್ರೈಸ್ತ ಮಿಷನರಿ ಸೊಸೈಟಿಯು ೧೮೩೫ರಲ್ಲಿ ಪ್ರವೇಶಿಸಿ ಬೆಳಗಾವಿಯಲ್ಲಿ ಏಳು ಬಾಲಕರ ಶಾಲೆಗಳನ್ನು, ಆರು ಹೆಣ್ಣುಮಕ್ಕಳ ಶಾಲೆಗಳನ್ನು ಪ್ರಾರಂಭಿಸಿತು. ಬಾಲಕರ ಶಾಲೆಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೨೨೧. ಧಾರವಾಡ, ಗದಗ, ಗುಳೇದಗುಡ್ಡ, ಹುಬ್ಬಳಿ ಮುಂತಾದ ಸ್ಥಳಗಳಲ್ಲಿ ಬಾಸೆಲ್ ಮಿಷನ್ ಸಂಸ್ಥೆಯು

ಶಾಲೆಗಳನ್ನು ಸ್ಥಾಪಿಸಿತು.[೭] ೧೮೫೫–೧೮೮೨ರ ಅವಧಿಯು ಮುಂಬೈ ಪ್ರಾಂತದ ಕನ್ನಡ ಭಾಗದಲ್ಲಿನ ಆಧುನಿಕ ಶಿಕ್ಷಣ ಪದ್ಧತಿಯು ಸ್ಮರಣೀಯವಾಗಿ ಅದು "ಕನ್ನಡ ಪುನರುಜ್ಜೀವನದ ಕಾಲ"ವೆಂದು ಕರೆಯಲಾಗಿದೆ. ೧೮೮೧–೮೨ರ ಅವಧಿಯಲ್ಲಿ ಶಿಕ್ಷಣದಲ್ಲಿ ಸಾಕಷ್ಟು ಪ್ರಗತಿಯಾಯಿತು. ಕನ್ನಡದಲ್ಲಿ ಪಠ್ಯಪುಸ್ತಕಗಳೆಲ್ಲಾ ಸಿದ್ಧವಾದವು. ಧಾರವಾಡದಲ್ಲಿ ಕನ್ನಡ ಭಾಷಾಂತರ ಕಚೇರಿಯು ಆರಂಭವಾಯಿತು. ಹಳಗನ್ನಡ ಸಾಹಿತ್ಯವನ್ನು ಪರಿಶೀಲಿಸಲು ಒಂದು ಸಮಿತಿಯು ರಚಿತವಾಯಿತು. ಡೆಪ್ಯೂಟಿ ಚನ್ನಬಸಪ್ಪ, ವೆಂಕಟ ರಂಗೋ ಕಟ್ಟಿ, ಭುಜಂಗರಾವ್ ಹುಯಿಲ್‌ಗೋಳ, ಎಸ್.ಕೆ.ರೊದ್ದ, ಆರ್.ಎ.ಸವಣೂರ್, ಡಬ್ಲ್ಯೂ.ಎ.ರಸೆಲ್, ಎಸ್.ವಿ.ಪಟವರ್ಧನ ಮುಂತಾದ ಅಧಿಕಾರಿಗಳು ಕನ್ನಡ ಶಾಲೆಗಳ ಅಭಿವೃದ್ಧಿಗಾಗಿ ತುಂಬಾ ಶ್ರಮಿಸಿದರು.[೮] ಇಂತಹ ಮಹಾನ್ ನೇತಾರರು ಕನ್ನಡದ ಕಟ್ಟಾಳುಗಳ ಸ್ಮರಣೆ ನಿರಂತರವಾಗಿ ಕನ್ನಡ ಭಾಷೆವಿರುವವರೆಗೂ ಅಜರಾಮರವಾಗಿರುತ್ತದೆ ಎಂಬುದು ಸರ್ವಕಾಲಿಕ ಸತ್ಯವಾಗಿದೆ.

ಮುಂಬೈನ ಸಾತಾರಾ ಮತ್ತು ಸೋಲ್ಲಾಪುರದ ಕಲೇಕ್ಟರೇಟುಗಳಲ್ಲಿದ್ದ ಕನ್ನಡ ಪ್ರದೇಶಗಳನ್ನು ೧೮೬೧ರಲ್ಲಿ ಒಂದು ಹೊಸ ಕಲೇಕ್ಟರೇಟ್‌ನ ಅಧೀನಕ್ಕೆ ತರಲಾಯಿತು. ಈ ಹೊಸ ಕಲೆಕ್ಟರ್‌ನ ಕೇಂದ್ರ ಕಲಾದಗಿಯಾಗಿತ್ತು. ೧೮೬೩ರಲ್ಲಿ ಕನ್ನಡ ಪ್ರದೇಶಗಳನ್ನೆಲ್ಲಾ ಒಟ್ಟುಗೂಡಿಸಿ ಶುದ್ಧ ಕನ್ನಡ ವಿಭಾಗವಾದ ದಕ್ಷಿಣ ವಿಭಾಗ(ಡಿವಿಜನ್)ವನ್ನು ರಚಿಸಲಾಯಿತು.[೯] ಈ ವಿಭಾಗದಿಂದ ಕನ್ನಡ ಕಲಿಕೆ ಮತ್ತಷ್ಟು ಅಭಿವೃದ್ಧಿಯತ್ತ ದಾಪುಗಾಲು ಇಟ್ಟಿತು.

ಶೈಕ್ಷಣಿಕ ಪ್ರಸಾರದ ಜೊತೆಗೆ ಬ್ರಿಟಿಷ್ ಅಧಿಕಾರಿಗಳು ವಸ್ತುಸಂಗ್ರಹಾಲಯ ನಿರ್ಮಾಣ, ಪತ್ರಿಕಾ ಮುದ್ರಣದ ಕಡೆಗೂ ಸಹ ಅತ್ಯಂತ ತ್ವರಿತಗತಿಯಲ್ಲಿ ಆಸಕ್ತಿ ವಹಿಸಿದರು. ೧೮೯೦ರಲ್ಲಿ ವಿಜಾಪುರ ರಾಜಧಾನಿಯನ್ನು ಬದಲಿಸಿ ದುರಸ್ತಿ ಕಾರ್ಯ ನಡೆಸುವ ವೇಳೆ ದೊರೆತ ಅನೇಕ ಬಿಡಿ ಶಿಲ್ಪಗಳು ಹಾಗೂ ಇತ್ಯಾದಿ ಮಹತ್ವದ ಐತಿಹಾಸಿಕ, ಪುರಾತತ್ವ ಅವಶೇಷಗಳನ್ನು ವ್ಯವಸ್ಥಿತವಾಗಿ ಇರಿಸಲು ಜೇಮ್ಸ್ ಬರ್ಗೆಸ್, ಹೆನ್ರಿ ಕಸಿನ್ ಅವರುಗಳು ೧೮೯೨ರಲ್ಲಿ ಚಿಕ್ಕದಾದ ಒಂದು ವಸ್ತುಸಂಗ್ರಹಾಲಯವನ್ನು ಆರಂಭಿಸಿದರು. ನಂತರ ಕೆಲವು ವರ್ಷಗಳು ಕಳೆದ ಮೇಲೆ ಈಗಿರುವ ಗೋಲ್‌ಗುಂಬಜ ಬಳಿಯ ನಖ್ಖರ್ ಖಾನೆಗೆ ಬದಲಾಯಿಸ ಲಾಯಿತು.[೧೦] ಈ ರೀತಿ ಕೆಲಸಕಾರ್ಯಗಳಿಂದ ಸ್ಥಳೀಯರಲ್ಲಿ ಶಿಕ್ಷಣ ಪಡೆಯುವ, ಓದುವ ಆಸಕ್ತಿ ಹೆಚ್ಚಾಯಿತು. ಮುಖ್ಯವಾಗಿ ಪತ್ರಿಕೆ ಬಂದ ಮೇಲೆ ಜನರಲ್ಲಿ ಶಿಕ್ಷಣ ಪಡೆಯುವ ಹಂಬಲ ಮತ್ತಷ್ಟು ವೃದ್ಧಿಸಿತು. ಜಿಲ್ಲಾ ಕೇಂದ್ರ ಕಲಾದಗಿಯಲ್ಲಿ ೧೮೭೨ರಲ್ಲಿಯೇ "ಹಿತೇಚ್ಛು"ಎಂಬ ಮರಾಠಿ ಪತ್ರಿಕೆ ಹೊರಬರುತ್ತಿತ್ತು. 'ಕರ್ನಾಟಕ ವೈಭವ' ಕನ್ನಡದ ವಾರಪತ್ರಿಕೆ ೫.೩.೧೮೯೨ರಲ್ಲಿ ಆರಂಭವಾಗಿದ್ದು ವಿಜಯಪುರದಲ್ಲಿ ಎಂಬುದು ಹೆಮ್ಮೆಯ ಸಂಗತಿಯಾಗಿದೆ.[೧೧] ಜಿಲ್ಲೆಯಲ್ಲಿ

ಪತ್ರಿಕೆಗಳ ಆಗಮನದಿಂದಲೇ ಜನರು ಸ್ವಯಂ ಪ್ರೇರಣೆಯಿಂದ ಅಕ್ಷರವನ್ನು ಕಲಿಯಲು ತುಂಬಾ ಆಸಕ್ತಿ ವಹಿಸಿ ಮುಂದೆ ಬಂದರು. ತಾವು ಅಕ್ಷರ ಕಲಿತು ಮತ್ತೊಬ್ಬರಿಗೆ ಅಕ್ಷರ ಕಲಿಸಲು ಪತ್ರಿಕೆಗಳು ಅಂದು ವಸಾಹತು ಕಾಲದಲ್ಲಿ ಸಹಾಯಕವಾದವು.

**ಹಂಟರ ಶೈಕ್ಷಣಿಕ ಆಯೋಗ(೧೮೮೨)**

ಲಾರ್ಡ್ ರಿಪ್ಪನ್ ಭಾರತದ ವೈಸರಾಯಿಯಾಗಿ ಅಧಿಕಾರವಹಿಸಿಕೊಂಡ ನಂತರ ಭಾರತದ ಶಿಕ್ಷಣ ವ್ಯವಸ್ಥೆಯ ಸ್ಥಿತಗತಿಗಳನ್ನು ಅರಿಯಲು ಡಬ್ಲೂ.ಡಬ್ಲೂ.ಹಂಟರನ ನೇತೃತ್ವದ ಆಯೋಗವನ್ನು ರಚಿಸಿದನು. ದೀರ್ಘ ಅಧ್ಯಯನ ಫಲವಾಗಿ ಹಂಟರ್‌ನ ಆಯೋಗ ಈ ಕೆಳಗಿನ ಅಮೂಲ್ಯ ವಾದಂತಹ ಶಿಫಾರಸ್ಸುಗಳನ್ನು ಪ್ರಕಟಿಸಿತು.

೧. ಶಿಕ್ಷಣವನ್ನು ಭಾರತೀಕರಗೊಳಿಸಬೇಕು ಮತ್ತು ಹೆಚ್ಚಿನ ಸಂಖ್ಯೆಯ ಭಾರತೀಯ ಶಿಕ್ಷಕರನ್ನು ನೇಮಿಸಬೇಕು. ಸರಕಾರ ತನ್ನ ನಿಯಂತ್ರವನ್ನು ಕೈ ಬಿಡಬೇಕು. ಮಿಶನರಿಗಳನ್ನು ಶೈಕ್ಷಣಿಕ ಕಾರ್ಯಕ್ಕೆ ಬೆಂಬಲಿಸಬೇಕು.

೨. ದೇಶೀಯ ಭಾಷಾ ಶಿಕ್ಷಣಕ್ಕೆ ಪ್ರಾಮುಖ್ಯತೆ ನೀಡಬೇಕು

೩. ಖಾಸಗಿ ಸಂಸ್ಥೆಗಳನ್ನು ಈ ಕಾರ್ಯದಲ್ಲಿ ಬೆಂಬಲಿಸಬೇಕು.

೪. ವೃತ್ತಿಪರ ಶಿಕ್ಷಣ, ಶಿಕ್ಷಕರ ತರಬೇತಿ, ವಿದ್ಯಾರ್ಥಿಗಳಿಗೆ ಶಿಷ್ಯವೇತನಕ್ಕೆ ಮಹತ್ವ ನೀಡುವುದು, ಸರಕಾರ ಶಿಕ್ಷಣ ಉದ್ದೇಶಕ್ಕೆ ಹೆಚ್ಚಿನ ಧನ ಸಹಾಯ ನೀಡಬೇಕು, ಕಲಿಕಾ ಮಾಧ್ಯಮದ ಬಗ್ಗೆಯೂ ಸ್ಪಷ್ಟ ನಿಲುವು ತಳೆಯಬೇಕು[೧೨] ಎಂಬುದು ವರದಿಯಲ್ಲಿ ತಿಳಿಸಲಾಗಿತ್ತು.

ಈ ಮೇಲಿನ ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ವರದಿ ತಯಾರಿಸಿ ಸರ್ಕಾರಕ್ಕೆ ಸಲ್ಲಿಸಲಾಯಿತು. ಜೊತೆಗೆ ಬೆಳವಣಿಗೆಯ ಕುರಿತು ವಾರ್ಷಿಕ ವರದಿ ತಯಾರಿಸುವಂತೆಯೂ ಸೂಚಿಸಲಾಯಿತು. ಸರ್ಕಾರ ಈ ಶಿಫಾರಸ್ಸುಗಳನ್ನು ಗಂಭೀರವಾಗಿ ಪರಿಗಣಿಸಿದ ಕಾರಣ ಉನ್ನತ ಶಿಕ್ಷಣ ವೇಗವಾಗಿ ಬೆಳವಣಿಗೆ ಹೊಂದಿತು. ಇದರ ಪರಿಣಾಮವಾಗಿ ೧೮೮೧-೯೧ರ ಅವಧಿಯಲ್ಲಿ ಕಾಲೇಜು ವಿದ್ಯಾರ್ಥಿಗಳ ಸಂಖ್ಯೆ ೧೧ ಸಾವಿರದಿಂದ ೨೩ ಸಾವಿರಕ್ಕೇರಿತು. ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳ ಸಂಖ್ಯೆ ೬ ಲಕ್ಷ ೩೩ ಸಾವಿರಕ್ಕೆ ಹೆಚ್ಚಾಯಿತು. ಅಲ್ಲದೇ ೧೯೦೧ರ ಹೊತ್ತಿಗೆ ಸರ್ಕಾರ ೧೭೭.೦೪ ಲಕ್ಷರೂಗಳನ್ನು ಈ ಉದ್ದೇಶಕ್ಕೆ ವಿನಿಯೋಗಿಸಿತು.[೧೩] ಚರಿತ್ರೆಯಲ್ಲಿಯೇ ಹಂಟರ ಆಯೋಗ ಮಹತ್ವವಾದದ್ದು. ಹಂಟರ ಆಯೋಗದ ಪ್ರತಿಫಲವಾಗಿ ಮುಂಬೈ ಪ್ರಾಂತ್ಯದಲ್ಲಿ ಹಲವಾರು ಶೈಕ್ಷಣಿಕ ಚಟುವಟಿಕೆಗಳು ಬೆಳವಣಿಗೆ ಹೊಂದಿದ್ದವು. ಹಾಗಾಗಿ ಜಿಲ್ಲೆಯಲ್ಲಿ ಸಹ ಬ್ರಿಟಿಷರು ತಮ್ಮ ಮೇಲಾಧಿಕಾರಿಗಳ ಆಜ್ಞೆಯನ್ನು ಪರಿಪಾಲಿಸುವ

ನಿಟ್ಟಿನಲ್ಲಿ ಶೈಕ್ಷಣಿಕ ಕೇಂದ್ರಗಳನ್ನು ಪ್ರಾರಂಭಿಸಿದರು. ಅಂತಹ ಶಾಲೆಗಳು ಪ್ರಾದೇಶಿಕ ಭಾಷೆ, ಅದರೊಂದಿಗೆ ಮತ್ತೊಂದು ಭಾಷೆಯ ಸಂಮಿಲನದಿಂದ ಶೈಕ್ಷಣಿಕ ಪ್ರಗತಿ ಪ್ರಾರಂಭವಾಯಿತು.

ಬಾಗಲಕೋಟೆ ಜಿಲ್ಲೆಯ ಹುನ್ನೂರಿನಲ್ಲಿ ೧೮೭೬ರಲ್ಲಿ ಕನ್ನಡ ಗಂಡುಮಕ್ಕಳ ಜೀವನ ಶಿಕ್ಷಣ ಶಾಲೆ ಪ್ರಾರಂಭವಾಯಿತು. ಮುಸಲ್ಮಾನರ ಮಕ್ಕಳಿಗಾಗಿ ಸ್ಥಾಪಿತವಾದ ಈ ಶಾಲೆ ೧೯೫೭ರಲ್ಲಿ ಮೂಲ ಶಿಕ್ಷಣ ಶಾಲೆಯಾಯಿತು.[೧೪] ಅದರಂತೆ ಜಿಲ್ಲೆಯಲ್ಲಿ ಜಮಖಂಡಿ ಹುಲ್ಯಾಳ, ಮುಧೋಳ, ಲೋಕಾಪುರ, ಭಂಟನೂರು, ಬಾದಾಮಿ, ಇಲಕಲ್ಲ, ಗುಳೇದಗುಡ್ಡ, ಕಲಾದಗಿ, ಬಾಗಲಕೋಟೆ ಮುಂತಾದ ಪ್ರದೇಶಗಳಲ್ಲಿ ವಸಾಹತು ಕಾಲದಲ್ಲಿ ನಿರ್ಮಾಣಗೊಂಡ ಶಾಲೆಗಳು ಇಂದಿಗೂ ಸಹ ವ್ಯವಸ್ಥಿತವಾಗಿ ಕಾರ್ಯವನ್ನು ನಿರ್ವಹಿಸುತ್ತಿವೆ. ಜಿಲ್ಲೆಯ ಕೆಲವು ಶಾಲೆಗಳು ಶತಮಾನೋತ್ಸವ ವನ್ನು ಸಹ ಅತಿ ವಿಜೃಂಭಣೆಯಿಂದ ಆಚರಿಸಿಕೊಂಡಿವೆ. ದೇಶಿಯರಿಂದ ಪ್ರಾಥಮಿಕ ಶಿಕ್ಷಣದ ಆಡಳಿತ ನಡೆಯಬೇಕೆಂಬ ಉದ್ದೇಶದಿಂದ ಆಗಿನ ಮುಂಬೈ ಸರಕಾರ ೧೯೨೧ರಲ್ಲಿ ಚಂದಾವರಕರ್ ಸಮಿತಿಯನ್ನು ರಚಿಸಿತು. ಸಮಿತಿಯ ಶಿಫಾರಸ್ಸಿನಂತೆ ಬಾಗಲಕೋಟೆ ಮತ್ತು ವಿಜಯಪುರ ಮುನಿಸಿಪಾಲಿಟಿಗಳ ಸರಹದ್ದನ್ನು ಹೊರತುಪಡಿಸಿ ಜಿಲ್ಲೆಯ ಎಲ್ಲಾ ಪ್ರಾಥಮಿಕ ಶಾಲೆಗಳ ಆಡಳಿತವನ್ನು ೧.೧.೧೯೨೭ರಿಂದ ಲೋಕಲ್ ಬೋರ್ಡ್ ವಹಿಸಿಕೊಂಡಿತು. ಅಂದೇ ಸ್ಕೂಲ್ ಬೋರ್ಡ್ ಅಸ್ತಿತ್ವಕ್ಕೆ ಬಂದಿತು. ಈ ಬೋರ್ಡ್ ಹಿಂದುಳಿದ ಜನಾಂಗದಲ್ಲಿ ಶಿಕ್ಷಣ ಪ್ರಸಾರ ಕಾರ್ಯಕ್ಕಾಗಿ ೧೯೩೧ರಲ್ಲಿ ಇಂಡಿ, ಅಥರ್ಗಾ, ಬಬಲೇಶ್ವರ, ತೋರವಿ, ಬಿಜ್ಜರಗಿ, ಹೊನವಾಡ, ಕನಮಡಿ, ಕಾಖಂಡಕಿ, ಕಲಾದಗಿ, ತಾಳಿಕೋಟೆ ಮುಂತಾದ ಹಿಂದುಳಿದ ಜನಾಂಗದ ವಸತಿ ಪ್ರದೇಶಗಳಲ್ಲಿ ಅವರ ಮಕ್ಕಳಿಗಾಗಿ 'ದೇಡ' ಶಾಲೆಗಳನ್ನು ಪ್ರಾರಂಭಿಸಿತು. ಆರು ವರ್ಷ ತುಂಬಿದ ಎಲ್ಲಾ ಮಕ್ಕಳಿಗೆ ಒಟ್ಟು ಏಳು ವರ್ಷ ಅವಧಿಯ ಕಡ್ಡಾಯ ಪ್ರಾಥಮಿಕ ಶಿಕ್ಷಣ ನೀಡುವ ಉದ್ದೇಶದ ಮುಂಬೈನ ಪ್ರಾಥಮಿಕ ಶಿಕ್ಷಣ ಕಾಯ್ದೆ ಜಿಲ್ಲೆಯಲ್ಲಿ ೧೯೪೭ರಲ್ಲಿ ಜಾರಿಯಾಯಿತು.[೨೫] ಜರ್ಮನಿಯ ಬಾಸೆಲ್ ಮಿಷನ್ ಪಾದ್ರಿಗಳು ೧೮೩೫ರಲ್ಲಿ ಮಂಗಳೂರನ್ನು ತಮ್ಮ ಧರ್ಮ ಪ್ರಚಾರ ಕೇಂದ್ರವನ್ನಾಗಿಸಿಕೊಂಡು ಇದರ ಅಂಗವಾಗಿ ಧಾರವಾಡ, ಹುಬ್ಬಳ್ಳಿ, ಗದಗ ಹಾಗೂ ವಿಜಯಪುರದಲ್ಲಿ ತಮ್ಮ ಶಾಲೆಗಳನ್ನು ಪ್ರಾರಂಭಿಸಿದರು. ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ ಜಿಲ್ಲೆಗೊಂದರಂತೆ ಮಾದರಿ ಪ್ರೌಢಶಾಲೆಗಳನ್ನು ಪ್ರಾರಂಭಿಸುವ ಧೋರಣೆ ಹೊಂದಿದ್ದ ಸರಕಾರ ೧೮೬೬ರಲ್ಲಿ ಆಗಿನ ಜಿಲ್ಲಾ ಕೇಂದ್ರವಾಗಿದ್ದ ಕಲಾದಗಿಯಲ್ಲಿ ಒಂದು ಅಂಗ್ಲ ಮಾಧ್ಯಮ ಶಾಲೆಯನ್ನು ಸ್ಥಾಪಿಸಿತು. ವಿಜಯಪುರ ೧೮೮೫ರಲ್ಲಿ ಜಿಲ್ಲಾ ಕೇಂದ್ರವಾಗಿ ಮಾರ್ಪಟ್ಟಾಗ ಈ ಶಾಲೆಯು 'ವಿಜಾಪುರ ಕೃಷಿ ಪ್ರೌಢಶಾಲೆ'ಎಂಬ ಹೆಸರಿನೊಂದಿಗೆ

ವಿಜಯಪುರಕ್ಕೆ ಸ್ಥಳಾಂತರಗೊಂಡಿತು.[೧೬] ಹೀಗೆ ಶಾಲೆಗಳು ಸ್ಥಳಾಂತರಗೊಳ್ಳುವ ಪ್ರಕ್ರಿಯೆಯು ನಿರಂತರವಾಗಿತ್ತು.

ಬಾಗಲಕೋಟೆ ಜಿಲ್ಲೆಯಲ್ಲಿ ಕನ್ನಡ, ಮರಾಠಿ, ಉರ್ದು ಶಾಲೆಗಳು ವಸಾಹತು ಕಾಲದ ಸಂದರ್ಭದಲ್ಲಿ ನಿರ್ಮಾಣಗೊಂಡಂತಹ ಹಲವಾರು ಶಾಲೆಗಳು ಇಂದಿಗೂ ಕಾರ್ಯನಿರ್ವಹಿ ಸುತ್ತಿವೆ. ೧೮೬೨ರಲ್ಲಿ ಎ.ವಿ.(ಆಂಗ್ಲೋ ವರ್ನಾಕ್ಯೂಲರ್) ಶಾಲೆ ಬಾಗಲಕೋಟೆಯಲ್ಲಿ, ೧೮೬೦ರಲ್ಲಿ ಸರಕಾರಿ ಮಾದರಿ ಕನ್ನಡ ಪ್ರಾಥಮಿಕ ಶಾಲೆ ಗುಡೂರು(ಹುನಗುಂದ ತಾ.) ೧೮೬೦ರಲ್ಲಿ ಮಾದರಿ ಪ್ರಾಥಮಿಕ ಶಾಲೆ ಗಲಗಲಿ(ಬೀಳಗಿ ತಾ.)ಯಲ್ಲಿ ೧೮೭೨ರಲ್ಲಿ ಮಾದರಿ ಪ್ರಾಥಮಿಕ ಶಾಲೆ, ಕುಂದರಗಿ(ಬೀಳಗಿ ತಾ.)ಯಲ್ಲಿ ೧೮೭೫ರಲ್ಲಿ ಸರಕಾರಿ ಮಾದರಿ ಪ್ರಾಥಮಿಕ ಶಾಲೆ, ಲೋಕಾಪುರ(ಮುಧೋಳ ತಾ.) ೧೮೮೫ರಲ್ಲಿ  ಎ.ವಿ.ಶಾಲೆ ರಬಕವಿಯಲ್ಲಿ, ೧೮೮೬ರಲ್ಲಿ ಸರಕಾರಿ ಮಾಧರಿ ಪ್ರಾಥಮಿಕ ಶಾಲೆ ನಾಗೂರು(ಹುನಗುಂದ ತಾ.)ನಲ್ಲಿ ೧೯೦೬ರಲ್ಲಿ ಕನ್ನಡ ಪ್ರಾಥಮಿಕ ಶಾಲೆ ಮಹಾಲಿಂಗಪುರ(ಮುಧೋಳ ತಾ.)ದಲ್ಲಿ ೧೯೧೪ರಲ್ಲಿ ವಿಜಯ ಮಹಾಂತೇಶ ಎ.ವಿ.ಶಾಲೆ, ಹುನಗುಂದದಲ್ಲಿ, ೧೯೧೫ರಲ್ಲಿ ಜನತಾ ಶಿಕ್ಷಣ ಸಂಘ ಎ.ವಿ.ಶಾಲೆ, ಬನಹಟ್ಟಿಯಲ್ಲಿ, ೧೯೩೯ರಲ್ಲಿ ವಿಜಯ ಮಹಾಂತೇಶ ಸರಕಾರಿ ಹಿರಿಯ ಪ್ರಾಥಮಿಕ ಕೇಂದ್ರ ಇಳಕಲ್ಲನಲ್ಲಿ[೧೭] ಸ್ಥಾಪಿಸುವುದರ ಮೂಲಕ ಇತ್ಯಾದಿ ಸ್ಥಳಗಳಲ್ಲಿ ವಸಾಹತು ಕಾಲದ ಸಂದರ್ಭದಲ್ಲಿ ಬ್ರಿಟಿಷರು ಮತ್ತು ಸ್ಥಳೀಯ ಸಂಘ–ಸಂಸ್ಥೆಗಳು ಶಿಕ್ಷಣ ಪ್ರೇಮಿಗಳ ಪ್ರಯತ್ನದ ಫಲವಾಗಿ ಶಾಲೆಗಳು ಪ್ರಾರಂಭವಾದವು.

ಬ್ರಿಟಿಷರು ಜಿಲ್ಲೆಯಲ್ಲಿ ಕನ್ನಡ ಆಂಗ್ಲ ಮಾಧ್ಯಮ ಮರಾಠಿ ಶಾಲೆಗಳ ಜೊತೆಗೆ ಉರ್ದು ಶಾಲೆಗಳನ್ನು ಸಹ ಆರಂಭಿಸಿದರು. ಇದರಿಂದ ಅಂಗ್ರೇಜಿಯವರ ಶಿಕ್ಷಣ ಸ್ಥಳೀಯ ಭಾಷೆಗಳೊಂದಿಗೆ ಸಮ್ಮಿಲನಗೊಂಡಿತು. ಬ್ರಿಟಿಷರು ವಿಜಾಪುರ ಜಿಲ್ಲೆಯಲ್ಲಿ ಉರ್ದು ಶಾಲೆಗಳನ್ನು ಪ್ರಾರಂಭಿಸಿದಾಗ ಅವುಗಳನ್ನು 'ಹಿಂದುಸ್ಥಾನಿ' ಶಾಲೆಗಳೆಂದು ಕರೆದರು. ಉರ್ದು ಮತ್ತು ಹಿಂದೂಸ್ಥಾನಿಗಳು ಲಿಪಿ ಭೇದಗಳೇ ಹೊರತು ಭಾಷಾ ಭೇದಗಳಲ್ಲ. ಸೂಫಿ, ಸಂತರು, ಭಕ್ತಿ ಪಂಥ ಪ್ರಚಾರ ಮಾಡುವಾಗ ಅರಬ್ಬಿ ಅಥವಾ ಪರ್ಶಿಯನ್ ಭಾಷೆಗಳಿಗಿಂತಲೂ ಉರ್ದು ಭಾಷೆಯನ್ನೇ ಬಳಸಿದರು. ಶೈಕ್ಷಣಿಕ ವರದಿಗಳಂತೆ ೧೮೮೧–೮೨ರ ಸಮಯದಲ್ಲಿ ಜಿಲ್ಲೆಯಲ್ಲಿ ವಿಜಯಪುರ ಬಾಗಲಕೋಟೆ, ತಾಳಿಕೋಟೆ, ಗೊಳಸಂಗಿ ಪ್ರದೇಶಗಳಲ್ಲಿ ಉರ್ದು ಪ್ರಾಥಮಿಕ ಶಾಲೆಗಳು ಪ್ರಾರಂಭವಾದವು. ೧೮೮೫ರಿಂದ ೧೯೦೦ರ ವೇಳೆ ಐದು ಮತ್ತು ೧೯೦೦ರಿಂದ ೧೯೧೦ರ ವರೆಗೆ ಬಾದಾಮಿ, ಕೆರೂರು, ಕಲಾದಗಿ, ಹೊನವಾಡ, ಮುದ್ದೇಬಿಹಾಳದಲ್ಲಿ ಮತ್ತು ಐದು ಉರ್ದು ಶಾಲೆಗಳು ಪ್ರಾರಂಭವಾದವು. ಮುಂದೆ ೧೯೧೧ರಿಂದ ೧೯೨೪ರ

ಅವಧಿಯಲ್ಲಿ ಚೋಳಚಗುಡ್ಡ, ಬೀಳಗಿ, ಇಂಡಿ, ಕಮತಗಿ ಇತ್ಯಾದಿ ಸೇರಿದಂತೆ ೨೧ ಶಾಲೆಗಳು ಪ್ರಾರಂಭವಾದವು. ಮುಂದುವರೆದು ೧೯೨೫ರಿಂದ ೧೯೪೦ರ ಅವಧಿಯಲ್ಲಿ ಮತ್ತೇ ೧೦ ಉರ್ದು ಶಾಲೆಗಳು ಪ್ರಾರಂಭವಾದವು.[೧೮] ಇವತ್ತಿಗೂ ಸಹ ಜಿಲ್ಲೆಯಲ್ಲಿ ಕೆಲವೊಂದು ಉರ್ದು ಶಾಲೆಗಳು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿದೆ. ಕಲಾದಗಿಯಲ್ಲಿ ೧೮೬೬ರಲ್ಲಿ ಮರಾಠಿ ಪ್ರೌಢಶಾಲೆಯೊಂದು ಪ್ರಾರಂಭಗೊಂಡು ೧೮೮೫ರಲ್ಲಿ ವಿಜಯಪುರಕ್ಕೆ ಸ್ಥಳಾಂತರ ಹೊಂದಿತು. ಮುಧೋಳದಲ್ಲಿ ೧೮೮೭ರಲ್ಲಿ ಹಾಗೂ ಜಮಖಂಡಿಯಲ್ಲಿ ೧೮೮೮ರಲ್ಲಿ ಮರಾಠಿ ಪ್ರೌಢಶಾಲೆಗಳು ಸ್ಥಾಪಿಸಲ್ಪಟ್ಟಿತು.[೧೯] ಮುಧೋಳ ಘೋರ್ಪಡೆ ಸಂಸ್ಥಾನಿಕರು ಜಮಖಂಡಿ ಪಟವರ್ಧನ ಸಂಸ್ಥಾನಿಕರ ಉತ್ತೇಜನ ದೊರೆತು ಸಂಸ್ಥಾನಿಕರ ರಾಜಾಶ್ರಯದಲ್ಲಿ ಈ ಭಾಗದ ಶಾಲೆಗಳು ಕಾರ್ಯವನ್ನು ನಿರ್ವಹಿಸುತ್ತಿದ್ದವು.

### ೫.೨. ಧಾರ್ಮಿಕ

ಕ್ರಿಸ್ತನ ಶಿಷ್ಯರಲ್ಲೊಬ್ಬನಾದ ಸಂತ ಥಾಮಸ್ ಎಂಬುವನು ಭಾರತದಲ್ಲಿ ಕ್ರೈಸ್ತ ಧರ್ಮವನ್ನು ಬೋಧಿಸಿದನೆಂತಲೂ, ಅಂದಿನ ಕ್ರೈಸ್ತರೇ ಇಂದು ಸಂತ ಥಾಮಸ್ ಕ್ರಿಶ್ಚಿಯನ್ನರೆಂದು ತಮ್ಮನ್ನು ಕರೆದುಕೊಳ್ಳುವ ಮಲಬಾರಿನ ಕ್ರೈಸ್ತರೆಂದೂ ಹೇಳುವ ಒಂದು ಸಂಪ್ರದಾಯವಿದೆ. ಒಟ್ಟಿನಲ್ಲಿ ಪೂರ್ಚುಗೀಸರ ಆಗಮನಕ್ಕೂ ಹಿಂದೆ ಭಾರತದಲ್ಲಿ ಕ್ರೈಸ್ತರು ಇದ್ದರೆಂಬುದಕ್ಕೆ ಚಾರಿತ್ರಿಕ ಆಧಾರಗಳುಂಟು.[೨೦] ೧೫೬೧ರಲ್ಲಿ ಮತ್ತು ೧೬೨೨ರಲ್ಲಿ ಜೆಸುಯಿಟ್ ಗುರುಗಳು ವಿಜಯಪುರದ ಆದಿಲ್ ಷಾರನ್ನು ಭೇಟಿಯಾಗಿದ್ದರು. ಕ್ರೈಸ್ತಧರ್ಮ ಪ್ರಚಾರಕ್ಕೂ, ಚರ್ಚುಗಳನ್ನು ಕಟ್ಟುವುದಕ್ಕೂ ಬೇಕಾಗಿದ್ದ ಅನುಮತಿಯನ್ನು ಪಡೆದಿದ್ದರು. ೧೬೭೫ರಲ್ಲಿ ಪೋಪ್ ಜಗದ್ಗುರುಗಳು ಕ್ರೈಸ್ತನಾಗಿದ್ದ ಒಬ್ಬ ಬ್ರಾಹ್ಮಣ ಕಾಸ್ಟ್ರೊ(Bishop Mathew Castro) ಎಂಬತನನ್ನು "Vicar Appostle of Bijapur"ಆಗಿ ನೇಮಿಸಿದ್ದರು. ಈತ ಅಲ್ಲಲ್ಲಿ ಚರ್ಚುಗಳನ್ನು ನಿರ್ಮಿಸಿದ್ದರು ಮಾತ್ರವಲ್ಲದೇ ೩೦-೩೫ ಮಂದಿ ದೇಶಿಯ ಕ್ರೈತ ಯುವಕರನ್ನು ಯಾಜಕರನ್ನಾಗಿ ಅಭ್ಯಂಜಿಸಿದ್ದರು. ೧೭ನೇ ಶತಮಾನದ ಉತ್ತರಾರ್ಧದಲ್ಲಿ ಪೀಠ ಮೊಟಕುಗೊಂಡಿತು. ಮೊಗಲರಿಗೂ ವಿಜಯಪುರದ ಷಾಗಳಿಗೂ, ಮರಾಠರಿಗೂ ಪೋರ್ಚುಗೀಸರಿಗೂ ನಡುವೆ ನಡೆಯುತ್ತಿದ್ದ ನಿರಂತರ ಯುದ್ಧಾವಳಿಯಲ್ಲಿ ಈ ಧರ್ಮ ಪೀಠ ತಲೆ ಎತ್ತಿದಂತಾಯಿತು.[೨೧] ಈ ಪೀಠವನ್ನು ಉಜ್ಜೀವನ ಗೊಳಿಸುವ ಕಾರ್ಯವನ್ನು ಕಾರ್ಮೆಲೈಟ್ ಸಭೆ ಗುರುಗಳಿಗೆ ೧೬೯೦ರಲ್ಲಿ ವಹಿಸಲಾಯಿತು. 'ವಿಜಯಪುರ ಪೀಠ'ವಾಗಿ ಆರಂಭಗೊಂಡ ಇದು ಕ್ರಮೇಣ ಮೊಗಲ್ ಕಡೆಗೆ ಮುಂಬಾಯಿ ಪೀಠವಾಗಿ ಪರಿವರ್ತನೆಗೊಂಡಿತು.[೨೨] ಕಾರ್ಮೆಲೈಟ್ ಸಭೆ ಗುರುಗಳು ಈಗಾಗಲೇ ಕ್ರೈಸ್ತರಾಗಿದ್ದ ವರನ್ನು ನೋಡಿಕೊಳ್ಳುವುದರಲ್ಲಿ ಮಗ್ನರಾಗಿದ್ದರೇ ಹೊರತು

ಹೊಸ ಮಿಷನ್‌ಗಳನ್ನು ಆರಂಭಿಸುವ ಹುಮ್ಮಸ್ಸು ಹೊಂದಿರಲಿಲ್ಲ.[೨೩] ಹೀಗಾಗಿ ಕಲಾದಗಿ ಜಿಲ್ಲಾ ಕೇಂದ್ರಕ್ಕಿಂತ ಮೊದಲೇ ವಿಜಯಪುರ ಜಿಲ್ಲೆಗೆ ಕ್ರೈಸ್ತ ಮಿಷನರಿಗಳ ಆಗಮನವಾಗಿರುವುದನ್ನು ಈ ಮೇಲಿನ ಚಾರಿತ್ರಿಕ ದಾಖಲೆಗಳಿಂದ ಗುರುತಿಸಬಹುದು.

ಭಾರತದಲ್ಲಿ ಕ್ರೈಸ್ತಧರ್ಮ ಪ್ರಚಾರಕ್ಕೆ ಬಂದ ಆರಂಭದಲ್ಲೇ ಕರ್ನಾಟಕದ ಉಲ್ಲೇಕವೂ ಸಿಗುತ್ತದೆ. ಕ್ರಿ.ಶ.ಆರನೆಯ ಶತಮಾನದಲ್ಲಿ ಕ್ರೈಸ್ತಧರ್ಮ ಕರ್ನಾಟಕದಲ್ಲಿತ್ತು ಎಂಬ ವಿಚಾರವನ್ನು ಅನೇಕರು ಎತ್ತಿ ಹಿಡಿಯುತ್ತಾರೆ. ಅವರಲ್ಲಿ ಮೈಸೂರು ಗೆಜೆಟಿಯರ್ ಬರೆದ ಸಿ.ಹಯವದನರಾವ್ ಹಾಗೂ ಎಂ.ವಿ.ಕೃಷ್ಣರಾವ್ ಮುಖ್ಯರು ಎಂಬ ವಿಚಾರವನ್ನು ತಲ್ಪಾಡಿಯವರು ಪ್ರತಿಪಾದಿಸಿದ್ದಾರೆ.[೨೪]

ಡೊಮಿನಿಕನ್ ಸಂಘಕ್ಕೆ ಸೇರಿದ ಗುರುಗಳು ಮೊತ್ತಮೊದಲು ಕರ್ನಾಟಕಕ್ಕೆ ಬಂದರು ಎಂಬ ಅಭಿಪ್ರಾಯವಿದೆ. ಮುಂಬೈಯ ಬಳಿ ಕಲ್ಯಾಣ ಠಾಣಾ ಮುಂತಾದ ಕಡೆ ಮತ್ತು ಪ್ರಚಾರ ಮಾಡುತ್ತಿದ್ದ ಫ್ರಾಯರ್ ಜೊರ್ಡನಸ್ ೧೩೨೪ರಲ್ಲಿ ತನ್ನ ಸಹ–ಧರ್ಮೋಪದೇಶಿಕರಿಗಾಗಿ ಸಲ್ಲಿಸಿದ ಮನವಿಯ ಫಲವಾಗಿ ಐದು ಮಂದಿ ಡೊಮಿನಿಕನ್ ಸನ್ಯಾಸಿಗಳು ಕೆನರಾ, ಮೈಸೂರು, ಮಲಬಾರ ಮತ್ತು ಟ್ರಾವಂಕೂರುಗಳಿಗೆ ಧರ್ಮ ಪ್ರಚಾರಕ್ಕಾಗಿ ಬಂದರು. ಈ ಪ್ರದೇಶಗಳಲ್ಲಿ ೧೩೨೮ರ ಹೊತ್ತಿಗೆ ಸುಮಾರು ೧೦,೦೦೦ ಕ್ರೈಸ್ತರು ಇದ್ದರೆಂಬ ದಾಖಲೆ ಇದೆ. ಇವರೆಲ್ಲ ಕೆಥೋಲಿಕ್ ಪಂಗಡಕ್ಕೆ ಸೇರಿದವರಾಗಿದ್ದರು. ಆನಂತರ ೧೫೨೧ರಲ್ಲಿ ಫ್ರಾನ್ಸಿಸನ್ ಸನ್ಯಾಸಿಗಳು 'ಕೆನರಾ'ವನ್ನು ಪ್ರವೇಶ ಮಾಡಿದರು. ಅಂದರೆ ೧೬ನೇ ಶತಮಾನಕ್ಕಿಂತ ಹಿಂದೆ ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ಕ್ರೈಸ್ತಮತ ನೆಲೆಯೂರಿತ್ತು ಎಂಬುದಾಗಿ ಸಿಲ್ವ ಮೊದಲಾದ ಲೇಖಕರು(ನರೋನ, ೧೯೬೬:೫–೭)ತಿಳಿಸುತ್ತಾರೆ.[೨೫]

ಲಿಯೊನಾರ್ಡೊ ಚಿನಾಮಿ ಎಂಬ ಯೇಸು ಸಭೆ(Society of Jesus)ಯ ಗುರು ಗೋವೆಯಿಂದ ೧೬೫೧ರಲ್ಲಿ ಕರ್ನಾಟಕಕ್ಕೆ ಬಂದು ಶ್ರೀರಂಗಪಟ್ಟದಲ್ಲಿ ನೆಲೆಸಿದನು. ಈ ಮೊದಲು ಈತ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲೂ ಇದ್ದವೆಂದೂ, ಅಲ್ಲಿ ಆತನ ಮತ ಪ್ರಚಾರದ ದುಡಿಮೆ ಸಾಕಷ್ಟು ಫಲ ಕೊಡಲಿಲ್ಲವೆಂದೂ, ಆತ ತನ್ನ ಸಭೆಯ ಹಿರಿಯರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾನೆ. ಶ್ರೀರಂಗಪಟ್ಟಣ ಮತ್ತು ಸುತ್ತಮುತ್ತ ಈ ಅನೇಕರನ್ನು ಮತಾಂತರಗೊಳಿಸಿರುವರು. ಈತನ ಸಹಚರರು ಕೂಡಾ ಮೈಸೂರು, ಬೆಂಗಳೂರು, ಹಾಸನ ಮುಂತಾದ ಕಡೆ ಮತ ಪ್ರಚಾರವನ್ನು ಮಾಡಿದರು[೨೬] ಎಂಬುದು ದಾಖಲೆಗಳಿಂದ ತಿಳಿಯುತ್ತದೆ.

ಮುಂದೆ ಮಧುರೈಯಿಂದ ಬಂದ ಯೇಸು ಸಭೆಯ ಗುರುಗಳು ದಾಸಪುರ, ಗಾಡೇನಹಳ್ಳಿ, ಮಗ್ಗೆ, ಹಾರೋಬಲೆ, ಕಾನಕನಹಳ್ಳಿ, ಆನೇಕಲ್‌ಗಳಲ್ಲಿ ಧರ್ಮಕೇಂದ್ರಗಳನ್ನು ಸ್ಥಾಪಿಸಿದರು.

ಮೈಲಾಪುರ ಬಿಷಪ್‌ನ ಅಧಿಕಾರಕ್ಕೆ ಒಳಪಟ್ಟ ಫ್ರೆಂಚ್ ಯೇಸು ಸಭೆಯ ಗುರುಗಳು ಸಹ ೧೨೦೦ರ ಈಚೆಗೆ ಮೈಸೂರು ಪ್ರದೇಶದಲ್ಲಿ ಕೆಲಸ ಮಾಡಿದರು. ಇವರಲ್ಲಿ ಫಾದರ್ ಬೂಶೆರ್, ಫಾದರ್ ಲ ಪೊಂತೇಯ್ನ್, ಫಾದರ್ ಲಗಾಕ್, ಫಾದರ್ ಕಲ್ಮೆ ಇವರು ಪ್ರಮುಖರು. ಸಿರಾ, ಚಿತ್ರದುರ್ಗ, ಕೃಷ್ಣಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿಗಳಲ್ಲಿ ಕ್ರೈಸ್ತಧರ್ಮವನ್ನು ಸ್ಥಾಪಿಸಿದರು.[೨೭]

೧೭೫೯ರಲ್ಲಿ ಪೋರ್ಚುಗೀಸ್ ಸರ್ಕಾರ ಯೇಸು ಸಭೆಯನ್ನು ಬಹಿಷ್ಕರಿಸಿತು. ೧೭೬೪ರಲ್ಲಿ ಫ್ರೆಂಚ್ ಸರ್ಕಾರವು ೧೭೭೩ರಲ್ಲಿ ಪೋಪ್ ಜಗದ್ಗುರವೂ ಈ ಬಹಿಷ್ಕಾರವನ್ನು ಅನುಮೋದಿಸಿದರು. ಇದರಿಂದಾಗಿ ಮೈಸೂರಿನಲ್ಲಿ ಕ್ರೈಸ್ತರ ಧಾರ್ಮಿಕ ಪಾಲನೆಗೆ ಹೊಸ ಮಿಶನರಿ ಸಂಸ್ಥೆಯ ಕಾರ್ಯಕರ್ತರನ್ನು ಬರಮಾಡಿಕೊಳ್ಳಲಾಯಿತು. ಈ ಒಣೆ ಹೊತ್ತ ಸಂಸ್ಥೆಯೇ ಮಿಸ್ಸಿಯೊ ಎತಾಂಜೇರ್ ದೆ ಪರೀ(Missio Entrangerde Paris). ಫ್ರೆಂಚ್ ಫಾರಿನ್ ಮಿಶನ್ ಎಂದು ಇದನ್ನು ಕರೆಯುತ್ತಾರೆ.[೨೮] ಕ್ರೈಸ್ತ ಧರ್ಮದ ಪ್ರಚಾರವನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಕ್ರೈಸ್ತೇತರರ ನಡುವೆ ಕೆಲಸ ಮಾಡುವ ಮಿಶನರಿಗಳು ಕ್ರೈಸ್ತಧರ್ಮ ಪ್ರಚಾರಕ ಮಿಶನ್‌ನ ನಿರ್ದೇಶನಕ್ಕೆ ಒಳಪಟ್ಟು ಪ್ರಚಾರ ಕಾರ್ಯವನ್ನು ಕೈಗೊಳ್ಳುತ್ತಿದ್ದರು. ಈ ಮಿಶನರಿಗಳ ಅಪ್ರತಿಮ ತ್ಯಾಗದ ಫಲವಾಗಿ ಶಿಕ್ಷಣ ಹಾಗೂ ವೈದ್ಯಕೀಯ ಸೇವೆಯಲ್ಲಿ ಕೆಥೋಲಿಕರು ತಮ್ಮನ್ನೇ ತಾವು ತೊಡಗಿಸಿಕೊಂಡರು.

ಬಾಗಲಕೋಟೆ ಜಿಲ್ಲೆಯಲ್ಲಿ ಕ್ರೈಸ್ತರಿಗೆ ಮೂಲ ನೆಲೆಯನ್ನು ಕಲ್ಪಿಸಿಕೊಡುವಲ್ಲಿ ಗುಳೇದ ಗುಡ್ಡ ಪ್ರದೇಶವು ಅತ್ಯಂತ ಮಹತ್ವದ್ದಾಗಿದೆ. ವಿಜಯಪುರ ಜಿಲ್ಲೆಯ(ಈಗಿನ ಬಾಗಲಕೋಟೆ ಜಿಲ್ಲೆ) ಗುಳೇದಗುಡ್ಡದಲ್ಲಿಯ ನಿವಾಸಿಗಳಲ್ಲಿ ಹೆಚ್ಚು ಜನರು ಲಿಂಗಾಯಿತರು ಹಾಗೂ 'ಗುರುನುಡಿ' ಪಂಥದವರು. ಈ 'ಗುರುನುಡಿ' ಶರಣರಲ್ಲಿ ಕೆಲವರು ಮೊದಲು ಪ್ರೊಟೆಸ್ಟೆಂಟ್ ಕ್ರೈಸ್ತರಾಗಿ, ಅಗ್ರಗಣ್ಯನೆಂದರೆ ನಥಾನಿಯೆಟ್ ಯಲ್ಕಿ (Nathanael Yalki)ಎಂಬಾತ. ಈತ ಒಬ್ಬ ಸಂತನಂಥ ಪುಣ್ಯ ಪುರುಷ. 'ಶರೀರೋತ್ತಾನ'(Bodily Resurrection) ಎಂಬ ಸಿದ್ಧಾಂತದಲ್ಲಿ ಗಾಢವಾದ ವಿಶ್ವಾಸ ಇಟ್ಟಿದವನು. ಈತ ಸತ್ತು ಒಂದು ವರ್ಷವಾದ ಮೇಲೂ ಅವನ ದೇಹ ಅಳಿಯದೆ ಉಳಿದಿತ್ತು. ಇದನ್ನು ಕಂಡು ಅಚ್ಚರಿಗೊಂಡು ಊರಿಗರು ಆ ದೇಹವನ್ನು ಹೊತ್ತು ತಮ್ಮ ದೇವಸ್ಥಾನದಲ್ಲೇ ಭೂ ಸ್ಥಾಪನೆ ಮಾಡಿದ್ದಾರೆ. ಅದರ ಮೇಲೆ ಒಂದು ಪೀಠವನ್ನು ನಿರ್ಮಿಸಿದ್ದಾರೆ.[೨೯] ಇವತ್ತು ಆ ಮೂಲ ಪೀಠವನ್ನು ಗುರುತಿಸುವುದು ತುಂಬಾ ಕಷ್ಟ. ಏಕೆಂದರೆ ಚರ್ಚ ಅಥವಾ ಪೀಠವು ಹಲವಾರು ಬಾರಿ ಜೀರ್ಣೋದ್ಧಾರಗೊಂಡಿದ್ದು ಮುಖ್ಯ ಕಾರಣವಾಗಿದೆ.

ಪಾಶ್ಚಾತ್ಯ ಪ್ರಾಚೀನ ಅನ್ವೇಷಕರೆನಿಸಿದ ಕ್ರೈಸ್ತ ಮಿಷನರಿಗಳು ನಮ್ಮ ನಾಡಿನ ಸಾಹಿತ್ಯ, ಚರಿತ್ರೆ, ಜಾನಪದ ಅಧ್ಯಯನಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡದ್ದು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಎಂದು ಗುರುತಿಸಬಹುದು. ರೆ.ವಿಲ್ಯಂ ಮಾರ್ಟಿನ್ ಬಂಗಾಳಿ ಗಾದೆಗಳ ಸಂಗ್ರಹವನ್ನು ೧೮೩೫ರಲ್ಲಿ ಪ್ರಕಟಿಸಿದ್ದರು. ರಾಜಸ್ಥಾನ ಪುರಾಣ ಐತಿಹ್ಯಗಳನ್ನು ಕುರಿತು ಕರ್ನಲ್ ಟೋಡ್ ಕೆಲಸ ೧೮೨೯ರಲ್ಲಿ ಮಾಡಿದ್ದರು. ಪಂಜಾಬಿನ ಜನಪದ ಕತೆಗಳ ಸಂಗ್ರಹವನ್ನು ಸಿ.ಸ್ವಿನ್ನರ್‌ಟನ್ ಪ್ರಕಟಿಸಿದ್ದರು. ಆರ್.ಸಿ.ಟೆಂಪಲ್ ಸಿ.ಎಫ್.ಓಸ್ರೋರ್ ಮುಂತಾದವರು ಜಾನಪದ ಕ್ಷೇತ್ರದಲ್ಲಿ ಆಗಾಗಲೇ ಗುರುತಿಸಿಕೊಂಡಿದ್ದರು. ಈ ಅಧ್ಯಯನವನ್ನು ಮುಂದಿಟ್ಟುಕೊಂಡು ಕನ್ನಡ ಜಾನಪದ ಸಂಗ್ರಹ ಸಂಪಾದನೆಗೆ ಕೆಲವು ಮಿಷನರಿಗಳು ತೊಡಗಿದವು. ಅವರಲ್ಲಿ ಲೌಕಿಕರೂ ಇದ್ದಾರೆ. ಭಾರತೀಯ ಜಾನಪದ ಪಿತಾಮಹನಿಸಿದ ಅಬ್ಬೆ ದು ಬೊಲಿ, ಚಾರ್ಲ್ಸ್ ಇ ಗೋವರ್, ರೆ.ಎಫ್.ಕಿಟೆಲ್, ಜೆ.ಸ್.ಫ್ಲೀಟ್, ಜಾನ್ ಲೇಡನ್, ಕ್ಯಾಪ್ಟನ್ ಮೆಕೆಂಜಿ, ರೆ.ಮೊಗ್ಲಿಂಗ್, ರೆ.ಎ.ಜೆ.ಒ.ಲೈಲ್, ಮೇರಿಪೊರೆ ಮುಂತಾದವರು. ಕನ್ನಡ ಜಾನಪದ ಕ್ಷೇತ್ರದಲ್ಲಿ ಮೊದಲು ಕೃಷಿ ಮಾಡಿದ ಪಾಶ್ಚಾತ್ಯರಾಗಿದ್ದಾರೆ.[೩೦] ಇವರು ಸಂಗ್ರಹಿಸಿದ ಲಾವಣ್ಯ, ಮೌಖಿಕ ಸಾಹಿತ್ಯ, ಜಾನಪದ ಗೀತೆಗಳ ಸಂಗ್ರಹ ಕನ್ನಡ ಪತ್ರಿಕಾ ಸಾಹಿತ್ಯ, ಸ್ಥಳೀಯ ಚರಿತ್ರೆ ಮುಂತಾದ ಸಂಶೋಧನಾತ್ಮಕ ವಿಷಯಗಳ ಸಂಗ್ರಹದಿಂದ ಇಂದಿಗೂ ಸಹ ವಸಾಹತು ಕಾಲದ ಚರಿತ್ರೆಯನ್ನು ದಾಖಲಿಸಲು ಸಹಾಯಕಾರಿಯಾಗಿವೆ. ಪಾಶ್ಚತ್ಯರು ಧರ್ಮ ಪ್ರಸಾರಕ್ಕೆ ಬಂದು ಭಾರತದಲ್ಲಿಯ ಅಗಾಧವಾದ ಸಂಪತ್ತಿನ ಕುರಿತು ಮಾಹಿತಿ ಕಲೆ ಹಾಕಿದರು. ಕ್ರೈಸ್ತ ಧರ್ಮವನ್ನು ಇಡೀ ವಿಶ್ವಮಟ್ಟದಲ್ಲಿ ಪ್ರಸಾರ ಮಾಡುವ ಮೂಲ ಉದ್ದೇಶವನ್ನು ಪಾಶ್ಚತ್ಯ ವಿದ್ವಾಂಸರು ಹೊಂದಿದ್ದರು. ಹಾಗಾಗಿ ಕ್ರೈಸ್ತ ಮಿಷನರಿ, ಚರ್ಚುಗಳ ಮೂಲಕ ಧಾರ್ಮಿಕ ಕಾರ್ಯವನ್ನು ಯಶಸ್ವಿಗೊಳಿಸಿದರು. ಧಾರ್ಮಿಕ ಪ್ರಸಾರದ ಮೂಲ ಕೇಂದ್ರಗಳಾದ ಚರ್ಚುಗಳಲ್ಲಿ ಜನರಿಗೆ ಏಸುವಿನ ಕುರಿತು ಮಾನವೀಯ ಮೌಲ್ಯಗಳು, ಸಮಾನತೆ, ಸಹೋದರತೆಯನ್ನು ಏಸುವಿನ ಪ್ರಾರ್ಥನೆಯ ಮೂಲಕ ಜನರ ಮನಸ್ಸಿನಲ್ಲಿ ಅಚ್ಚಳಿಯದಂತೆ ಮೂಡಿಸುವಲ್ಲಿ ಯಶಸ್ವಿಯಾದರು.

ಧರ್ಮ ಪ್ರಚಾರವನ್ನು ಮುಖ್ಯ ಗುರಿಯನ್ನಾಗಿರಿಸಿಕೊಂಡು ಸ್ಥಾಪಿತವಾದ ಬಾಸೆಲ್ ಮಿಷನ್ ಸಂಸ್ಥೆ ಕರ್ನಾಟಕದಲ್ಲಿ ಮುದ್ರಣೋದ್ಯಮಕ್ಕೆ ತೊಡಗಿ, ಕನ್ನಡದ ಜನಪದ ಗಾದೆ, ಜನಪದ ಕತೆ, ಜನಪದ ಗೀತೆ, ಪುರಾಣ, ಐತಿಹ್ಯಗಳನ್ನು ಮುದ್ರಿಸಿ ಮಹೋಪಕಾರ ಮಾಡಿದೆ. ಕನ್ನಡದ ಜೊತೆಗೆ ತುಳು ಅಥವಾ ಸಂಸ್ಕೃತಗೂ ಈ ಸಂಸ್ಥೆ ಶ್ರಮಿಸಿದೆ. ೧೮೭೨ ರಲ್ಲಿ ಪ್ರಕಟವಾದ ಬ್ರಿಗೆಲ್‌ರ ತುಳು ವ್ಯಾಕರಣದ ಅನುಬಂಧದಲ್ಲಿ ದೊಡ್ಡ ಪ್ರಮಾಣದ ಗಾದೆಗಳ ಸಂಗ್ರಹ ಉಪಯೊಗವಾಗಿದೆ. ಕನ್ನಡ ಜನಪದ ಸಾಹಿತ್ಯ ಸಂಗ್ರಹವನ್ನು ಪ್ರಕಟಿಸಿದ

ಕೀರ್ತಿ ಬಾಸೆಲ್ ಮಿಷನ್ ಪ್ರೆಸ್‌ನದು. ೧೮೯೧ರಲ್ಲಿ ಬಾಸೆಲ್ ಮಿಷನ್ ಸಂಸ್ಥೆಯು ಭೂತ ಸೇವೆ ಎಂಬ ಕನ್ನಡದ ಕೃತಿಯನ್ನು ಪ್ರಕಟಿಸಿದೆ. ರೆ.ಎ.ಸಿ.ಬರ್ನೆಲರ The Devil worship of Tuluvas ಸಂಗ್ರಹದಲ್ಲಿ ಕನ್ನಡ ನಾಡಿನ ಭೂತಗಳ ಬಗ್ಗೆಯೂ ಪ್ರಸ್ತಾವಿದೆ.[೩೧] ಹೀಗೆ ಪಾಶ್ಚಾತರು ಮತ ಪ್ರಚಾರಕ್ಕಾಗಿ ಬಂದು, ಇಲ್ಲೇ ನೆಲೆ ನಿಂತು ಕನ್ನಡ ಸಾಹಿತ್ಯ ಜಾನಪದ ಚರಿತ್ರೆ ಮುಂತಾದ ವಿಷಯವನ್ನು ಸಂಗ್ರಹಿಸಿ ಪ್ರಕಟಿಸಿ ಜನರಲ್ಲಿ ಕ್ರೈಸ್ತ ಮತ ಪ್ರಸಾರ ಮಾಡುವದರೊಂದಿಗೆ ಹಲವಾರು ಧಾರ್ಮಿಕ ಕಾರ್ಯಚಟುವಟಿಕೆಗಳನ್ನು ಬಾಗಲಕೋಟೆ ಜಿಲ್ಲೆಯಲ್ಲಿ ಕೈಗೊಂಡರು.

ಬಾಗಲಕೋಟೆ ಜಿಲ್ಲೆಯಲ್ಲಿ ಚರ್ಚ್‌ಗಳಿರುವಂತಹ ಪ್ರದೇಶಗಳಲ್ಲಿ ಮಾತ್ರ ಹೆಚ್ಚಾಗಿ ಕ್ರೈಸ್ತರು ಧಾರ್ಮಿಕ ಚಟುವಟಿಕೆಗಳನ್ನು ಕೈಗೊಳ್ಳುತ್ತಾರೆ. ಕಟಗಿನಹಳ್ಳಿ, ಆಸಂಗಿ, ಗುಳೇದಗುಡ್ಡ, ಸುಮಡ್ಡಿ, ಮುಷ್ಠಿಗೇರಿ ಗ್ರಾಮಗಳಲ್ಲಿ ಪ್ರತಿವರ್ಷ ಕ್ರಿಸ್‌ಮಸ್ ಆಚರಣೆಯ ಸಂದರ್ಭದಲ್ಲಿ ಕ್ರೈಸ್ತರಿಗಾಗಿ ಸಾಮೂಹಿಕ ವಿವಾಹ ಸಮಾರಂಭ ನಡೆಸುತ್ತಾರೆ. ಅದೇ ದಿನ ಪವಿತ್ರವೆಂದು ಭಾವಿಸಿ ಬಡವರಿಗೆ, ಅಂದರಿಗೆ, ಅನಾಥರಿಗೆ, ದೀನ ದಲಿತರಿಗೆ, ಊಟ, ಬಟ್ಟೆ, ಧನ ಸಹಾಯವನ್ನು ಇಂದಿಗೂ ಸಹ ನೀಡುತ್ತಾ ಬಂದಿರುತ್ತಾರೆ. ಸಹಾಯಕ್ಕಾಗಿ ಯಾರೇ ಧರ್ಮದವರು ಚರ್ಚ್‌ಗೆ ಬಂದರೆ ಕೈಲಾದಷ್ಟು ಸಹಾಯವನ್ನು ಕ್ರೈಸ್ತರು ಮಾಡುತ್ತಾರೆ. ಅದು ಜಾತ್ಯಾತೀತವಾಗಿ ಸಹಾಯ ಹಸ್ತ ಚಾಚಿರುವುದು ಇಂದಿನ ಆಧುನಿಕ ಯುಗದಲ್ಲಿ ಒಂದು ಪ್ರಶಂಸನೀಯವಾದ ಹಾಗೂ ಮೆಚ್ಚುಗೆಯ ಕಾರ್ಯವಾಗಿದೆ. ಬ್ರಿಟಿಷರು ಹೆಚ್ಚಾಗಿ ಚರ್ಚ್‌ಗಳನ್ನು ಜಿಲ್ಲೆಯಲ್ಲಿ ತಾವು ವಾಸ್ತವ್ಯ ಹೂಡುವ ನಿರೀಕ್ಷಣಾ ಮಂದಿರ, ರಸ್ತೆ ಮತ್ತು ರೈಲು ಸಂಪರ್ಕ ನಿಲ್ದಾಣಗಳ ಹತ್ತಿರದಲ್ಲಿ ನಿರ್ಮಿಸಿದರು. ಇದರಿಂದ ಮುಖ್ಯವಾಗಿ ಬ್ರಿಟಿಷ್ ಅಧಿಕಾರಿಗಳಿಗಾಗಿ ಅವರು ಪ್ರಾರ್ಥನೆಯನ್ನು ಸಲ್ಲಿಸುವ ಸಲುವಾಗಿ ನಿರ್ಮಿಸುತ್ತಿದ್ದರು. ಮೂಡನಂಬಿಗಸ್ಥ ಜನಸಮುದಾಯಗಳಲ್ಲಿ ಏಸು, ಕ್ರೈಸ್ತಧರ್ಮದ ಪವಾಡ ಕುರಿತು ಮನ ಮುಟ್ಟುವಂತೆ ಪಾದ್ರಿಗಳು ಬೋಧಿಸುತ್ತಿದ್ದರು. ಕ್ರೈಸ್ತ ಪಾದ್ರಿಗಳ ಮಾತಿಗೆ ಎಷ್ಟೋ ಜನರು ಕ್ರೈಸ್ತಧರ್ಮಕ್ಕೆ ಮನಸೋತು ಅನುಯಾಯಿಗಳಾದ ಉದಾಹರಣೆಗಳು ಗುಳೇದಗುಡ್ಡ, ಆಸಂಗಿ, ಮುಷ್ಠೀಗೇರಿ, ಬಾಗಲಕೋಟೆ ಇತ್ಯಾದಿ ಪ್ರದೇಶಗಳಲ್ಲಿ ಗುರುತಿಸಬಹುದು.

## ೫.೩. ಲೋಕೋಪಯೋಗಿ

### ರೈಲು ಸಾರಿಗೆ ವ್ಯವಸ್ಥೆ

ಭಾರತ ದೇಶವು ವಸಾಹತು ಕಾಲಾವಧಿಯಲ್ಲಿ ರೈಲ್ವೆ ವ್ಯವಸ್ಥೆಯನ್ನು ಹೊಂದಿದ ಅತಿ ದೊಡ್ಡ ರಾಷ್ಟ್ರವಾಗಿದೆ. ವಿಶ್ವದ ದಕ್ಷಿಣ ಭಾಗದಲ್ಲೇ ರೈಲು ಮಾರ್ಗದಲ್ಲಿ ಭಾರತ ನಾಲ್ಕನೇ

ಸ್ಥಾನವನ್ನು ಪಡೆದ ದೇಶವಾಗಿ ಹೊರಹೊಮ್ಮಿತು. ೧೯೦೧ರ ವೇಳೆಗೆ ೨೪,೧೬೫ ಸಾವಿರ ಮೈಲುಗಳನ್ನು ಒಳಗೊಂಡ ರೈಲು ಮಾರ್ಗವಾಗಿತ್ತು. ಅದರಲ್ಲಿ ೧೮೩.೯೮.೦೦೦ ಪ್ರಯಾಣಿಕರು ಸಾಗಿಸುವ ಮತ್ತು ೨೫೪,೯೦೨ ಸಾವಿರ ಕಾರ್ಮಿಕರಿಗೆ ಕೆಲಸವನ್ನು ನೀಡುವ ಬೃಹತ್ ಉದ್ಯಮ ವಾಗಿತ್ತು. ಭಾರತದ ರೈಲ್ವೆ ಇತಿಹಾಸವು ಪ್ರಾರಂಭವಾಗಿದ್ದುದು ಏಪ್ರಿಲ್ ೧೮೫೩ರಲ್ಲಿ ಅಂದಿನಿಂದ ಇಂದಿನವರೆಗೆ ದೇಶದ ಬೆಳವಣಿಗೆಯಲ್ಲಿ ತನ್ನದೇ ಆದ ಮಹತ್ವದ ಪಾತ್ರವನ್ನು ವಹಿಸಿದೆ. ಇದರ ಸ್ಥಾಪನೆಯ ಸ್ವರೂಪವನ್ನು ಕಾಣುವುದಾದರೆ ಸಾರ್ವಜನಿಕ ಉಪಯೋಗದ ಮತ್ತು ದೇಶದ ಅಭಿವೃದ್ಧಿಯ ಉದ್ದೇಶಕ್ಕಿಂತ ಸ್ಥಳೀಯ ಸಂಪನ್ಮೂಲಗಳ ಸಮರ್ಪಕವಾಗಿ ಬಳಸಿಕೊಳ್ಳುವ ಉದ್ದೇಶವನ್ನು ವಸಾಹತುಶಾಹಿ ಪ್ರಭುತ್ವವು ಹೊಂದಿತ್ತು.[೨] ವಸಾಹತುಶಾಹಿಯ ಮುಖ್ಯ ಕಲ್ಪನೆ ಇದಾಗಿದೆ.

ಭಾರತದ ರೈಲ್ವೆ ಸಾರಿಗೆಯ ಬಗೆಗೆ ಮೊಟ್ಟಮೊದಲು ಮಾತುಕತೆ ಅಥವಾ ಚರ್ಚೆ ಪ್ರಾರಂಭವಾದದ್ದು ೧೮೩೧–೩೨ರಲ್ಲಿ ಇದಕ್ಕಿಂತ ಪೂರ್ವದಲ್ಲೆ ಇಂಗ್ಲೆಂಡಿನಲ್ಲಿ ರೈಲ್ವೆಗಳ ಪರಿಚಯವಾಗಿತ್ತು. ಭಾರತಕ್ಕೆ ರೈಲುಗಳ ಪರಿಚಯವನ್ನು ಮಾಡುವ ಮುಖ್ಯ ಉದ್ದೇಶವು ಇಲ್ಲಿಯ ಕಚ್ಚಾ ವಸ್ತುಗಳನ್ನು ತಮ್ಮ ನಾಡಿಗೆ ರವಾನಿಸುವುದು ಮತ್ತು ಅಲ್ಲಿಯ ಸಿದ್ಧ ವಸ್ತುಗಳನ್ನು ಭಾರತಕ್ಕೆ ರವಾನಿಸುವ ಹಿನ್ನೆಲೆಯಲ್ಲಿ ಇಂಡಿಯನ್ ಬೋರ್ಡಿನ ಅಧ್ಯಕ್ಷರಾಗಿ ಸರ್ ಚಾರ್ಲ್ಸ್ ವುಡ್ಸ್ ೧೯ನೇ ಶತಮಾನದ ಪೂರ್ವದಲ್ಲಿ ಬೃಹತ್ ಪ್ರಮಾಣದ ಭಾರತದಿಂದ ಕಚ್ಚಾ ಹತ್ತಿಗಳನ್ನು ರಫ್ತನ್ನು ಮಾಡಲು ಸೂಕ್ತ ಸಾರಿಗೆ ವ್ಯವಸ್ಥೆಯ ಅವಶ್ಯಕತೆಯಿದೆ ಎಂದು ತಿಳಿಸಿದರು. ನಂತರ ೧೮೪೪ರಲ್ಲಿ ಮ್ಯಾಕ್ ಡೊನಾಲ್ಡ್ ಸ್ಟೆಫಿಸನ್ ಕಲ್ಕತ್ತದಿಂದ ಉತ್ತರ ವಾಯುವ್ಯ ಭಾರತವನ್ನು ಸಂಪರ್ಕಿಸುವ ರೈಲ್ವೆ ಸಾರಿಗೆಯ ಅಗತ್ಯತೆಯನ್ನು ಎತ್ತಿ ಹಿಡಿದರು. ಅದೇ ವರ್ಷ ಮ್ಯಾಂಚೆಸ್ಟರ್ ಮತ್ತು ಗ್ಲಗೌನ ಛೇಂಬರ್ ಆಫ್ ಕಾಮರ್ಸ್‌ನಲ್ಲಿ ಅಲ್ಲಿಯ ವಾಣಿಜ್ಯೋದ್ಯಮಿಗಳು ಭಾರತದ ಬಾಂಬೆಯಿಂದ ಹತ್ತಿಗಳನ್ನು ರಫ್ತು ಮಾಡಲು ರೈಲ್ವೆಯ ಸಾರಿಗೆಯು ಬೇಕೆಂದು ಅಧಿಕೃತವಾಗಿ ಬೇಡಿಕೆಯನ್ನು ಬ್ರಿಟಿಷ್ ಪ್ರಭುತ್ವದ ಮುಂದಿಟ್ಟರು. ಈಗಾಗಲೇ ಬ್ರಿಟನ್ನಿನಲ್ಲಿ ವಾಣಿಜ್ಯವಾದದ ಎರಡನೆ ಹಂತವು ಮುಗಿದಿದ್ದು, ಬಂಡವಾಳದ ಸಂಚಯನ ಆರಂಭವಾಗಿತ್ತು. ಬಂಡವಾಳಗಾರರು ತಮ್ಮ ಬಂಡವಾಳವನ್ನು ಹೂಡಿಕೆ ಮಾಡಲು ಉತ್ತಮ ಕ್ಷೇತ್ರದ ಶೋಧನೆಯನ್ನು ಮಾಡುತ್ತಿದ್ದರು. ಆಗ ಲಾರ್ಡ್ ಡಾಲ್ ಹೌಸಿ ಭಾರತದ ರೈಲ್ವೆ ಕ್ಷೇತ್ರವು ತಮ್ಮ ದೇಶದ ಬಂಡವಾಳಗರರು ಬಂಡವಾಳವನ್ನು ಹೂಡಲು ಉತ್ತಮ ಕ್ಷೇತ್ರವೆಂದು ಹೇಳಿದನು. ಇವೆಲ್ಲದರ ಜೊತೆಗೆ ವಸಾಹತು ಪ್ರಭುತ್ವದ ಆಡಳಿತದ ಉದ್ದೇಶದ ನೆಲೆಯಲ್ಲಿಯೂ ಯೋಚಿಸಿ ಬ್ರಿಟಿಷರು ರೈಲ್ವೆ ಸಾರಿಗೆಯನ್ನು ಭಾರತದಲ್ಲಿ ತರಲು ಚಿಂತಿಸಿದರು. ೧೮೪೪ರಲ್ಲಿ ಭಾರತದ ಗವರ್ನರ್ ಜನರಲ್‌ರಾಗಿದ್ದ ಲಾಡ್ ಹೇಸ್ಟಿಂಗ್ ತನ್ನ

ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಭಾರತದ ರೈಲ್ವೆ ಸಾರಿಗೆಯ ಅಗತ್ಯದ ಬಗ್ಗೆ ಒಂದು ಪತ್ರವನ್ನು ಬರೆದನು. ಇದೇ ವಿಚಾರಕ್ಕೆ ಒತ್ತನ್ನು ನೀಡುತ್ತಾ ಲಾರ್ಡ್ ಡೌಲ ಹೌಸಿ ಹೇಳಿದಂತೆ "ತಮ್ಮ ವಸಾಹತು ಪ್ರದೇಶಗಳ ಮೇಲೆ ಆಡಳಿತವನ್ನು ಸರಳವಾದ ರೀತಿಯ ನಿರ್ವಹಣೆ ಮಾಡಲು ಮತ್ತು ಮಿಲಿಟರಿ ಹಿಡಿತವನ್ನು ಸಾಧಿಸಲು ಬ್ರಿಟಿಶ್ ಪ್ರಭುತ್ವಕ್ಕೆ ರೈಲ್ವೆ ಸಾರಿಗೆಯ ಅಗತ್ಯವಿದೆ". ಇದೇ ಸಂದರ್ಭದಲ್ಲಿ ೧೮೫೭ರ ದಂಗೆ ಸ್ಫೋಟಗೊಂಡಿತು. ಇದು ವಸಾಹತುಶಾಹಿ ಪ್ರಭುತ್ವವನ್ನು ಭಾರತದ ರೈಲ್ವೆ ಸಾರಿಗೆ ಅಗತ್ಯತೆಯ ಬಗ್ಗೆ ಚಿಂತಿಸುವಂತೆ ಮಾಡಿತು ಹಾಗೂ ರೈಲ್ವೆ ಸಾರಿಗೆ ಅಭಿವೃದ್ಧಿಯಲ್ಲಿ ಆಸಕ್ತಿಯನ್ನು ವಹಿಸುವಂತೆ ಮಾಡಿತು.[೩೩] ಹೀಗಾಗಿ ಭಾರತಕ್ಕೆ ರೈಲ್ವೆ ಅನಿವಾರ್ಯವಾಯಿತು.

೧೮೫೨ರ ಏಪ್ರಿಲ್ ೨೯ರಂದು ಬಾಂಬೆಯಿಂದ ಥಾಣೆಗೆ ೧೪ ಕೋಚ್‌ಗಳನ್ನು ಒಳಗೊಂಡ ರೈಲು ಸಂಚಾರವನ್ನು ಪ್ರಾರಂಭಿಸಿತು. ಇದರೊಂದಿಗೆ ಭಾರತದ ರೈಲು ಸಂಪರ್ಕದ ನೀಲಿ ನಕ್ಷೆಯನ್ನು ಲಾರ್ಡ್ ಡೌಲ್ ಹೌಸಿ ವರದಿಯನ್ನು ಪ್ರಕಟಿಸುತ್ತಾ ಬ್ರಿಟನ್ನಿನ ಖಾಸಗಿ ಏಜನ್ಸಿಗಳಿಗೆ ಭಾರತದ ರೈಲ್ವೆ ನಿರ್ಮಾಣದ ಹಕ್ಕನ್ನು ನೀಡುವ ಅಂಶವನ್ನು ತಿಳಿಸಿದರು. ಇದರ ನೆಲೆಯಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಖಾಸಗಿ ಕಂಪನಿಯಾದ ಗ್ರೇಟ್ ಇಂಡಿಯನ್ ಪೆನೆನಸುಲಾರ್ ರೈಲ್ವೆ ಕಂಪನಿ ಜೊತೆಗೂಡಿ ಭಾರತದ ರೈಲ್ವೆ ಕಾಮಗಾರಿಯನ್ನು ಕೈಗೆತ್ತಿಕೊಂಡಿತು. ಇದರಿಂದಾಗಿ ಭಾರತೀಯ ರೈಲ್ವೆ ಉದ್ಯಮ ಪ್ರಾರಂಭಗೊಂಡಿತು. ಈ ಉದ್ಯಮಕ್ಕೆ ಗ್ಯಾರಂಟಿ ಸ್ಕಿಮ್ ಆಧಾರದ ಮೇರೆಗೆ ಬ್ರಿಟನಿನ್ನ ಬಹುಸಂಖ್ಯಾತ ಬಂಡವಾಳಗಾರರು ತಮ್ಮ ಬಂಡವಾಳವನ್ನು ಶೇ.೪ ರಿಂದ ೫ರಷ್ಟು ಲಾಭಾಂಶದ ಉದ್ದೇಶದಿಂದ ಹೂಡಿದರು. ಬ್ರಿಟನಿನ್ನ ಬಂಡವಾಳಗಾರರಿಗೆ ಲಾಭಾಂಶವನ್ನು ನೀಡುವುದಾಗಿ ಇಲ್ಲಿಯ ಭಾರತೀಯ ಪ್ರಭುತ್ವ ಭರವಸೆಯನ್ನು ಹೊಣೆಗಾರಿಕೆಯನ್ನು ಹೊತ್ತಿತ್ತು.

ಹೀಗೆ ಪ್ರಾರಂಭಗೊಂಡ ಭಾರತೀಯ ರೈಲ್ವೆ ಸಾರಿಗೆ ಕಾಮಗಾರಿಯನ್ನು ಒಟ್ಟು ಎಂಟು ಖಾಸಗಿ ಕಂಪನಿಗಳು ನಿರ್ವಹಿಸಲು ಮುಂದಾದವು. ಅವುಗಳೆಂದರೆ, ೧೮೫೩ರಲ್ಲಿ ಸ್ಥಾಪಿತಗೊಂಡ ಈಸ್ಟ್ ಇಂಡಿಯನ್ ರೈಲ್ವೆ, ೧೮೫೩ರ ಗ್ರೇಟ್ ಇಂಡಿಯನ್ ಪೆನಿನ್‌ಸುಲಾರ್ ರೈಲ್ವೆ, ೧೮೫೫ರ ಸಿಂಧ್ ಪಂಜಾಬ್ ಆಫ್ ಡೆಲ್ಲಿ ಕಂಪನಿ, ೧೮೫೭ರ ಈಸ್ಟ್ರನ್ ಬೆಂಗಾಲ್ ರೈಲ್ವೆ ಕಂಪನಿ, ೧೮೫೭ರ ಬಾಂಬೆ, ಬರೋಡಾ ಅಂಡ್ ಸೆಂಟ್ರಲ್ ಇಂಡಿಯಾ ರೈಲ್ವೆ ಮತ್ತು ಮದ್ರಾಸ್ ರೈಲ್ವೆ ಗ್ಯಾರಂಟೆಡ್ ಕಂಪನಿಗಳು ಒಟ್ಟು ೫೦೦೦ ಮೈಲು ರೈಲು ಸಾರಿಗೆಯನ್ನು ನಿರ್ಮಾಣದ ಕಾರ್ಯವನ್ನು ಭಾರತದಲ್ಲಿ ಕೈಗೆತ್ತಿಕೊಂಡಿತು. ಈ ಕಂಪನಿಗಳ ಮುಖ್ಯ ಉದ್ದೇಶವು ಈ ರೈಲು ಸಾರಿಗೆಯ ಮೂಲಕ ಭಾರತದಿಂದ ಕಚ್ಚಾ ಮಾಲುಗಳನ್ನು ತಮ್ಮ

ದೇಶವಾದ ಯುರೋಪ್ ಖಂಡಕ್ಕೆ ರಫ್ತನ್ನು ಮಾಡುವ ಹಿನ್ನೆಲೆಯಲ್ಲಿ ಕಚ್ಚಾ ವಸ್ತು ಅಥವಾ ಸಾಮಗ್ರಿಗಳ ತೊರೆಯುವ ಪ್ರದೇಶದಿಂದ ರೇವು ಪಟ್ಟಣಕ್ಕೆ ಸಾರಿಗೆ ಸಂಪರ್ಕವನ್ನು ಏರ್ಪಡಿಸುವುದಾಗಿತ್ತು.[೩೪] ರೈಲ್ವೆ ಬ್ರಿಟಿಷರಿಗೆ ಮುಖ್ಯವಾಗಿ ಆರ್ಥಿಕ ಲಾಭಾಂಶಕ್ಕೆ ಮಾತ್ರ ಸೀಮಿತವಾಗಿದ್ದು, ನಂತರದಲ್ಲಿ ಸಾರ್ವಜನಿಕರ ಉಪಯೋಗಕ್ಕೆ ರೈಲು ಅನುಕೂಲವಾಯಿತು.

ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಯ ಚರಿತ್ರೆಯಲ್ಲಿ ಬಾಗಲಕೋಟೆ ಜಿಲ್ಲೆಯ ಕಲಾದಗಿ ಕಂಟೋನ್ಮೆಂಟ್ ದಂಡು ಪ್ರದೇಶ ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಬೆಳೆಗಳನ್ನು ರಫ್ತು ಮಾಡುವ ಮಹತ್ವದ ಕೇಂದ್ರವಾಗಿತು. ಭಾರತದ ರೈಲ್ವೆ ಸಾರಿಗೆ ಅಭಿವೃದ್ಧಿಯ ಹಿನ್ನೆಲೆಯೊಂದಿಗೆ ವಸಾಹತುಶಾಹಿ ಪ್ರಭುತ್ವದ ಉದ್ದೇಶವನ್ನು ಮೂರು ಮುಖ್ಯ ಹಂತಗಳಲ್ಲಿ ಗುರುತಿಸಬಹುದು. ಆರಂಭದಿಂದ ೧೮೫೦ರ ದಶಕದ ತನಕ ಇವರ ಉದ್ದೇಶ ಕಚ್ಚಾ ವಸ್ತುಗಳನ್ನು ಮತ್ತು ಸಿದ್ಧ ವಸ್ತುಗಳನ್ನು ರವಾಸಿವುದಾಗಿದ್ದುದು ಮೊದಲನೆಯ ಉದ್ದೇಶವಾಗಿದೆ. ೧೮೫೦ರಿಂದ ೧೮೬೦ ದಶಕದಲ್ಲಿ ತಮ್ಮ ಆಡಳಿತ ಮತ್ತು ಮಿಲಿಟರಿ ಭದ್ರತೆಯನ್ನು ಕಾಯ್ದುಕೊಳ್ಳುವ ಎರಡನೆಯ ಉದ್ದೇಶವಿಟ್ಟುಕೊಂಡು ರೈಲ್ವೆ ಸಾರಿಗೆಯನ್ನು ಅಭಿವೃದ್ಧಿಪಡಿಸಿದರು. ೧೮೬೦ರ ನಂತರದ ದಶಕದಲ್ಲಿ ಅವರ ರೈಲ್ವೆ ಅಭಿವೃದ್ಧಿಯ ಮುಖ್ಯ ಹಾಗೂ ಮೂರನೆಯ ಉದ್ದೇಶವು ತನ್ನ ದೇಶದ ಬಂಡವಾಳದ ಸಂಚಯನವನ್ನು ಭಾರತದ ಉದ್ಯಮಗಳಲ್ಲಿ ಹೂಡಲು ಮತ್ತು ವಾಣಿಜ್ಯ-ವ್ಯಾಪಾರದ ಉದ್ದೇಶದ ಹಿನ್ನೆಲೆಯಲ್ಲಿ ರೈಲ್ವೆ ಸಾರಿಗೆಯಲ್ಲಿ ಅಭಿವೃದ್ಧಿಯನ್ನು ಕಾಣಬಹುದಾಗಿದೆ. ಇಂತಹ ಲೋಕೋಪ ಯೋಗಿ ಕಾರ್ಯಗಳನ್ನು ಕೈಗೊಳ್ಳುವುದರಿಂದ ಸ್ಥಳೀಯರಿಗಿಂತ ಹೆಚ್ಚಾಗಿ ಬ್ರಿಟಿಷರಿಗೆ ಹೆಚ್ಚು ಅನುಕೂಲರವಾಗಿರುತ್ತಿತ್ತು. ಅಂದು ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಇಂದಿಗೂ ಸಹ ಗಟ್ಟಿಮುಟ್ಟಾಗಿರುವುದು ನೋಡಿದರೆ ಆಧುನಿಕ ಸೇತುವೆಗಳು ಯಾವು ಲೆಕ್ಕಕ್ಕಿಲ್ಲ. ಬ್ರಿಟಿಷರು ಭಾರತದಲ್ಲಿ ಭದ್ರವಾಗಿ ನೆಲೆಯೂರುತ್ತವೆ ಎಂಬ ದೃಢವಾದ ನಂಬಿಕೆಯಿಂದ ವಸಾಹತು ಕಾಲದಲ್ಲಿ ಸ್ಮಾರಕಗಳನ್ನು ಸುವ್ಯವಸ್ಥಿತವಾಗಿ ಗಟ್ಟಿಮುಟ್ಟಾಗಿ ನಿರ್ಮಿಸಿದರು.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಭಾಗದಲ್ಲಿ ಮುಂಬಯಿ ಕರ್ನಾಟಕದಲ್ಲಿ ರೂಪಿಸಲ್ಪಟ್ಟ ಮೂರು ರೈಲು ಮಾರ್ಗಗಳಲ್ಲಿ ಪೂರ್ವ ಡೆಕ್ಕನ್ ಅಥವಾ ಹೂಟಗಿ ಗದಗ ರೈಲು ಮಾರ್ಗವು ವಿಜಯಪುರ ಇಂಡಿ, ವಿಜಯಪುರ-ಬಾಗೇವಾಡಿ, ಬಾಗಲಕೋಟೆ ಹಾಗೂ ಬಾದಾಮಿ ತಾಲೂಕುಗಳ ಮೂಲಕ ಸಾಗುತ್ತಿದ್ದು, ಇದರಿಂದ ಜಿಲ್ಲೆಯ ಕೆಲವು ಭಾಗಗಳಿಗೆ ರೈಲು ಸಂಪರ್ಕ ಲಭಿಸಿ ಸರ್ವ ಋತುಗಳಲ್ಲೂ ಸರಕು ಸಾಗಣಿಕೆ ಸುಲಲಿತವಾಗಿ ನಡೆಯುವಂತಾಯಿತು. ಮೊದಲನೆಯ ಜಾಗತಿಕ ಯುದ್ಧದ ನಂತರ ರಸ್ತೆ, ಸೇತುವೆಗಳ

ನಿರ್ಮಾಣದಿಂದ ಸಾರಿಗೆ ಸುಧಾರಿಸಲ್ಪಟ್ಟಿತು. ಕ್ರಮೇಣ ಮೋಟಾರು ವಾಹನಗಳ ಸಂಚಾರವೂ ಆರಂಭವಾಯಿತು. ಅಂಚೆ, ತಂತಿ, ದೂರವಾಣಿ ಸೇವೆಗಳ ಕ್ರಮೇಣ ಜಿಲ್ಲೆಯ ವಾಣಿಜ್ಯ ಹಾಗೂ ಕೈಗಾರಿಕೆಗಳ ಪ್ರಗತಿಗೆ ಸಾಕಷ್ಟು ನೆರವು ನೀಡಿದವು.[೩೫] ಇಂತಹ ಬೆಳವಣಿಗೆಗಳಿಂದ ದಿನದಿಂದ ದಿನಕ್ಕೆ ರೈಲು ಮತ್ತು ರಸ್ತೆ ಸಾರಿಗೆಗಳು ಗಣನೀಯವಾಗಿ ಬೆಳವಣಿಗೆಯನ್ನು ಹೊಂದಿ ಜನರ ಸೇವೆಗೆ ಮುಕ್ತವಾದವು.

ಪೂರ್ವ ಡೆಕ್ಕನ್ ಅಥವಾ ಹೂಟಗಿ–ಗದಗ ಮೀಟರ್ ಗೇಜ್ ರೈಲು ಮಾರ್ಗದ ನಿರ್ಮಾಣ ಕಾರ್ಯವು ಬರಗಾಲ ಕಾಮಗಾರಿಯಾಗಿ ೧೮೭೯ರ ಏಪ್ರಿಲ್ ತಿಂಗಳಲ್ಲಿ ಆರಂಭಗೊಂಡಿತಾದರೂ ಅನಿವಾರ್ಯ ಕಾರಣಗಳಿಂದಾಗ ತಟಸ್ಥವಾಯಿತು. ಮುಂದೆ ಮುಂಬಯಿ ಸರ್ಕಾರ ೧೮೮೧ರ ನವೆಂಬರ್ ತಿಂಗಳಲ್ಲಿ ಇದನ್ನು ಪುನರಾರಂಭಿಸಿ ೧೮೮೪ರ ಅಕ್ಟೋಬರ್ ಒಂದರಂದು ಅದರ ನಿರ್ವಹಣೆಯನ್ನು ಸದರನ್ ಮರಾಠ ರೈಲು ಕಂಪನಿಗೆ ವಹಿಸಿಕೊಟ್ಟಿತು. ಈ ಮಾರ್ಗ ೧೮೮೪ರಲ್ಲಿ ಆರಂಭಗೊಂಡಿತು.[೩೬] ಇಡೀ ದೇಶದಲ್ಲಿ ಜನಜೀವನ ಬರಗಾಲದಿಂದ ಅಸ್ತವ್ಯಸ್ತಗೊಂಡಿದರ ಪ್ರಯುಕ್ತ ಬಾರಿ ಚಾಣಕ್ಷತನದಿಂದ ಜನರನ್ನು ರೈಲು ಕಾಮಗಾರಿ ಕೆಲಸಕ್ಕಾಗಿ ನಿಯೋಜಿಸಿಕೊಂಡು ಒಂದೇ ಏಟಿಗೆ ಎರಡು ಹಣ್ಣು ಬೀಳುವಂತೆ ಕೆಲಸ ನಿರ್ವಹಿಸಿದರು. ಮುಖ್ಯವಾಗಿ ರೈಲು ಮಾರ್ಗ ನಿರ್ಮಾಣ ಹಾಗೆಯೇ ಬರಗಾಲದಲ್ಲಿ ಜನರಿಗೆ ಉದ್ಯೋಗ ಸೃಷ್ಟಿಸಿ ಅಂದಿನ ಪರಿಸ್ಥಿತಿಯನ್ನು ನಿಭಾಯಿಸಿ ಬ್ರಿಟಿಷರು ಏಕಕಾಲದಲ್ಲಿ ಎರಡು ಕೆಲಸಕಾರ್ಯಗಳನ್ನು ನಿರ್ವಹಿಸಿದರು. ಬ್ರಿಟಿಷರು ರೈಲು ಸಾರಿಗೆಗೆ ನೀಡಿದ ಕೊಡುಗೆ ಜಿಲ್ಲೆಗೆ ಅಪಾರವಾದದು. ಅಂದರೆ ಗದಗ, ಹೂಟಗಿ ಮಧ್ಯೆ ರೈಲು ಮಾರ್ಗವನ್ನು ಆರಂಭಿಸಿ ಈ ಭಾಗದ ಜನರಿಗೆ ರಸ್ತೆಯ ಸಾರಿಗೆಯ ಜೊತೆಗೆ ರೈಲು ಸಾರಿಗೆ ಸೌಭಾಗ್ಯವನ್ನು ಕಲ್ಪಿಸಿದರು. ಮೊದಲಿಗೆ ಈ ರೈಲು ಮಾರ್ಗ ಮೀಟರ್ ಗೇಜ್‌ನಿಂದ ಆರಂಭವಾಗಿ ನೂರಾರು ವರ್ಷಗಳ ಕಾಲ ಕಾರ್ಯ ನಿರ್ವಹಿಸಿತು. ನಂತರ ದಿನಗಳಲ್ಲಿ ಆಧುನಿಕ ಜನದಟ್ಟಣೆ ಪರಿಣಾಮವಾಗಿ ಸರಕಾರದ ಸಹಾಯದಿಂದ ನ್ಯಾರೋಗೇಜ್ ರೈಲುಮಾರ್ಗವಾಗಿ ಅಭಿವೃದ್ಧಿಪಡಿಸಲಾಯಿತು. ಮುಂದುವರೆದು ಇಂದು ಬ್ರಾಡ್‌ಗೇಜ್ ರೈಲು ಮಾರ್ಗ ಅಳವಡಿಸಲಾಗಿದೆ.

ಬ್ರಿಟಿಷರು ರೈಲು ಮಾರ್ಗವನ್ನು ನಿರ್ಮಿಸುವಾಗ ನದಿ, ಹಳ್ಳ, ಕೊಳ್ಳಗಳಿಂದ ರೈಲು ಸಂಪರ್ಕ ಕಡಿತಗೊಳ್ಳಬಾರದೆಂಬ ಸದುದ್ದೇಶದಿಂದ ರೈಲು ಸೇತುವೆಗಳನ್ನು ನಿರ್ಮಿಸಿದ್ದಾರೆ. ಗದಗದಿಂದ ಪ್ರಾರಂಭವಾದ ರೈಲು ಮಾರ್ಗದಲ್ಲಿ ಹೊಳೆ ಆಲೂರು, ಬಾದಾಮಿ, ಗುಳೇದಗುಡ್ಡ ರೋಡ್, ಬಾಗಲಕೋಟೆ, ಮುಗಳೊಳ್ಳಿ ಈ ಪ್ರದೇಶಗಳಲ್ಲಿ ವ್ಯವಸ್ಥಿತವಾದ ರೈಲು ಸೇತುವೆಗಳನ್ನು

ನಿರ್ಮಿಸಿದ್ದರು. ಇದರಲ್ಲಿ ಕೆಲವೊಂದು ಸೇತುವೆಗಳು ನೆಲಸಮಗೊಂಡಿವೆ. ಅದರಲ್ಲಿ ವಿಶೇಷವಾಗಿ ಬಾಗಲಕೋಟೆಯ ಹತ್ತಿರ ಏಂಟರ್‌ಪೂಲ್ ಒಂದರ ಪೂಲ್ ಇಂದಿಗೂ ವ್ಯವಸ್ಥಿತವಾಗಿದ್ದು, ನದಿಯ ನೀರು ಕ್ರಮೇಣ ಇಳಿಮುಖವಾದ ಮೇಲೆ ಜನರಿಗೆ ಕೃಷಿ ಚಟುವಟಿಕೆಗಳನ್ನು ನಡೆಸಲು ಎತ್ತಿನ ಚಕ್ಕಡಿ, ಜನರಿಗೆ ಕಾಲುದಾರಿಯಾಗಿ ಸಂಪರ್ಕವನ್ನು ಒದಗಿಸುತ್ತದೆ. ಇಂತಹ ಸೇತುವೆಗಳು ಇಂದಿಗೂ ಸಹ ಗಟ್ಟಿಮುಟ್ಟಾಗಿರುವುದನ್ನು ಗಮನಿಸಿದರೆ ಯುರೋಪಿಯನ್ ಇಂಜನಿಯರುಗಳ ತಾಂತ್ರಿಕತೆ, ವಿನ್ಯಾಸ ಎಷ್ಟೊಂದು ಮಹತ್ವಪೂರ್ಣವಾದುದು ಎಂಬುದು ತಿಳಿಯುತ್ತದೆ. ಎಷ್ಟೇ ಗಾಳಿ, ಬೀಸಿಲು ನೀರು ಬಂದರೂ ಸಹ ಒಂದೇ ಒಂದು ಕಲ್ಲು ಕಿತ್ತಿಲ್ಲ. ಹಾಗಾಗಿ ಜನರೊಂದಿಗೆ ಜೀವನಾಡಿಯಾಗಿ ಸಂಪರ್ಕದ ಸೇತುವೆಗಳು ಇಂದಿಗೂ ಕಾರ್ಯನಿರ್ವಹಿಸುತ್ತಿವೆ.

## ರಸ್ತೆ ಸಾರಿಗೆ ವ್ಯವಸ್ಥೆ

ಒಂದು ಪ್ರದೇಶವು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕವಾಗಿ ಅಭಿವೃದ್ಧಿಯನ್ನು ಹೊಂದಲು ಮುಖ್ಯವಾಗಿರುವುದು ಸಾರಿಗೆ ವ್ಯವಸ್ಥೆಯಾಗಿದೆ. ಅದು ಜಲ, ವಾಯು, ಭೂ ಸಾರಿಗೆ ಇದರಲ್ಲಿ ಒಂದಲ್ಲ ಒಂದು ಸಾರಿಗೆಯಿಂದಲೇ ಬೆಳವಣಿಗೆಯಾಗಿರುತ್ತದೆ. ಸಾರಿಗೆಯ ವ್ಯವಸ್ಥೆಯು ಆದಿ ಶಿಲಾಯುಗದಿಂದ ಹಿಡಿದು ಆಧುನಿಕಯುಗ ಅಂದರೆ ಇವತ್ತಿನ ವರೆಗೂ ಕೂಡಾ ಹಲವಾರು ರೀತಿಯ ಏಳುಬೀಳುಗಳಿಂದ ಕೂಡಿದ್ದು, ಬದಲಾವಣೆಯೇ ಜಗದ ನಿಯಮವೆಂಬಂತೆ ಸಾರಿಗೆ ವ್ಯವಸ್ಥೆಯು ಅಭಿವೃದ್ಧಿಯಾಗಿರುವುದನ್ನು ಗುರುತಿಸಬಹುದು. ಮಾನವ ತನಗೆ ಅವಶ್ಯಕವಿರುವ ವಸ್ತುಗಳ ಪೂರೈಕೆಗಾಗಿ ತನಗೆ ಹೊಂದಿಕೊಂಡು ಜನಜೀವನ ನಡೆಸಲು ಯೊಗ್ಯವಾದ ಹವಾಗುಣ ಮತ್ತು ವಾಯುಗಣ ಎಲ್ಲಿದೆಯೋ ಅಲ್ಲಿ ನೆಲೆ ನಿಲ್ಲಲ್ಲು ಈ ನಿಸರ್ಗದ ಜಾಡು ಹಿಡಿದು ವಿಶ್ವಪರ್ಯಾಟನೆಯನ್ನು ಮಾಡಿರುವುದು ಸಾರಿಗೆ ವ್ಯವಸ್ಥೆಯಿಂದಲೇ ಸಾಧ್ಯವಾಗಿದೆ ಎಂದು ಸ್ಪಷ್ಟಪಡಿಸಬಹುದು.

ಸುಮಾರು ಕ್ರಿ.ಶ.೧೫೦ರಲ್ಲಿ ಭಾರತಕ್ಕೆ ಭೇಟಿ ನೀಡಿದ ಈಜಿಪ್ಟ್ ದೇಶದ ವ್ಯಾಪಾರಿ ಟಾಲೆಮಿಯು ತನ್ನ 'ಏ ಗೈಡು ಟು ದ ಜಿಯಾಗ್ರಫಿ' ಗ್ರಂಥದಲ್ಲಿ ಬಾದಾಮಿ, ಪಟ್ಟದಕಲ್ಲು, ನಾಗೂರು, ಇಂಡಿ ಮುಂತಾದ ಸ್ಥಳಗಳನ್ನು ಹೆಸರಿಸಿರುವನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದರಿಂದ ಆ ವೇಳೆಗಾಗಲೇ ಈ ಸ್ಥಗಳು ಪ್ರಮುಖ ವಾಣಿಜ್ಯ ಕೇಂದ್ರಗಳಾಗಿ ಉತ್ತಮ ಸಾರಿಗೆ ಸಂಪರ್ಕ ವ್ಯವಸ್ಥೆಯನ್ನು ಹೊಂದಿದ್ದು, ವಿದೇಶಿ ವ್ಯಾಪಾರಿಯ ಗಮನವನ್ನು ಸೆಳೆಯುವಷ್ಟು ಬೆಳೆದಿದ್ದವೆಂದು ಊಹಿಸಬಹುದಾಗಿದೆ.[೩೭] ಬ್ರಿಟಿಷರು ಭಾರತಕ್ಕೆ ಬರಲು ಜಲಸಾರಿಗೆ ಮೂಲಕ ಬಂದು ಇಲ್ಲಿ ಅಗಾಧವಾದಂತಹ ನಿಸರ್ಗ ಸಂಪತ್ತನ್ನು ಯುರೋಪಿಗೆ

ಸಾಗಿಸಲು ತಮಗೆ ಅನುಕೂಲಕರವಾದ ಪ್ರದೇಶಗಳಲ್ಲಿ ಮಾತ್ರ ಬಂದರುಗಳು, ರೈಲು ಸಾರಿಗೆ, ರಸ್ತೆ ಸಾರಿಗೆ ಯೋಜನೆ ಕೈಗೊಂಡು ಸಾರಿಗೆ ಸಂಪರ್ಕವನ್ನು ನಿರ್ಮಿಸಿದರು.

ಬ್ರಿಟಿಷರ ಆಡಳಿತದ ಪೂರ್ವಕಾಲದಲ್ಲಿದ್ದ ರಸ್ತೆಗಳು ಬೇಸಿಯಲ್ಲಷ್ಟೇ ಸಂಚಾರಕ್ಕೆ ಯೋಗ್ಯವಾಗಿದ್ದು ಮಳೆಗಾಲದಲ್ಲಿ ನಿರುಪಯುಕ್ತವಾಗಿರುತ್ತಿದ್ದವು. ೧೮೨೦ರ ಬ್ರಿಟಿಷ್ ಆಳ್ವಿಕೆಯ ಆರಂಭದಲ್ಲಿ ಜಿಲ್ಲೆಯಲ್ಲಿ ಕೇವಲ ನಾಲ್ಕೈದು ಪ್ರಧಾನ ರಸ್ತೆಗಳಿದ್ದವು. ಅವುಗಳಲ್ಲೊಂದು ತೀರ ಪ್ರದೇಶ ವೆಂಗುರ್ಲಾದಿಂದ ನಿಜಾಮ್ ರಾಜ್ಯವನ್ನು ಬೆಳಗಾವಿ, ವಿಜಯಪುರ ಮೂಲಕ ಹಾಯ್ದು ಸೇರುತ್ತಿತ್ತು. ಇನ್ನೊಂದು ಮಾರ್ಗ ಬೆಳಗಾವಿಯಿಂದ ಯಾದವಾಡ, ಕಲಾದಗಿ ಮಾರ್ಗವಾಗಿ ವಿಜಯಪುರಕ್ಕೆ ಹೋಗುತ್ತಿತ್ತು. ಆದರೆ ಈ ರಸ್ತೆಗಳು ಪ್ರಾಕೃತಿಕ ಕಾರಣಗಳಿಂದ ಹಾಗೂ ಆಡಳಿತಗಾರರ ನಿರ್ಲಕ್ಷದಿಂದಾಗಿ ಹಾಳಾಗಿದ್ದು, ಮಳೆಗಾಲದಲ್ಲಿ ಸಂಚಾರ ನಿಲುಗಡೆ ಯಾಗುತ್ತಿತ್ತು. ೧೮೨೬ರಲ್ಲಿ ಪಂಢಾರಪುರ-ವಿಜಯಪುರದ ನಡುವೆ ೧೯೯ಕಿ.ಮೀ.ಉದ್ದದ ಉತ್ತಮ ರಸ್ತೆ ಇದ್ದ ಅಂಶವನ್ನು ಕ್ಯಾಪ್ಟನ್ ಕ್ಲೂನ್ ಗಮನಿಸದ್ದಾನೆ.[೩೮] ಈ ರಸ್ತೆ ವಿಸ್ತರಣೆಗೊಂಡಿದೆ.

ಮಳೆಗಾಲದಲ್ಲಿಯೂ ಸಹ ಸಂಚಾರ ಮಾಡಲು ಬ್ರಿಟಿಷರು ಸೇತುವೆಗಳನ್ನು ನಿರ್ಮಿಸಲು ಕೈ ಹಾಕಿದರು. ಅಂದರೆ ಮುಂಬಯಿ ಕರ್ನಾಟಕದ ಸಾರಿಗೆ ಸಂಪರ್ಕ ವ್ಯವಸ್ಥೆಯ ಬಗ್ಗೆ ಬ್ರಿಟಿಷರು ತೀವ್ರವಾಗಿ ಚಿಂತಿಸಲು ಆರಂಭಿಸಿದ್ದು, ೧೮೪೦ರ ನಂತರದಲ್ಲಿ ಎಂಬುದು ಗಮನಾರ್ಹವಾಗಿದೆ. ೧೮೫೨ರ ವೇಳೆಗೆ ಜಿಲ್ಲೆಯಲ್ಲಿ ಕಲಾದಗಿ-ಬಾಗಲಕೋಟೆ ನಡುವಣ ೧೯ ಕಿ.ಮೀ.ರಸ್ತೆ ಮಾತ್ರ ನಿರ್ಮಾಣಗೊಂಡಿತು. ಜಿಲ್ಲೆಯಲ್ಲಿ ೧೮೮೩ರಲ್ಲಿ ಒಟ್ಟು ೨೭೫ಕಿ.ಮೀ. ಉದ್ದದ ಮೂರು ಪ್ರಾಂತೀಯ ಹೆದ್ದಾರಿಗಳಿದ್ದು, ೬೦೮ ಕಿ.ಮೀ.ಉದ್ದದ ೧೫ ಲೋಕಲ್ ಫಂಡ್ ರಸ್ತೆಗಳಿದ್ದವು. ಜಿಲ್ಲೆಯ ಮೂರು ಪ್ರಾಂತೀಯ ರಸ್ತೆಗಳಲ್ಲಿ ೧೮೧ಕಿ.ಮೀ. ಉದ್ದವಿದ್ದ ಸೋಲ್ಲಾಪುರ-ಹುಬ್ಬಳ್ಳಿ ರಸ್ತೆಯು ವಿಜಯಪುರ ಹಾಗೂ ಬಾಗಲಕೋಟೆಯ ಮೂಲಕ ಹಾದು ಹೋಗುತ್ತಿತ್ತು. ಮುಂದೆ ಕಾರವಾರ ಬಂದರನ್ನು ತಲುಪುತ್ತಿದ್ದ ಇದು ಹತ್ತಿ ರಫ್ತಿಗೆ ರಾಜ ಮಾರ್ಗವಾಗಿತ್ತು. ಜಿಲ್ಲೆಯಲ್ಲಿ ನದಿಗಳಿರುವುದರಿಂದ ಸೀಮೀಕೇರಿ, ಕೆರೂರು, ಗೋವನ ಕೊಪ್ಪ ಪ್ರದೇಶಗಳಲ್ಲಿ ಹಳ್ಳಕೊಳ್ಳ ದಾಟಲು ಸಣ್ಣ ಪೂಲ(ಸೇತುವೆ)ಗಳು ಲಭ್ಯವಿದ್ದು, ದೊಡ್ಡದಾದ ಸೇತುವೆಗಳು ಇನ್ನೂ ನಿರ್ಮಾಣಗೊಂಡಿರಲಿಲ್ಲ.[೩೯] ಘಟಪ್ರಭಾ ನದಿಯನ್ನು ಅನಗವಾಡಿ ಬಳಿ ಹರಿಗೋಲಿನ ಮೂಲಕ, ಮಲಪ್ರಭಾ ನದಿಯನ್ನು ಗೋವನಕೊಪ್ಪದ ಬಳಿ ಹರಿಗೋಲುಗಳ ಮೂಲಕ ದಾಟಬೇಕಾಗುತ್ತಿತ್ತು. ಪನ್ಸಾಗಾಮ್-ಬಾಗಲಕೋಟೆ ರಸ್ತೆ ಹಾಗೂ ವಿಜಯಪುರ-ನಾಗರಾಜ್ ರಸ್ತೆ ಉಳಿದೆರಡು ಪ್ರಾಂತೀಯ ರಸ್ತೆಗಳಾಗಿದ್ದವು. ಮೊದಲನೆಯದು ಮುಧೋಳ ಸಂಸ್ಥಾನದ ಪನ್ಸಗಾವ್ ಗ್ರಾಮದಿಂದ ೫೬ ಕಿ.ಮೀ. ದೂರದ ಬಾಗಲಕೋಟೆಗೆ ಸಂಪರ್ಕವನ್ನು ಕಲ್ಪಿಸಿತ್ತು. ಇದರಲ್ಲಿ ಬ್ರಿಟಿಷ್ ಪ್ರಾಂತಕ್ಕೆ ಸೇರಿದ ಖಜ್ಜಿಡೋಣಿ-ಬಾಗಲಕೋಟೆ ನಡುವಣ

೨೪ ಕಿ.ಮೀ.ದೂರದ ರಸ್ತೆಯು ಸೇತುವೆಗಳನ್ನು ಹೊಂದಿರುವ ಸುಸಜ್ಜಿತವಾದ ಸರ್ವಋತು ರಸ್ತೆಯಾಗಿತ್ತು.[೬೦] ಮುಂದುವರೆದು ಖಜ್ಜಿಡೋಣಿ ಲೋಕಾಪುರ ಮಾರ್ಗವಾಗಿ ಬೆಳಗಾವಿ ಸಂಪರ್ಕವನ್ನು ಕಲ್ಪಿಸುವ ರಸ್ತೆ ಮಾರ್ಗ ನಿರ್ಮಿಸಿದರು. ಈ ಸಮಯದಲ್ಲಿ ೧೮೮೭ರಲ್ಲಿ ಲೋಕಾಪುರ ಹಳ್ಳ ದಾಟಲು ವ್ಯವಸ್ಥಿತ ಸೇತುವೆಯನ್ನು ಬ್ರಿಟಿಷರು ನಿರ್ಮಿಸಿದರು. ಈ ಸೇತುವೆ ಇನ್ನೂ ಗಟ್ಟಿಮುಟ್ಟಾಗಿಯೇ ಇದ್ದಿತು. ಆದರೆ ರಸ್ತೆಯ ಅಗಲೀಕರಣದ ನೆಪದಲ್ಲಿ ಹನ್ನೆರಡು ವರ್ಷಗಳ ಹಿಂದೆ(೨೦೦೬)ಯಷ್ಟು ನೆಲಸಮಮಾಡಿ ಅದೇ ಸ್ಥಳದಲ್ಲಿ ಸಿಮೆಂಟ್ ಕಾಂಕ್ರೀಟ್ ನೂತನ ಸೇತುವೆಯು ನಿರ್ಮಾಣಗೊಂಡು ನಿರಂತವಾಗಿ ಸಂಪರ್ಕವನ್ನು ಮುಂದುವರೆಸುವ ಕೆಲಸಕಾರ್ಯದಲ್ಲಿ ಸೇತುವೆ ಮಗ್ನವಾಗಿದೆ.

ವಸಾಹತು ಕಾಲದಲ್ಲಿ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಎಷ್ಟೋ ವರ್ಷಗಳ ವರೆಗೆ ಅಂದರೆ ಶತಮಾನಗಳವರೆಗೆ ಸುಸಜ್ಜಿತವಾಗಿದ್ದವು. ಮುಖ್ಯ ಹೆದ್ದಾರಿಯಲ್ಲಿ ರಸ್ತೆ ಅಗಲೀಕರಣದ ಸಂದರ್ಭಗಳಲ್ಲಿ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ನೆಲಸಮಗೊಂಡಿವೆ. ಆದರೆ ತಾಲೂಕು, ಜಿಲ್ಲಾ ಕೇಂದ್ರದಿಂದ ಹಳ್ಳಿಗಳಿಗೆ ಸಂಪರ್ಕವನ್ನು ಕಲ್ಪಿಸಲು ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಇಂದಿಗೂ ಸುಸಜ್ಜಿತವಾಗಿವೆ. ಹಲಗಲಿ ಹತ್ತಿರ ಒಂದು ಸೇತುವೆ ಕಪ್ಪು ಕಲ್ಲಿನಿಂದ ಬ್ರಿಟಿಷರು ನಿರ್ಮಿಸಿದ ಸೇತುವೆ ಇಂದಿಗೂ ಕಾರ್ಯನಿರ್ವಹಿಸುತ್ತಿದೆ. ಕಲಾದಗಿ ಜಿಲ್ಲಾ ಕೇಂದ್ರವಾಗಿದ್ದು, ಹಲಗಲಿಯು ಮುಧೋಳ ಸಂಸ್ಥಾನಿಕರ ಅಧಿನದಲ್ಲಿರುವ ಹಳ್ಳಿಯ ೧೮೫೭ರಲ್ಲಿ ನಿಶಸ್ತ್ರೀಕರಣ ಕಾಯ್ದೆಯನ್ನು ಬ್ರಿಟಿಷರು ಜಾರಿಗೊಳಿಸಿದಾಗ ಹಲಗಲಿ ಬೇಡರು ಬ್ರಿಟಿಷರ ವಿರುದ್ಧ ಬಂಡಾಯ ಎದ್ದರು. ಆ ಸಮಯದಲ್ಲಿ ಕಲಾದಗಿಯಿಂದ ಅಂಕಲಗಿ, ಶಾರದಾಳ ಮೂಲಕ ಬ್ರಿಟಿಷ ಸೈನ್ಯವು ಹಲಗಲಿ ಬೇಡರ ಬಂಡಾಯವನ್ನು ಅಡಗಿಸಲು ಯೋಜನೆಯನ್ನು ರೂಪಿಸಿತು. ಇವತ್ತಿಗೂ ಸಹ ಈ ಸೈನ್ಯ ಅಥವಾ ಬ್ರಿಟಿಷರ ದಂಡು ಬಂದಂತಹ ದಾರಿಯನ್ನು ದಂಡಿನ ದಾರಿ ಎಂದು ಕರೆಯುತ್ತಾರೆ. ಕೊನೆಗೆ ಬ್ರಿಟಿಷರ ಸೈನ್ಯ ಬಾಗಲಕೋಟೆಯಿಂದ ಒಂದು ತುಕುಡಿ ವಿಜಯಪುರ ಮತ್ತು ಕಲಾದಗಿಯಿಂದ ಸೈನ್ಯ ತಂಡ ಒಟ್ಟಾಗಿ ಮೂರು ಸೈನ್ಯ ತುಕಡಿ ಹಲಗಲಿಗೆ ಮುತ್ತಿಗೆ ಹಾಕಿ ಒಳಸಂಚು, ಮೋಸದಿಂದ ಬೇಡರನ್ನು ಸೋಲಿಸಿದರು. ಈ ಕದನವು ಇಂದಿಗೂ ಸಹ ಹಲಗಲಿ ಬಂಡಾಯ ಎಂದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದಂತಹ ಅಂಶವೆಂದರೆ ಬ್ರಿಟಿಷರು ತಮಗೆ ಅನುಕೂಲಕ್ಕಾಗಿ ಹಾಗೂ ತಮೆಗೆ ಸಂಕಷ್ಟ ಬರುವಂತಹ ಸ್ಥಳಗಳನ್ನು ಬಹುಬೇಗನೆ ತಲುಪುವ ಉದ್ದೇಶದಿಂದ ನದಿ, ಹಳ್ಳ, ಕೊಳ್ಳಗಳಿಂದ ಕಡಿತಗೊಂಡಿರುವ ಸಂಪರ್ಕವನ್ನು ಕಲ್ಪಿಸಲು ರಸ್ತೆ ಸೇತುವೆಗಳನ್ನು ನಿರ್ಮಿಸಿದರು. ಹಾಗಾಗಿ ಹಲಗಲಿ ವಜ್ರಮಟ್ಟಿ, ಮುಧೋಳ, ಕಾತರಕಿ ಮೂಲಕ ಬಾಗಲಕೋಟೆ ರಸ್ತೆ ಸಂಪರ್ಕವನ್ನು ಕಲ್ಪಿಸಲು ಸೇತುವೆಗಳನ್ನು

ನಿರ್ಮಿಸಿದ್ದಾರೆ. ಅಂತಹ ಸೇತುವೆಗಳು ಇಂದಗೂ ಸಹ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುತ್ತಿವೆ. ಜಿಲ್ಲೆಯಲ್ಲಿ ಪ್ರತಿಯೊಂದು ಸೇತುವೆ ಹಾಗೂ ಜನಸಮುದಾಯದ ನಡುವೆ ರೋಚಕ ಕಥನ ಇತಿಹಾಸವಿದೆ. ಸ್ಥಳೀಯವಾಗಿ ದೊರೆಯುವ ಕಲ್ಲು, ಇಟ್ಟಿಗೆ, ಗಾರೆ ಗಚ್ಚು, ಸೀಮೆ ಸುಣ್ಣ ಮಿಶ್ರಣ ಮಾಡಿ ಯುರೋಪಿನ ಶೈಲಿಯಲ್ಲಿ ಸೇತುವೆಗಳನ್ನು ನಿರ್ಮಿಸಿದ್ದಾರೆ.

ಬಾಗಲಕೋಟೆ ಜಿಲ್ಲೆಯಲ್ಲಿ ಲೋಕಲ್ ಫಂಡ್ ನಿಧಿಯಡಿಯಲ್ಲಿ ನಿರ್ವಹಿಸಲ್ಪಡುತ್ತಿದ್ದ ೧೫ ರಸ್ತೆಗಳಲ್ಲಿ ಬಾಗಲಕೋಟೆ-ಹುನಗುಂದ ಹಾಗೂ ಸೋಲ್ಲಾಪುರ-ಬಳ್ಳಾರಿ ರಸ್ತೆಗಳೇ ಪ್ರಮುಖ ಲೋಕಲ್ ಫಂಡ್ ರಸ್ತೆಗಳಾಗಿದ್ದವು. ಇವುಗಳಲ್ಲಿ ೪೩ ಕಿ.ಮೀ.ಉದ್ದದ ಬಾಲಕೋಟೆ-ಹನುಗುಂದ ರಸ್ತೆಯು ಸರ್ವಋತು ಮಾರ್ಗವಾಗಿದ್ದರೂ ಅಮೀನಗಡ, ಹುನಗುಂದ ನಡುವಣ ಅಂತರವು ಮಳೆಗಾಲದಲ್ಲಿ ಸಂಚಾರ ಯೋಗ್ಯವಾಗುತ್ತಿರಲಿಲ್ಲ. ಆ ಸಮಯದಲ್ಲಿ ಮಲಪ್ರಭಾ ನದಿಯನ್ನು ಕಮತಗಿ ಬಳಿ ಹರಿಗೋಲಿನ ಮೂಲಕ ದಾಟಬೇಕಾಗುತ್ತಿತ್ತು.[೪೧] ಅನಾನುಕೂಲತೆಯನ್ನು ಗಮನಿಸಿದ ಬ್ರಿಟಿಷರು ಕಮತಗಿ ಮಲಪ್ರಭಾ ನದಿಯ ಪಕ್ಕದಲ್ಲಿ ನಿರೀಕ್ಷಣಾ ಮಂದಿರವನ್ನು ನಿರ್ಮಿಸಿ ಅಲ್ಲಿಯೇ ವಾಸ್ತವ್ಯ ಹೂಡಲು ಆರಂಭಿಸಿದರು. ನಂತರದಲ್ಲಿ ಹೇಗಾದರೂ ಮಾಡಿ ಕಮತಗಿ-ರಾಮತೀರ್ಥ ಮಧ್ಯ ಮಳೆಗಾಲದಲ್ಲಿ ಕಡತಗೊಳ್ಳುತ್ತಿರುವ ಸಂಪರ್ಕವನ್ನು ಕೂಡಿಸಲು ವ್ಯವಸ್ಥಿತವಾದ ೨೨ ಕಮಾನುಗಳುಳ್ಳ ೨೦೦ಮೀಟರ್ ಉದ್ದವಾದ ಸೇತುವೆಯನ್ನು ನಿರ್ಮಿಸಿದರು. ಇದರಿಂದ ಜನರಿಗೆ ಸಾರಿಗೆ ಸಂಪರ್ಕ ಸರ್ವಕಾಲ್ಲೂ ದೊರೆಯುವಂತಾಯಿತು. ದಿನಗಳೆದಂತೆ ಸಂಚಾರ ದಟ್ಟಣೆ, ರಸ್ತೆ ಅಗಲೀಕರಣ, ನದಿಯ ನೀರಿನ ಪ್ರವಾಹದಲ್ಲಿ ಹೆಚ್ಚಳ ಹೀಗೆ ಹಲವಾರು ಕಾರಣಗಳಿಂದ ಸಿಮೆಂಟ್ ಕಾಂಕ್ರೀಟ್ ಸೇತುವೆಯನ್ನು ಹಳೇಯ ಸೇತುವೆ ಹತ್ತಿರ ಎತ್ತರದಲ್ಲಿ ನಿರ್ಮಿಸಲಾಗಿದೆ. ಇಂದಿಗೂ ಸಹ ಬ್ರಿಟಿಷರು ನಿರ್ಮಿಸಿದ ಹಳೆಯ ಸೇತುವೆ ಒಂದೇ ಒಂದು ಕಲ್ಲು ಬಿರುಕುಂಟಾಗದೇ ಗಟ್ಟಿಮುಟ್ಟಾಗಿ ಇಂದಿಗೂ ಸಹ ಸಂಪರ್ಕವನ್ನು ಕಲ್ಪಿಸಿ ಜನರ ಸೇವೆಯಲ್ಲಿ ನಿರತವಾಗಿರುವುದು ಪ್ರಶಂಸನೀಯ ವಾಗಿದೆ.

ಗುಳೇದಗುಡ್ಡ-ಶಿರೂರು ೮ ಕಿ.ಮೀ., ಬಾದಾಮಿ ಗೋವನಕೊಪ್ಪ ೨೧ ಕಿ.ಮೀ., ಕಲಾದಗಿ-ಮುಧೋಳ ೧೧ ಕಿ.ಮೀ. ಇವೆಲ್ಲಾ ಲೋಕಲ್ ಫಂಡ್ ರಸ್ತೆಗಳಾಗಿದ್ದವು. ಬ್ರಿಟಿಷರು ರಫ್ತು ಮತ್ತು ವಾಣಿಜ್ಯ ದೃಷ್ಟಿಯಿಂದ ಈ ಮಾರ್ಗದ ಸುಧಾರಣೆಗೆ ವಿಶೇಷವಾದ ಗಮನಕೊಟ್ಟು ೧೯೨೦ರ ವೇಳೆಗೆ ಕೋಲಾರ ಹಾಗೂ ಅನಗವಾಡಿ ಬಳಿ ಸುಸಜ್ಜಿತವಾದ ಸೇತುವೆ ನಿರ್ಮಿಸಿದ್ದು ತತ್ಪರಿಣಾಮವಾಗಿ ವರ್ಷದ ಒಂಬತ್ತು ತಿಂಗಳ ಸಂಚಾರ ನಿರಾಂತರವಾಯಿತು.[೪೨] ಅನಗವಾಡಿ ಬಳಿ ಬ್ರಿಟಿಷರು ಸೇತುವೆಯನ್ನು ನಿರ್ಮಿಸಿ ಬಾಗಲಕೋಟೆ

ಬೀಳಗಿ ವಿಜಯಪುರದ ಮಧ್ಯ ಸಂಪರ್ಕ ಕಲ್ಪಿಸಿದರು. ಆದರೆ ಬ್ರಿಟಿಷರು ನಿರ್ಮಿಸಿದ ಸೇತುವೆ ಇಂದಿಗೂ ನೀರಲ್ಲಿ ಮುಳುಗಿರುತ್ತದೆ. ಅಂದರೆ ಕೃಷ್ಣ ಮೇಲ್ದಂಡೆ ಯೋಜನೆಯ ಭಾಗವಾಗಿ ಲಾಲ್ ಬಹದ್ದೂರ್‌ಶಾಸ್ತ್ರಿ ಅಣೆಕಟ್ಟನ್ನು ಅಲಮಟ್ಟಿಯಲ್ಲಿ ನಿರ್ಮಿಸಿರುವುದರಿಂದ ಹಿನ್ನಿರು ಪ್ರವಾಹ ತುಂಬ ದೂರದವರೆಗೂ ವಿಸ್ತರಿಸಿರುತ್ತದೆ. ಬೇಸಿಗೆಯಲ್ಲಿ ನೀರು ಇಳಿಮುಖವಾದ ನಂತರ ಬ್ರಿಟಿಷರು ನಿರ್ಮಿಸಿದ ಸೇತುವೆಯನ್ನು ನೋಡಬಹುದು. ಈ ಸೇತುವೆಯ ಪಕ್ಕದಲ್ಲಿ ಬೃಹತ್ತಾದ ಸಿಮೆಂಟ್ ಕಾಂಕ್ರೀಟ್ ಸೇತುವೆ ನಿರ್ಮಿಸಿರುವುದರಿಂದ ವರ್ಷಪೂರ್ತಿ ಸಂಚಾರಕ್ಕೆ ಯಾವುದೇ ಅಡಚಣೆಯಿಲ್ಲದೇ ಸರಾಗವಾಗಿದೆ. ಈ ಸೇತುವೆಯನ್ನು ನಿರ್ಮಿಸುವ ಪೂರ್ವದಲ್ಲಿ ಹರಿಗೊಲಿನ ಸಹಾಯದಿಂದ ನದಿಯನ್ನು ದಾಟುತ್ತಿದ್ದರು. ಇಂತಹ ಸಮಯದಲ್ಲಿ ನೀರಿನ ರಭಸಕ್ಕೆ ಹರಿಗೋಲು ಮುಗುಚಿ ನೀರಲ್ಲಿ ಮುಳುಗಿ ಹಲವಾರು ಬಾರಿ ಸಾವು ನೋವು ಗಳಾಗಿರುವುದು ದೊಡ್ಡ ದುರಂತ. ಅನಗವಾಡಿ ಬಳಿಯೇ ನೀರು ಶುದ್ಧೀಕರಣ ಘಟಕ ಸ್ಥಾಪಿಸಿರುವುದರಿಂದ ಸುತ್ತಲಿನ ಹತ್ತಾರು ಗ್ರಾಮಗಳಿಗೆ ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.

ಜಿಲ್ಲೆಯಲ್ಲಿ ವಸಾಹತು ಕಾಲದ ಸಂದರ್ಭದಲ್ಲಿ ಬ್ರಿಟಿಷರು ನಿರ್ಮಿಸಿದಂತಹ ರಸ್ತೆ ಸೇತುವೆಗಳಲ್ಲಿ ಕೆಲವೊಂದು ರಸ್ತೆ ಅಗಲೀಕರಣದಿಂದ ನೆಲಸಮಗೊಂಡಿವೆ. ಹಾಗೇನೇ ಕೆಲವೊಂದು ರಸ್ತೆ ಸೇತುವೆಗಳು ಇಂದಿಗೂ ಸಹ ಸಾರಿಗೆ ಸಂಪರ್ಕವನ್ನು ಕಲ್ಪಿಸಿ ಜನರ ಸೇವೆಯಲ್ಲಿ ನಿರತವಾಗಿವೆ. ಅವುಗಳೆಂದರೆ ವಜ್ರಮಟ್ಟಿ–ಹಲಗಲಿ ಮಧ್ಯೆ ಇರುವಂತಹ ಸೇತುವೆಯು ಜಿಲ್ಲಾ ರಸ್ತೆಗೆ ಹೊಂದಿಕೊಂಡಿದ್ದು ಹಳ್ಳದ ನೀರಿನಿಂದ ಕಡಿತಗೊಳ್ಳುವ ಸಂಪರ್ಕವನ್ನು ಈ ರಸ್ತೆ ಸೇರುವೆ ಸಂಪರ್ಕದ ಕೊಂಡಿಯಾಗಿದೆ. ಅದರಂತೆ ರನ್ನನಿಂದ ಖ್ಯಾತಿ ಪಡೆದ ಊರು ಬೆಳಗಲಿ ಮುಂದೆ ರನ್ನ ಬೆಳಗಲಿಯಾಗಿದೆ. ಇಲ್ಲಿಯೂ ಸಹ ಬ್ರಿಟಿಷರು ಒಂದು ಬೃಹತ್ತಾದ ಹಳ್ಳಕ್ಕೆ ರಸ್ತೆ ಸೇತುವೆಯನ್ನು ನಿರ್ಮಿಸಿದ್ದಾರೆ. ಇತ್ತೀಚಿಗಷ್ಟೆ ಈ ಸೇತುವೆಯು ಸಂಪರ್ಕವನ್ನು ಕಡಿತಗೊಳಿಸಿದೆ. ಅಂದರೆ ಇದು ಮುಧೋಳ, ಮಹಾಲಿಂಗಪೂರ ಪೂಣೆ ಮುಖ್ಯರಸ್ತೆಯಾಗಿದೆ. ಹುನ್ನೂರು ಗ್ರಾಮದಲ್ಲಿ ಬೆಟ್ಟದಿಂದ ಹರಿಯುವ ಕೊಳ್ಳವನ್ನು ದಾಟಲು ಇಲ್ಲೊಂದು ಸೇತುವೆಯನ್ನು ಜಮಖಂಡಿ ಪಟವರ್ಧನ ಸಂಸ್ಥಾನಿಕರ ಧನಸಹಾಯದಿಂದ ನಿರ್ಮಿಸಿದ್ದಾರೆ. ಈ ಸೇತುವೆಯು ಜಮಖಂಡಿ ಮೀರಜ್ ಸಂಪರ್ಕದ ಮುಖ್ಯ ರಸ್ತೆಯಾಗಿದೆ. ಅದರಂತೆ ಅನಗವಾಡಿ, ಕಮತಗಿಯಲ್ಲಿ ನಿರ್ಮಿಸಿದ ವಸಾಹತು ಕಾಲದ ಸೇತುವೆಗಳು ನೀರಲ್ಲಿ ಮುಳುಗಿರುತ್ತವೆ. ಆದರೆ ಬೇಸಿಗೆಯಲ್ಲಿ ಜನ ಸಾಮಾನ್ಯರು ಎತ್ತಿನ ಚಕ್ಕಡಿ, ಸಣ್ಣಪುಟ್ಟ ವಾಹನಗಳು ಈ ಸೇತುವೆಗಳ ಮೇಲೆ ಸಂಚರಿಸುತ್ತವೆ. ಈ ಸೇತುವೆಗಳ ಪಕ್ಕದಲ್ಲಿ ನೂತನ ಸೇತುವೆಗಳು ಹತ್ತಾರು ವರ್ಷಗಳಿಂದ ತಲೆ ಎತ್ತಿ ಸಾರಿಗೆ ಸಂಪರ್ಕವನ್ನು ಕಲ್ಪಿಸಿವೆ.

ಲೋಕಾಪುರ, ಕಲಾದಗಿಯ ಸೇತುವೆಗಳನ್ನು ಸಂಪೂರ್ಣ ಕೆಡವಿ ಹೊಸ ಸೇತುವೆಗಳನ್ನು ಇಲ್ಲಿ ನಿರ್ಮಿಸಲಾಗಿದೆ. ರಬಕವಿ, ಬನಹಟ್ಟಿ, ಯಲ್ಲಟ್ಟಿ, ಗುಳೇದಗುಡ್ಡ ರೈಲು ನಿಲ್ದಾಣ ಇತ್ಯಾದಿ ಕೆಲವೊಂದು ಪ್ರದೇಶಗಳಲ್ಲಿ ಬ್ರಿಟಿಷರು ನಿರ್ಮಿಸಿದ ಸೇತುವೆಗಳು ಸಣ್ಣಪುಟ್ಟ ಜೀರ್ಣೋದ್ಧಾರ ಗೊಂಡು ಇಂದಿಗೂ ಸಹ ಸಾರಿಗೆ ಸಂಪರ್ಕದ ಕೊಂಡಿಯಂತೆ ಕಾರ್ಯನಿರ್ವಹಿಸುತ್ತಿವೆ.

## ೫.೪. ಆರ್ಥಿಕ

ಬ್ರಿಟಿಷ್ ಕಂಪನಿ ಸರಕಾರ ಭಾರತಕ್ಕೆ ಬಂದ ಮೇಲೆ ಹಲವಾರು ರೀತಿಯ ಪರಿಣಾಮಗಳನ್ನು ಸಮಾಜದ ಮೇಲೆ ಬೀರಿತು. ೧೭೫೭ರಲ್ಲಿ ಪ್ಲಾಸಿ ಕದನವಾದ ವರ್ಷದಲ್ಲಿ ಮುರ್ಷಿದಾಬಾದ್ ನಗರ ಉಚ್ಛ್ರಾಯ ಸ್ಥಿತಿಯಲ್ಲಿತ್ತು, ಜನಭರಿತವಾಗಿತ್ತು. ಲಂಡನ್ ನಗರದಷ್ಟೇ ಶ್ರೀಮಂತವಾಗಿತ್ತು. ಒಂದು ವ್ಯತ್ಯಾಸವೆಂದರೆ ಲಂಡನ್ನಿನಲ್ಲಿ ಇದ್ದಂತೆ ಅಪಾರ ಸಂಪತ್ತು ಕೆಲವೇ ವ್ಯಕ್ತಿಗಳಲ್ಲಿ ಕೇಂದ್ರಿ ಕೃತವಾದ ಸ್ಥಿತಿ ಇರಲಿಲ್ಲ. ಢಾಕಾ ನಗರ ಅದರ ಮಸ್ಲಿನ್ ಬಟ್ಟೆ ಜಗತ್ಪ್ರಸಿದ್ಧವಾಗಿತ್ತು. ಮುರ್ಷಿದಾಬಾದ್ ಹಾಗೂ ಢಾಕಾ ನಗರಗಳು ಗಡಿಯಲ್ಲಿದ್ದಂಥವು. ಒಳನಾಡಿನಲ್ಲಿ ಈ ನಗರಗಳಿಗಿಂತಲೂ ಏಳಿಗೆಯಲ್ಲಿದ್ದ ದೊಡ್ಡದಾದ ಹಲವಾರು ನಗರಗಳಿದ್ದವು. ವ್ಯಾಪಾರ ಮಳಿಗೆಗಳೂ, ಕೈಗಾರಿಕಾ ಕೇಂದ್ರಗಳೂ ಇದ್ದವು. ಕೈಗಾರಿಕಾ ಕ್ರಾಂತಿಯಾಗುವುದಕ್ಕೆ ಮುಂಚೆ ಯುರೋಪಿನಲ್ಲಿದ್ದ ಅಭಿವೃದ್ಧಿಯ ಮಟ್ಟಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿದವು. ಅದು ಅಲ್ಲಿಂದ ಆಧುನಿಕ ಕೈಗಾರಿಕೀಕರಣಕ್ಕೆ ಮುಂದುವರಿಯಬೇಕಾಗಿತ್ತು. ತಾನಾಗೇ ಹಾಗೆ ಆಗದಿದ್ದಾಗ ಅಥವಾ ಆಗುವ ಸೂಚನೆಗಳು ಇನ್ನೂ ಕಂಡಿರದಾಗ ವಿದೇಶಿ ರಾಜಕೀಯ ಪರಾಧೀನತೆ ಅದನ್ನು ಆವರಿಸಿತು. ಅದರ ಬೆನ್ನಿಗೇ ಆರ್ಥಿಕ ವ್ಯವಸ್ಥೆ ಹಾಳಾಯಿತು. ಒಳಹೊಕ್ಕಿದ ಈಸ್ಟ್ ಇಂಡಿಯಾ ಕಂಪನಿಯು ಬ್ರಿಟಿಷರ ರಾಜಕೀಯ ಶಕ್ತಿ, ಅವರ ಪಟ್ಟಭದ್ರ ಹಿತಾಸಕ್ತಿ ಹಾಗೂ ಆರ್ಥಿಕ ಶಕ್ತಿ ಮೂರನ್ನು ಪ್ರತಿನಿಧಿಸುತ್ತಿತ್ತು. ಹಣ ಮಾಡುವುದೇ ವರ್ತಕರ ಕಂಪನಿಯ ಮೂಲ ಪ್ರೇರಣೆಯಾಗಿದ್ದು ಅದನ್ನು ಅತಿಶಯ ಮಾಡಿಕೊಂಡಿತು. ಆಡಂ ಸ್ಮಿತ್ 'ವೆಲ್ತ್ ಆಫ್ ನೇಷನ್ಸ್' ಪುಸ್ತಕದಲ್ಲಿ ೧೭೭೬ರಲ್ಲಿ ಹೇಳುತ್ತಾರೆ ಅದೇನೆಂದರೆ "ವ್ಯಾಪಾರಿಗಳನ್ನು ಪ್ರತಿನಿಧಿಸುವ ಕಂಪನಿಯು ಒದಗಿಸುವ ಸರ್ಕಾರವು ಅತಿಹೀನವಾದ ಸರ್ಕಾರ. ಅದೇ ನಮಗೆ ದೊರಕಿದ್ದು"[೪೩] ಎಂಬ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಬ್ರಿಟಿಷರು ವ್ಯಾಪಾರಿ ಬಂಡವಾಳಿಗರಾದ ಕಂಪನಿಯವರು ಸರ್ಕಾರವನ್ನು ನಡೆಸುವ ಹೊಣೆಯನ್ನು ಆಕಸ್ಮಿಕವಾಗಿ ಪಡೆದರು. ಒಮ್ಮೆ ಪಡೆದ ಮೇಲೆ ಅದು ಅವರಿಗೆ ಅವರ ವ್ಯಾಪಾರದ ಒಂದು ಅಂಗವೇ ಆಯಿತು. ಅದೊಂದು ಪ್ರಭುತ್ವದ ಹೊಣೆಗಾರಿಕೆ ಇಲ್ಲದ ಆಡಳಿತ. ಇಲ್ಲಿಯವರೆಗೂ ಇಂಗ್ಲೆಂಡಿನಿಂದ ಹಣ ತಂದು ಭಾರತದ ವಸ್ತುಗಳನ್ನು ಕೊಂಡು

ನಂತರ ಅವುಗಳನ್ನು ಬ್ರಿಟಿಷ್ ಮಾರುಕಟ್ಟೆಯೂ ಸೇರಿದಂತೆ ಜಾಗತಿಕ ಮಾರುಕಟ್ಟೆಯಲ್ಲಿ ಮಾರಿ ಲಾಭ ಗಳಿಸುತ್ತಿದ್ದರು. ಒಮ್ಮೆ ಬಂಗಾಳದ ದಿವಾನಿಯನ್ನು ಮೊಘಲರಿಂದ ಕಸಿದುಕೊಂಡ ಮೇಲೆ ಸ್ಥಳೀಯವಾಗಿ ಅವರು ಭೂಕಂದಾಯದ ಮೂಲಕ ಅಪಾರ ಹಣವನ್ನು ವಸೂಲಿ ಮಾಡಿದರು. ಅದು ಭಾರತದಲ್ಲಿದ್ದ ತಮ್ಮ ವ್ಯವಸ್ಥೆಯ ಎಲ್ಲ ವೆಚ್ಚವನ್ನು ಭರಿಸಿಯೂ ಅಪಾರ ಮೊತ್ತದ ಬಂಡವಾಳವಾಯಿತು. ಅದನ್ನು ಅವರು ಕಂಪನಿಯ ಲಾಭವೆಂದು ಲೆಕ್ಕ ಹಾಕಿದರು.[೪೪] ಹೂಡಿಕೆಯೇ ಇಲ್ಲದ ಲಾಭ ಭೂಕಂದಾಯವನ್ನು ಹಣದ ರೂಪದಲ್ಲಿ ಸಂಗ್ರಹಿಸಿ, ಉತ್ಪತ್ತಿಯಾದ ಸರಕಿನ ಭಾಗದ ಮೂಲಕವೂ ವಸೂಲಿ ಮಾಡಿದಾಗ, ಸ್ಥಳೀಯವಾಗಿ ಅವರಿಗೆ ಬಹಳ ಸುಲಭ ಬೆಲೆಯಲ್ಲಿ ತಾವು ರಫ್ತು ಮಾಡುವ ವಸ್ತುಗಳೂ ಸಿಗುವಂತಾದವು. ಭೂಕಂದಾಯ ರಾಷ್ಟ್ರದ ಆರ್ಥಿಕ ವ್ಯವಸ್ಥೆಯ ಉಳಿತಾಯ. ಅದು ಗ್ರಾಮೀಣ ವ್ಯವಸ್ಥೆಯಿಂದ ಹಿಂಡಿ ತೆಗೆದ ಉಳಿತಾಯ. ಅದನ್ನು ರಾಷ್ಟ್ರೀಯ ಆರ್ಥಿಕ ವಿಕಾಸಕ್ಕೆ, ನಗರ ಪ್ರದೇಶದ ಆರ್ಥಿಕತೆ ಹಾಗೂ ಸಾರ್ವಜನಿಕ ಸೇವಾ ವಿಚಾರಗಳಿಗೆ, ಲೋಕೋಪಯೋಗಿ ನಿರ್ಮಾಣ ಕೆಲಸಗಳಿಗೆ ಬಳಸಬೇಕು. ಹಾಗಾಗದೆ ಈ ದೇಶದ ಸಂಪತ್ತು ಹೊರಗೆ ಹರಿದು ಹೋದರೆ ಇಲ್ಲಿಯ ಆರ್ಥಿಕತೆ ಬಡವಾಗುತ್ತದೆ. ಇದನ್ನು ಅರ್ಥಶಾಸ್ತ್ರಜ್ಞರು ಬಲವಂತವಾಗಿ ವಸೂಲಿ ಮಾಡಿದ 'ಕಪ್ಪ' ಎಂದು ವರ್ಣಿಸಿದ್ದಾರೆ. ಇದು ಪ್ಲಾಸಿಯ ಸಮಯದಿಂದ ಅಂದರೆ ೧೭೫೭ರಿಂದ ೧೮೯೯ರ ವರೆಗಿನ ಚಿತ್ರ. ರಫ್ತು ಹೊರಗೆ ಹರಿದು ಹೋದ ಸಂಪತ್ತಾದರೆ, ಆಮದು ಒಳಕ್ಕೆ ಸೇರ್ಪಟ್ಟ ಸಂಪತ್ತು. ಈ ಕಾಲಾವಧಿಯಲ್ಲಿ ಎಲ್ಲವೂ ಹೊರಗೆ ಹರಿದು ಒಳಹರಿವೇ ಇಲ್ಲದೆ ಆರ್ಥಿಕ ವ್ಯವಸ್ಥೆ ಸೊರಗಿತು.[೪೫] ಈ ರೀತಿಯಾಗಿ ಭಾರತದಲ್ಲಿ ಬ್ರಿಟಿಷರ ಆಡಳಿತಾವಧಿಯಲ್ಲಿ ಆರ್ಥಿಕತೆಯ ಮೇಲೆ ಬಾರಿ ದುಷ್ಪರಿಣಾಮವನ್ನು ಬೀರಿತು ಎಂಬುದನ್ನು ದಾಖಲಿಸಿದ್ದಾರೆ.

ವಿಶ್ವದಲ್ಲಿಯೇ ಯಾವ ದೇಶವು ಆರ್ಥಿಕವಾಗಿ ಮುಂದುವರೆದಿದೇ ಎಂಬ ಸಮೀಕ್ಷೆ, ಅಧ್ಯಯನದಿಂದಲೇ ಅದು ಅಭಿವೃದ್ಧಿ ಹೊಂದಿದ ಮತ್ತು ಮುಂದುವರೆದ ರಾಷ್ಟ್ರವೆಂದು ಅಗ್ರಸ್ಥಾನವನ್ನು ಕೊಡುತ್ತೇವೆ. ಅದೇ ರೀತಿಯಾಗಿ ಒಂದು ಪ್ರದೇಶವು ಆರ್ಥಿಕವಾಗಿ ಎಷ್ಟರ ಮಟ್ಟಿಗೆ ಅಭಿವೃದ್ಧಿಯನ್ನು ಹೊಂದಿದೆ ಎಂಬುದನ್ನು ಗಮನಿಸುವಾಗ ಹಲವಾರು ವಿಧದ ಮಹತ್ವದ ಅಂಶಗಳನ್ನು ಗುರುತಿಸಬೇಕಾಗುತ್ತದೆ. ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಜನ ಸಾಂದ್ರತೆ, ಅವರ ಜೀವನ ಮಟ್ಟ ತಲಾ ಆದಾಯ, ಆದಾಯದ ವಿವಿಧ ಕುಲಕಸಬುಗಳು, ಲಭ್ಯವಿರುವಂತಹ ಮೂಲ ಸಂಪನ್ಮೂಲಗಳು, ಬದಲಾಯಿಸಲಿಲ್ಲ. ಸಂಪನ್ಮೂಲಗಳು, ಅವುಗಳ ಬಳಕೆ, ಶಿಕ್ಷಣ ಗುಣಮಟ್ಟ ಕೈಗಾರಿಕೆಗಳು ಉದ್ಯಮ, ಕೃಷಿ, ಹೊಸ ಕೈಗಾರಿಕೆ, ವಿನೂತನ ಕೃಷಿ ಚಟುವಟಿಕೆ, ಸಾರಿಗೆ ಸಂಪರ್ಕ, ವಿದ್ಯುತ್, ಆರೋಗ್ಯ, ಖಾಸಗಿ ಮತ್ತು ಸಾರ್ವಜನಿಕ ವಲಯದ ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಇತ್ಯಾದಿ ಅಂಶಗಳಲ್ಲಿ ಗಣನೀಯವಾದ ಏಳು

ಬೀಳು ಅಥವಾ ಅಭಿವೃದ್ಧಿ ಅನಭಿವೃದ್ಧಿಯಾಗಿರುವುದನ್ನು ಸ್ಪಷ್ಟವಾಗಿ ಕೂಲಂಕುಶವಾಗಿ ಅಧ್ಯಯಿನಿಸಿದಾಗಲೇ ಮಾತ್ರ ಜಿಲ್ಲೆಯ ಆರ್ಥಿಕತೆಯ ಬಗ್ಗೆ ಗುರುತಿಸಬಹುದು. ಕೆಲವೊಂದು ಸಾರಿ ದತ್ತಾಂಶಗಳು ಅಥವಾ ದಾಖಲೆಗಳ ಕೊರತೆಗಳಿಂದ ಆರ್ಥಿಕತೆಯ ಅಭಿವೃದ್ಧಿಯ ಏರಿಳಿತಗಳು ಗುರುತಿಸಿ ಅಸ್ಪಷ್ಟವಾದ ಮಾಹಿತಿಗಳು ಹೊರಬರಲು ಸಾಧ್ಯತೆಗಳಿರುತ್ತವೆ.

ಜಿಲ್ಲೆಯ ಆರ್ಥಿಕತೆಯ ಕುರಿತಂತೆ ನಿಖರವಾಗಿ ಗುರುತಿಸುವುದು ಅಸಾಧ್ಯ ಹಾಗೂ ಕಷ್ಟಸಾಧ್ಯ. ಅಂದರೆ ದಿನದಿಂದ ದಿನಕ್ಕೆ ಆರ್ಥಿಕ ಕ್ಷೇತ್ರವು ಬದಲಾವಣೆ ಹಾಗೂ ಏರಿಳಿತದ ಸುಳಿಗೆ ಸಿಲುಕುತ್ತಿರುತ್ತದೆ. ಆದರೂ ಸಹ ಬ್ರಿಟಿಷರು ವಸಾಹತು ಕಾಲದ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆಗೆ ಆಗಮನದಿಂದ ವಿವಿಧ ಕ್ಷೇತ್ರಗಳಲ್ಲಿ ಬದಲಾವಣೆಯ ಪರ್ವ ಪ್ರಾರಂಭವಾಗಿ ಜಿಲ್ಲೆಯಲ್ಲಿ ವ್ಯವಸ್ಥಿತವಾದ ಆರ್ಥಿಕತೆ ನೆಲೆನಿಲ್ಲಲು ಬ್ರಿಟಿಷರಿಂದ ಸಾಧ್ಯವಾಯಿತೆಂದು ಹೇಳಬಹುದು. ಈ ಸಮಯದಲ್ಲಿ ಹಲವಾರು ರೀತಿಯ ಉಪಯೋಗ ಮತ್ತು ದುರಪಯೋಗಗಳು ಸಹ ಉಂಟಾಗಿರಬಹುದೆಂದು ಊಹಿಸಬಹುದು.

ಭಾರತದಲ್ಲಿ ಬ್ರಿಟಿಷರು ನೆಲೆ ನಿಲ್ಲಲು ಬಾರಿ ಮೊತ್ತದ ಹಣಕಾಸು ಕಂಪನಿಗೆ ಅವಶ್ಯಕವಾಗಿ ಬೇಕಾಗಿತ್ತು. ಅಂದರೆ ಸಮುದ್ರ ಅಥವಾ ಕಡಲು ತೀರ ಪ್ರದೇಶಗಳಲ್ಲಿ ತಮ್ಮ ವ್ಯಾಪಾರ ಮಳಿಗೆಗಳನ್ನು ತೆರೆಯಲು, ಯುದ್ಧ ಮತ್ತು ಸ್ಥಳೀಯ ಪ್ರತಿಭಟನೆಗಳನ್ನು ನಿಗ್ರಹಿಸಲು ಸೈನ್ಯಗಳು, ವಾಸ ಗೃಹಗಳ ನಿರ್ಮಾಣ, ಸೈನ್ಯ ಪ್ರದೇಶದಲ್ಲಿ ದಂಡು ನಿರ್ಮಾಣ, ಚರ್ಚ್ ಹಾಗೂ ತಮಗೆ ಅನುಕೂಲಕರ ಪ್ರದೇಶಗಳಲ್ಲಿ ಆಡಳಿತ ಕಟ್ಟಡಗಳನ್ನು ನಿರ್ಮಿಸಲು ಈಸ್ಟ್ ಕಂಪನಿ ಮತ್ತು ಬ್ರಿಟಿಷ್ ಸರಕಾರಕ್ಕೆ ಹಣಕಾಸಿನ ಸಂಪನ್ಮೂಲವನ್ನು ಪೂರೈಸುವಷ್ಟು ಸಮರ್ಥವಿರಲಿಲ್ಲ. ಹಾಗಾಗಿ ಭಾರತದಲ್ಲಿ ಸಂಪದ್ಭರಿತ ಪ್ರದೇಶಗಳಾದ ಮದ್ರಾಸ್, ಕಲ್ಕತ್ತ, ಮುಂಬಯಿ, ಮಂಗಳೂರು, ಗೋವಾ ಇತ್ಯಾದಿ ಪ್ರದೇಶಗಳಲ್ಲಿ ತೆರಿಗೆಯನ್ನು ಹಾಕುವುದರ ಮೂಲಕ ಅಗಾಧವಾದ ಹಣಕಾಸಿನ ಕ್ರೋಢೀಕರಣವನ್ನು ಮಾಡಿಕೊಂಡರು. ಎಲ್ಲ ಕ್ಷೇತ್ರದಲ್ಲಿ ಆರ್ಥಿಕತೆಯು ಅಭಿವೃದ್ಧಿಯತ್ತ ಸಾಗಿದಾಗ ಅನಿವಾರ್ಯವಾಗಿ ತೆರಿಗೆಯಲ್ಲಿ ಹೆಚ್ಚಳ ಮಾಡಿದರು. ಇದರಿಂದ ಮತ್ತೆ ಬ್ರಿಟಿಷ್ ಸಾಮ್ರಾಜ್ಯಕ್ಕೆ ಬಂಡವಾಳ ಶೇಖರಣೆ ಉತ್ತಮವಾಯಿತು. ಇಂತಹ ಮಹತ್ವವಾದ ಬೆಳವಣಿಗೆಯನ್ನು ಗಮನಿಸಿದ ಬ್ರಿಟಿಷರು ಬ್ರಿಟನ್ ಬಂಡವಾಳಶಾಹಿಯ ಅಭಿವೃದ್ಧಿಗೆ ಹೇರಳವಾದ ಅವಶ್ಯಕವಾಗಿರುವ ಸಂಪನ್ಮೂಲಗಳು ಭಾರತದಲ್ಲಿವೆ ಎಂದು ಗುರುತಿಸಿಕೊಂಡು ಭಾರತದ ಆರ್ಥಿಕ ಹಾಗೂ ನೈಸರ್ಗಿಕ ಅಪಾರ ಸಂಪನ್ಮೂಲವನ್ನು ಉಪಯೋಗಿಸಿಕೊಂಡು ಬ್ರಿಟನ್‌ನಲ್ಲಿ ಹಾಗೂ ಭಾರತದಲ್ಲಿ ಕೈಗಾರಿಕೆ, ವಾಣಿಜ್ಯ, ಕೃಷಿ, ಶಿಕ್ಷಣ, ಆರೋಗ್ಯ ಹಾಗೂ ಲೋಕೋಪಯೋಗಿ ಕೆಲಸಕಾರ್ಯಗಳಲ್ಲಿ ತೊಡಗಿಸಿದರು. ಈ ಎಲ್ಲ ಕೆಲಸಕಾರ್ಯಗಳಿಗೆ ಆರ್ಥಿಕತೆಯ ಬೆನ್ನೆಲುಬಾಗಿ ಆಧಾರ ಸ್ತಂಭವಾಗಿ ನಿಂತಿತು ಎಂದು ಸ್ಪಷ್ಟಪಡಿಸಬಹುದು.

## ಬ್ರಿಟಿಷರ ನಾಣ್ಯಗಳು

ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಈಸ್ಟ್ ಇಂಡಿಯಾ ಕಂಪನಿ ಕಾಲಕ್ರಮೇಣದಲ್ಲಿ ಆಡಳಿತವನ್ನು ವಹಿಸಿಕೊಂಡು ತನ್ನದೇ ಆದ ನಾಣ್ಯಗಳನ್ನು ಅಚ್ಚು ಮಾಡಲು ಆರಂಭ ಮಾಡಿತು. ಕ್ರಿ.ಶ.೧೮೬೮ರ ವರಗೆ ಮೈಸೂರು ಸಂಸ್ಥಾನದಲ್ಲಿ ಒಡೆಯರ ನಾಣ್ಯಗಳೇ ಚಲಾವಣೆಯಲ್ಲಿದ್ದವು. ಇತರ ಕೆಲವು ಭಾಗಗಳಲ್ಲಿ ಕಂಪನಿಯ ನಾಣ್ಯಗಳು ಬಳಕೆಯಲ್ಲಿದ್ದವು. ಕರ್ನಾಟಕವೂ ಸೇರಿದಂತೆ ದಕ್ಷಿಣ ಭಾರತದಲ್ಲಿ ಚಲಾವಣೆಗೋಸ್ಕರ ಪಗೋಡ ಎಂದು ಕರೆಯಲಾದ ಶ್ರೀದೇವಿ ಭೂದೇವಿಯರ ಸಮೇತನಾದ ವೆಂಕಟೇಶ್ವರನ ಚಿತ್ರವಿರುವ ನಾಣ್ಯಗಳನ್ನು ಅಚ್ಚು ಹಾಕಿಸಲಾಯಿತು.[೪೬] ಇದು ಮುಂದುವರೆದು ಶ್ರೀ ದುರ್ಗಾಮಾತೆ, ಆಂಜನೇಯ, ಶಿವ ಇತ್ಯಾದಿ ದೇವಾನು ದೇವತೆಗಳ ಚಿತ್ರವಿರುವ ನಾಣ್ಯಗಳನ್ನು ಟಂಕಿಸಿ ಬ್ರಿಟಿಷರು ಚಲಾವಣೆಗೆ ತಂದರು.

ಬಾಲಕೋಟೆಯಲ್ಲಿ ಪ್ರಾರಂಭವಾದ ನಾಣ್ಯ ಮುದ್ರಣದ ಕಾರ್ಯವು ಪೇಶ್ವೆ ಆಡಳಿತ (೧೭೫೭–೧೮೧೮)ರ ವರೆಗೂ ನಡೆಯುತ್ತಿತ್ತು. ಈ ಭಾಗದ ಪೇಶ್ವೆ ಆಡಳಿತದ ಸರದಾರನಾದ 'ಮಲ್ಹಾರ್ ಬಿಕ್ಕಾಜಿ ರಾಸ್ತೆಯ ಆಜ್ಞೆಯ ಮೇಲೆ ಮುದ್ರಣ ಕಾರ್ಯ ನಡೆಯುತ್ತಿದ್ದುದರಿಂದ ಈ ನಾಣ್ಯಗಳು 'ಮಲ್ಹಾರಿಶಾಹಿ'ರೂಪಾಯಿಗಳೆಂದು ಹೆಸರುವಾಸಿಯಿತು. ಬಾಗಲಕೋಟೆಯ ಟಂಕಸಾಲೆಯು ೧೮೩೩ರ ವರೆವಿಗೂ ಕಾರ್ಯನಿರ್ವಹಿಸುತ್ತಿತ್ತು. ಕಂಪನಿ ಆಡಳಿತ ಜಾರಿಗೆ ಬಂದ ಮೇಲೆ ಜಿಲ್ಲಾಧಿಕಾರಿಯ ಆಜ್ಞೆಯಂತೆ ವಿಜಯಪುರದ ಟಂಕಸಾಲೆಯ ನಾಣ್ಯಗಳನ್ನು ಮುದ್ರಣ ಮಾಡುವುದನ್ನು ನಿಲ್ಲಿಸಿತು.[೪೭] ಮುಧೋಳದಲ್ಲೂ ಒಂದು ಟಂಕಸಾಲೆಯು ೧೮೨೨ರ ವರೆಗೂ ಮುದ್ರಣ ಕಾರ್ಯವನ್ನು ಮಾಡುತ್ತಿತ್ತು. ಟಂಕಸಾಲೆಗಳೆಲ್ಲವೂ ಖಾಸಗಿ ಆಡಳಿತದಲ್ಲಿ ನಡೆಯುತ್ತಿದ್ದವು. ಟಂಕಸಾಲೆಯಲ್ಲಿ ತಯಾರಾದ ನಾಣ್ಯಗಳನ್ನು ಕೊಟ್ಟು ಘಟ್ಟಿಯನ್ನು ಕೊಳ್ಳಲಾಗುತ್ತಿತ್ತು. ಮುದ್ರಣದ ಯಜಮಾನನು ನಾಣ್ಯ ಮುದ್ರಣಕ್ಕಾಗಿ ಒಂದು ನಿರ್ದಿಷ್ಟವಾದ ತೆರಿಗೆಯನ್ನು ಕೊಡುತ್ತಿದ್ದನು. ಮಲ್ಹಾರ್‌ಶಾಹಿ ರೂಪಾಯಿಯು ೧೭೨ ಗುಲಗಂಜಿ ತೂಕವನ್ನು ಹೊಲುತ್ತಿತ್ತು. ಒಂದು ನಾಣ್ಯವ್ನನು ಹನ್ನೊಂದು ಮಾಪನಗಳನ್ನಾಗಿಯೂ, ಒಂದು ಮಾಪವನ್ನು ೧೬ ಆಣೆಗಳನ್ನಾಗಿಯೂ ವಿಭಾಗಿಸಿದ್ದರು.[೪೮] ಮುಂದೆ ಈ ನಾಣ್ಯ ಪದ್ಧತಿಯು ಕಾಲಕ್ರಮೇಣ ಬದಲಾವಣೆ ಹೊಂದಿತು.

ಬ್ರಿಟಿಷ್ ಸರಕಾರದ ಆಳ್ವಿಕೆ ಪ್ರಾರಂಭವಾದಂದಿನಿಂದ ೧೮೪೦ರವರೆಗೆ ೧೬ ಪ್ರಕಾರದ ರೂಪಾಯಿಗಳು ಜಾರಿಯಲ್ಲಿದ್ದವು. ಅವುಗಳಲ್ಲಿ ಬಾಗಲಕೋಟೆ ಮಲ್ಹಾರ್‌ಶಾಹಿ ನಾಣ್ಯವು ಕೂಡಾ ಒಂದಾಗಿದೆ. ಬ್ರಿಟಿಷ್ ಕಂಪನಿಯವರು ೧೮೩೫–೩೬ರಲ್ಲಿ ತಾಮ್ರದ ದುಡ್ಡಿನ ನಾಣ್ಯಗಳನ್ನು ಚಲಾವಣೆಗೆ ತಂದಿದ್ದರು. ಮಲ್ಹಾರಿ ಮನೆತನದ ನಾಣ್ಯಗಳ ಜೊತೆಗೆ ಗೋವಿಂದ

ರಾಜಿ ದುಡ್ಡುಗಳೆಂದು ನಾಣ್ಯಗಳನ್ನು ಮುದ್ರಿಸಲಾಗುತಿತ್ತು. ಗೋವಿಂದರಾಜಿ ದುಡ್ಡುಗಳು ಮುಧೋಳದಲ್ಲಿ ೧೮೬೦ರವರೆಗೂ ಚಲಾವಣೆಯಲ್ಲಿದ್ದವು. ಜಮಖಂಡಿಯಲ್ಲಿ ತಾಮ್ರದ ನಾಣ್ಯಗಳನ್ನು ಮುದ್ರಿಸುವ ಟಂಕಸಾಲೆ ಇತ್ತೆಂದು ತಿಳಿದುಬಂದಿದೆ. ಬಾಗಲಕೋಟೆ ಟಂಕಸಾಲಿಗೆ ಬೆಳ್ಳಿಯನ್ನು ಮೀರಜ್ ಮತ್ತು ಸೋಲ್ಲಾಪುರದಿಂದ ತರಿಸುತ್ತಿದ್ದರು.[೪೯] ನಾಣ್ಯ ಮುದ್ರಣಕ್ಕಾಗಿ ಸ್ಥಳೀಯ ಪರಿಕರಗಳನ್ನು ತಯಾರಿಸಿ ಉಪಯೋಗಿಸುತ್ತಿದ್ದರು. ನಾಣ್ಯ ತಯಾರಿಕೆಗಾಗಿ ವಿಶೇಷ ಪರಿಣಿತರು ಶ್ರಮಿಕರನ್ನು ನೇಮಿಸಲಾಗುತ್ತಿತ್ತು.

ನಾಣ್ಯಗಳು ನಮ್ಮ ರಾಷ್ಟ್ರದ ಅಮೂಲ್ಯ ಆಸ್ತಿ ಮತ್ತು ಸಾಂಸ್ಕೃತಿಕ ಸಂಪತ್ತು. ಅದನ್ನು ಉಳಿಸಿಕೊಂಡು ಬರಬೇಕಾದುದು ಎಲ್ಲ ನಾಗರಿಕರ ಕರ್ತವ್ಯ ಕೂಡ. ಸಾಮಾನ್ಯವಾಗಿ ಭೂಮಿಯನನು ಅಗೆಯುವಾಗ ಪ್ರಾಚೀನ ನಾಣ್ಯಗಳು ನಮಗೆ ದೊರೆಯುತ್ತವೆ. ಅವುಗಳನ್ನು ಗುಟ್ಟಾಗಿ ಕರಗಿಸುವುದು ಶಿಕ್ಷಾರ್ಹ ಅಪರಾಧ. ಆದುದರಿಂದ ಎಲ್ಲೆ ನಾಣ್ಯಗಳು ದೊರೆತರೆ ಅವುಗಳನ್ನು ಪುರಾತತ್ವ ಇಲಾಖೆ, ವಸ್ತು ಸಂಗ್ರಹಾಲಯಗಳಲ್ಲಿ ಸಂರಕ್ಷಿಸಿಡಬೇಕು.[೫೦] ಇದರಿಂದ ಸಂಶೋಧನೆಗೆ, ಹೊಸ ಅಧ್ಯಯನದಿಂದ ಇತಿಹಾಸ ಪುನರಚನೆಗೆ ಸಹಾಯಕವಾಗುತ್ತದೆ.

**ನಾಣ್ಯಗಳ ಸಂಗ್ರಹ**

ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕಲಾದಗಿ, ಮುಧೋಳ, ಲೋಕಾಪುರ, ಬಾಗಲಕೋಟೆ ಸ್ಥಳಗಳಲ್ಲಿ ಸ್ಥಳೀಯರಿಂದ ಬ್ರಿಟಿಷರ ಆಡಳಿತದ ಅವಧಿಯಲ್ಲಿ ಚಲಾವಣೆಯಲ್ಲಿದ್ದ ಒಟ್ಟು ಹದಿನಾರು ನಾಣ್ಯಗಳನ್ನು ಸಂಗ್ರಹಿಸಲಾಗಿದೆ.

೧. 1818 EAST INDIA COMPANY UK ONE ANNA ಎಂದು ಒಂದು ಬದಿಯಲ್ಲಿದೆ. ಹಿಂಬದಿಯಲ್ಲಿ ೧೮೧೮, ದುರ್ಗಾಮಾತೆಯ ಚಿತ್ರವಿದೆ.

೨. 1818 EAST INDIA COMPANY UK ONE ANNA ಎಂದು ಒಂದು ಬದಿಯಲ್ಲಿ ಮುದ್ರಣಗೊಂಡು, ಹಿಂಬದಿಯಲಿ ಜಯ ಮಾ ಕಾಳಿ ಎಂದು ಉಲ್ಲೇಖಿಸಿ ಕಾಳಿಕಾ ಮಾತೆಯ ಚಿತ್ರವಿದೆ.

೩. 1818 EAST INDIA COMPANY UKL HALF ANNA ಎಂದು ಒಂದು ಬದಿಯಲ್ಲಿ ಮುದ್ರಣಗೊಂಡು ಹಿಂಬದಿಯಲ್ಲಿ ಸಂತ ಗುರುನಾನಕರ ಚಿತ್ರವಿದೆ.

೪. 1818 EAST INDIA COMPANY UKI HALF ANNA ಎಂದು ಒಂದು ಬದಿಯಲ್ಲಿ ಮುದ್ರಣಗೊಂಡಿದ್ದು, ಹಿಂಬದಿಯಲ್ಲಿ ಲಕ್ಷ್ಮಿದೇವಿ ಚಿತ್ರವಿದೆ.

೫. 1818 EAST INDIA COMPANY QUARTER ANNA ಎಂದು ಮುದ್ರಣಗೊಂಡಿದ್ದು, ಹಿಂಬದಿಯಲ್ಲಿ ಸಿಂಹದ ಮೇಲೆ ಕುಳಿತ ದುರ್ಗಾಮಾತೆಯ ಚಿತ್ರವಿದೆ.

೬. 1818 EAST INDIA COMPANY QUARTER ANNA ಎಂದು ಮುದ್ರಣಗೊಂಡಿದ್ದು, ಹಿಂಬದಿಯಲ್ಲಿ ಶಿವನ(ಪರಮೇಶ್ವರ) ಚಿತ್ರವಿದೆ.

೭. 1818 EAST INDIA COMPANY ಬ್ರಿಟಿಷ ಲಾಂಛನ ಒಂದು ಬದಿಯಲ್ಲಿದೆ. ಹಿಂಬದಿಯಲಿ HALF ANNA ತೂಕದ ತಕ್ಕಡಿ, ಉರ್ದು ಸಂಕೇತವಿದೆ.

೮. 1862 ONE QUARTER ANNA INDIA ಎಂದು ಒಂದು ಬದಿಯಲ್ಲಿ ಮುದ್ರಣಗೊಂಡಿದ್ದು, ಹಿಂಬದಿಯಲ್ಲಿ VICTORIA QUEEN ಅಕ್ಷರದ ಜೊತೆಗೆ ರಾಣಿಯ ಚಿತ್ರವಿದೆ.

೯. EAST INDIA COMPANY 1/2 ANNA, ಉರ್ದು ಅಕ್ಷರ ಸಹ ಒಂದು ಬದಿಯಲ್ಲಿದೆ. ಹಿಂಬದಿಯಲ್ಲಿ 1835 ಬ್ರಿಟಿಷ್ ಲಾಂಛನವಿದೆ.

೧೦. ONE QUARTER ANNA INDIA 1903 ಎಂದು ಒಂದು ಬದಿಯಲ್ಲಿ ಬರೆಯಲಾಗಿದ್ದು, ಹಿಂಬದಿಯಲ್ಲಿ EDWARD VII KING & EMPEROR ಅಕ್ಷರ ಜೊತೆಗೆ ರಾಜಾ ಏಡ್ವರ್ಡ್‌ರ ಚಿತ್ರವಿದೆ.

೧೧. ONE QUARTER ANNA INDIA 1919 ಎಂದು ಒಂದು ಬದಿಯಲ್ಲಿ ಮುದ್ರಣಗೊಂಡಿದ್ದು, ಹಿಂಬದಿಯಲ್ಲಿ GEORGE V KING EMPEROR ಅಕ್ಷರ ಹಾಗೂ ರಾಜನ ಚಿತ್ರವಿದೆ.

೧೨. EAST INDIA COMPANY KINNAR STATE, 1936, ಕಮಲದ ಚಿತ್ರ, ದೀಪದ ಚಿತ್ರ, ಒಂಭತ್ತು ನಕ್ಷತ್ರದ ಸಂಕೇತಗಳು ಒಂದು ಬದಿಯಲ್ಲಿದ್ದು, ಹಿಂಬದಿಯಲ್ಲಿ ಶ್ರೀ ಹನುಮಾನಿಜಿ ಎಂದು ಹಿಂದಿ ಭಾಷೆಯ ಅಕ್ಷರಗಳಿದ್ದು, ಹನುಮಾನನ ಚಿತ್ರವಿದೆ.

೧೩. 1/12 ANNA INDIA 1936 ಒಂದು ಬದಿಯಲ್ಲಿದ್ದು, ಹಿಂಬದಿಯಲ್ಲಿ GEORGE V KING EMPEROR ಅಕ್ಷರ ಜೊತೆಗೆ ರಾಜನ ಚಿತ್ರಿವಿದೆ.

೧೪. 2 ANNA INDIA 1940, ಎಂದು ಬರೆದು ಉರ್ದು, ಹಿಂದಿ, ತೆಲುಗು ಮತ್ತು ಮರಾಠಿ ಅಕ್ಷರಗಳು ಒಂದು ಬದಿಯಲ್ಲಿದೆ. ಹಿಂಬದಿಯಲಿ GEORGE VI KING EMPEROR ಎಂದು ಅಕ್ಷರದ ಜೊತೆಗೆ ರಾಜನ ಚಿತ್ರವಿದೆ. ಈ ನಾಣ್ಯ ಚೌಕಾಕಾರದಲ್ಲಿದೆ.

೧೫. VICTORIA QUEEN ರಾಣಿಯ ಚಿತ್ರ ಒಂದು ಬದಿಯಲ್ಲಿದ್ದರೆ, ಹಿಂಬದಿಯಲ್ಲಿ ೧/೨ ಅಸ್ಪಷ್ಟ ಅಕ್ಷರಗಳಿಂದ ತ್ರುಟಿತಗೊಂಡ ವೃತ್ತಾಕಾರದ ನಾಣ್ಯ ಇದಾಗಿದೆ.

೧೬. ಬ್ರಿಟಿಷ್ 1835 EAST INDIA COMPANY ಲಾಂಛನ ಒಂದು ಬದಿಯಲ್ಲಿದ್ದು, ಹಿಂಬದಿಯಲ್ಲಿ ಅಸ್ಪಷ್ಟವಾಗಿ, ತ್ರುಟಿತಗೊಂಡಿದೆ. ವೃತ್ತಾಕಾರದ ಚಿಕ್ಕ ನಾಣ್ಯ ಇದಾಗಿದೆ.

ಈ ಮೇಲಿನ ಬ್ರಿಟಿಷರ ನಾಣ್ಯಗಳು ತುಂಬಾ ವೈಶಿಷ್ಟತೆಗಳಿಂದ ಕೂಡಿವೆ. ನಾಣ್ಯಗಳು ವೃತ್ತಾಕಾರದಲ್ಲಿದ್ದು ಮೌಲ್ಯ, ತೂಕದಲ್ಲಿ ವಿಭಿನ್ನತೆಯಿಂದ ಕೂಡಿವೆ. ನಾಣ್ಯದ ಒಂದು ಬದಿಯಲ್ಲಿ ಇಸ್ವಿ, ನಾಣ್ಯದ ಮೌಲ್ಯ, ರಾಜ, ಬ್ರಿಟನ್ ರಾಣಿಯ ಚಿತ್ರವಿರುವುದು ಕಂಡುಬರುತ್ತದೆ. ಅದೇ ರೀತಿ ನಾಣ್ಯದ ಇನ್ನೊಂದು ಬದಿಯಲ್ಲಿ ಶ್ರೀ ದುರ್ಗಾಮಾತೆ, ಜಯ ಮಾಕಾಳಿ ಹಿಂದಿ ಅಕ್ಷರ. ಗುರುನಾನಕರ ಚಿತ್ರ, ಶಿವನ ಚಿತ್ರ, ಆಂಜನೇಯ(ಹನುಮಾನ)ನ ಚಿತ್ರ, ಹೀಗೆ ದೇವಾನು ದೇವತೆಗಳ ಸಾಧು ಸಂತರ ಚಿತ್ರಗಳನ್ನು ಟಂಕಿಸಿದ್ದಾರೆ. ಇದರಿಂದ ವಸಾಹತು ಕಾಲದ ಸಂದರ್ಭದಲ್ಲಿ ನಾಣ್ಯಗಳನ್ನು ದೇವರ ಸ್ವರೂಪದಲ್ಲಿ ಪೂಜಿಸಿ ಆರಾಧಿಸುವ ಕಲ್ಪನೆಯಲ್ಲಿ ಮುದ್ರಿಸಲಾಗಿದೆ. ಪ್ರಾಚೀನ ಕಾಲದಿಂದ ಹಿಡಿದು ನಾಣ್ಯಗಳನ್ನು ಇಂದಿನವರೆಗೂ ಸಹ ಅತ್ಯಂತ ಗೌರವಯುತವಾಗಿ, ಪೂಜ್ಯನೀಯ ಭಾವದಲ್ಲಿ ನೋಡುವ ಮತ್ತು ಆರಾಧಿಸಿ ಪೂಜಿಸುವ ಪದ್ಧತಿಯು ಮುಂದುವರೆದುಕೊಂಡು ಬಂದಿದೆ. ದುಡ್ಡು, ಹಣ ಅಥವಾ ನಾಣ್ಯಗಳನ್ನು ಲಕ್ಷ್ಮೀಗೆ ಹೋಲಿಸಲಾಗುತ್ತದೆ. ಹಾಗಾಗಿ ಸಂಪತ್ತಿನ ಆರಾಧಕಳಾಗಿ ಲಕ್ಷ್ಮೀ ಬಿಂಬಿತಳಾಗಿದ್ದಾಳೆ. ನಾಣ್ಯಗಳ ತಯಾರಿಕೆಯ ಪದ್ಧತಿಯು ಕಾಲಕ್ಕೆ ತಕ್ಕಂತೆ ಬದಲಾಗಿದ್ದು, ಅದು ಲಭ್ಯವಿರುವ ಕಚ್ಚಾವಸ್ತು ಮೂಲ ಸಾಮಗ್ರಿ, ಜನರು ಬೇಕು ಬೇಡಿಕೆ, ದೇಶದ ಆರ್ಥಿಕ ಸ್ಥಿತಿಯ ಸುಧಾರಣೆಗಾಗಿ ನಾಣ್ಯಗಳ ಮುದ್ರಣ ವ್ಯವಸ್ಥೆಯು ಸಾಕಷ್ಟು ಏರಿಳಿತವನ್ನು ಕಂಡಿದೆ ಎಂದು ಗುರುತಿಸಬಹುದು.

ಬ್ರಿಟಿಷರ ಆಗಮನದಿಂದ ಜಿಲ್ಲೆಯಲ್ಲಿ ವ್ಯವಸ್ಥಿತವಾಗಿ ಶೈಕ್ಷಣಿಕ ಸಾಮಾಜಿಕ, ಆರ್ಥಿಕ ಬದಲಾವಣೆಗಳು ಕಂಡುಬಂದವು. ರಬಕವಿ–ಬನಹಟ್ಟಿ ಗ್ರಾಮಗಳನ್ನು ಬ್ರಿಟಿಷರ ಆಡಳಿತಾವಧಿಯಲ್ಲಿ ಮ್ಯಾಂಚೆಸ್ಟರ್ ಎಂದು ಕರೆಯುತ್ತಿದ್ದರು. ಈ ಪ್ರದೇಶದಲ್ಲಿ ಹತ್ತಿ, ನೇಕಾರಿಕೆ, ಕೈಮಗ್ಗ, ಗುಡಿಗಾರಿಕೆಗಳು ಹೆಚ್ಚಾಗಿ ಪ್ರಚಲಿತದಲ್ಲಿದ್ದವು. ಇದಕ್ಕೆ ಬ್ರಿಟಿಷರು ಆಧುನಿಕ ಸ್ಪರ್ಶ ಹಾಗೂ ಇಲ್ಲಿರುವ ಆರ್ಥಿಕ ಬಂಡವಾಳ ಹೂಡಿ ಅಭಿವೃದ್ಧಿಪಡಿಸಿದರು. ಇದರಿಂದ ರಬಕವಿ, ಬನಹಟ್ಟಿ, ಗುಳೇದಗುಡ್ಡ, ಇಲಕಲ್ಲ, ಅಮೀನಗಡ, ಕಮತಗಿ ಇತ್ಯಾದಿ ಪ್ರದೇಶಗಳಲ್ಲಿ ರೇಷ್ಮೆ ಸೀರೆ ವಿಶ್ವಮಟ್ಟದಲ್ಲಿ ಇಂದಿಗೂ ಚರಿತ್ರೆ ಪುಟಗಳಲ್ಲಿ ದಾಖಲಾಗಿ ವಿಶ್ವಪ್ರಸಿದ್ಧಿಯಾಗಿವೆ. ಇಲಕಲ್ ಸೀರೆ, ಗುಳೇದಗುಡ್ಡ ಒಣ ವಿಶ್ವಮಾನ್ಯತೆಯನ್ನು ಪಡೆಯಲು ಬ್ರಿಟಿಷರು ಒಂದು ವಿಧದಲ್ಲಿ ಕಾರಣೀಭೂತರಾದರು. ಕಲಾದಗಿ ಬಾಗಲಕೋಟೆ, ಶೆಲ್ಲಿಕೇರಿ, ಲೋಕಾಪುರ, ಯಾದವಾಡ ಮುಂತಾದ ಪ್ರದೇಶಗಳಲ್ಲಿ ಖನಿಜ ನಿಕ್ಷೇಪಗಳಾದ, ಸೀಮೆ ಸುಣ್ಣದ ಕಲ್ಲು, ಡೋಲೋಮೈಟ್ ಸಿಮೆಂಟ್ ಕಲ್ಲು ಇರುವಂತಹ ನಿಕ್ಷೇಪಗಳನ್ನು ಪತ್ತೆ ಹಚ್ಚಿದರು. ಇಂತಹ ಮಹತ್ವದ ಸಂಶೋಧನೆಯಿಂದ ಈ ಮೇಲಿನ ಪ್ರದೇಶಗಳಲ್ಲಿ ಸುಮಾರು ೭೦ಕ್ಕೂ ಹೆಚ್ಚು

ಸಿಮೆಂಟ್ ಫ್ಯಾಕ್ಟರಿಗಳು ಕಾರ್ಯನಿರ್ವಹಿಸಿ ಹಲವಾರು ರಾಜ್ಯಗಳಿಗೆ ಸಿಮೆಂಟ್ ಸಾಗಿಸುವುದರಿಂದ ಲಕ್ಷಾಂತರ ಜನರಿಗೆ ಉದ್ಯೋಗಗಳು ಇಂದು ದೊರಕುವಂತಾಗಿದೆ.

ಜಿಲ್ಲೆಯಲ್ಲಿ ಸಿಮೆಂಟ್ ಮತ್ತು ಸಕ್ಕರೆ ಕಾರ್ಖಾನೆಗಳಿಂದಲೇ ಹೆಚ್ಚು ಸಂಪದ್ಭರಿತವಾಗಿದೆ. ಕಲಾದಗಿ ಪ್ರದೇಶದಲ್ಲಿ ವಿವಿಧ ರೀತಿಯ 'ಹಣ್ಣು ಹಂಪಲುಗಳ ನಾಡು' ಎಂದು ಬ್ರಿಟಿಷರು ಗುರುತಿಸಿದರೂ ವಸಾಹತು ಕಾಲದ ಸಂದರ್ಭದಲ್ಲಿ ಕಲಾದಗಿಯಿಂದ ಬೆಳಗಾವಿ, ಗೋವಾ ಮಾರ್ಗವಾಗಿ ಹಣ್ಣುಗಳು ಬ್ರಿಟನ್ ದೇಶಕ್ಕೆ ರಫ್ತಾಗುತ್ತಿದ್ದವು ಎಂದು ಸ್ಥಳೀಯರು ಇಂದಿಗೂ ಸ್ಮರಿಸುತ್ತಾರೆ. ಈ ಮಹತ್ವದ ಬೆಳವಣಿಗೆಯ ಪ್ರತಿಫಲವಾಗಿ ತೋಟಗಾರಿಕಾ ವಿಶ್ವವಿದ್ಯಾಲಯ ಇಂದು ಬಾಗಲಕೋಟೆಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಬ್ರಿಟಿಷರು ಯಾವತ್ತು ಹಣ್ಣು ಮತ್ತು ಜಲಚರಗಳನ್ನು ಊಟದಲ್ಲಿ ಉಪಯೋಗಿಸುತ್ತಿದ್ದರು. ಹಾಗಾಗಿ ಕಲಾದಗಿ ಪರಿಸರವು ಹಣ್ಣು, ತರಕಾರಿ, ಬೆಳೆಗಳ ಕೃಷಿಗೆ ಯೋಗ್ಯವಾದ ವಾಯುಗುಣ ಮತ್ತು ಹವಾಗುಣವನ್ನು ಹೊಂದಿದೆ. ಅದರಂತೆ ಜಲಚರಗಳಾದ ಮೀನು, ಏಡಿ, ಆಮೆ ಇವುಗಳನ್ನು ತಿನ್ನಲು ಹತ್ತಿರದ ಘಟಪ್ರಭಾ ನದಿಯಿಂದ ತರುತ್ತಿದ್ದರು. ಆದರೆ ಬೇಸಿಗೆ ಸಮಯದಲ್ಲಿ ನದಿಗೆ ನೀರು ಇಲ್ಲದಿರುವುದನ್ನು ಗಮನಿಸಿ ಕೆಂದೂರು ಕೆರೆ, ಮುಚಖಂಡ ಕೆರೆ, ಕಳಸಕೊಪ್ಪ ಕೆರೆಗಳಿಗೆ ಅಣೆಕಟ್ಟೆಗಳನ್ನು ಕಟ್ಟಿಸಿದ ನಂತರ ಈ ಕೆರೆಗಳ ಜೀರ್ಣೋದ್ಧಾರ ಕಾರ್ಯ ಕೈಗೊಂಡು ಈ ಕೆರೆಗಳಲ್ಲಿ ಮೀನು ಸಾಕಾಣಿಕೆ ಉದ್ಯಮ ಪ್ರಾರಂಭಿಸಿದರು. ಇದರಿಂದ ಈ ಭಾಗದ ನೂರಾರು ಕುಟುಂಬಗಳಿಗೆ ಉದ್ಯೋಗ ದೊರಕಿದ್ದು, ಬ್ರಿಟಿಷರಿಗೆ ಆಹಾರ ಉಪಯೋಗ, ಹಾಗೇನೇ ತೆರಿಗೆಯ ಮೂಲಕ ಬ್ರಿಟಿಷರ ಬೊಕ್ಕಸಕ್ಕೆ ಹಣ ಸಂಗ್ರಹಣೆಯಾಗ ತೊಡಗಿತು. ೧೯೨೧ರಲ್ಲಿ ಕೆಂದೂರು ಕೆರೆಯನ್ನು ಜೀರ್ಣೋದ್ಧಾರ ಮಾಡಲಾಗಿದೆ ಎಂಬುದನ್ನು ಕೆರೆಯ ಪಕ್ಕದಲ್ಲಿರುವ ಶಾಸನದಿಂದ ಗುರುತಿಸಲಾಗಿದೆ. ಬಾಗಲಕೋಟೆ ಜಿಲ್ಲೆಯಲ್ಲಿ ಕೆಂದೂರು ಕೆರೆಯು ದೊಡ್ಡದು.

ಕಲಾದಗಿ ಪರಿಸರದಲ್ಲಿ ಸೀಮೆ ಸುಣ್ಣದ ಭಟ್ಟಿಗಳು ಇಂದಿಗೂ ಕಾರ್ಯನಿರ್ವಹಿಸುತ್ತಿವೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಸುಣಗಾರ ಸಮುದಾಯದ ಕೆಲಸ ಕಲ್ಲನ್ನು ಭಟ್ಟಿಗೆ ಹಾಕಿ ಕಟ್ಟಿಗೆಯಿಂದ ಸುಟ್ಟು ಸುಣ್ಣವನ್ನು ತಯಾರಿಸಲು ನೇಮಿಸಲಾಗಿತ್ತು. ಈ ಭಾಗದಲ್ಲಿ ಕಲಾದಗಿಯ ಸುಣ್ಣವು ಅತ್ಯಂತ ತ್ವರಿತಗತಿಯಲ್ಲಿ ಬೆಳವಣಿಗೆಯನ್ನು ಪಡೆಯಿತು. ಆದರೆ ಇಂದಿನ ಆಧುನಿಕ ಬಣ್ಣಗಳಿಗೆ ಬೇರಗಾದ ಜನಸಮುದಾಯ ದೇಶಿಯ ಸೀಮೆ ಸುಣ್ಣವನ್ನು ಉಪಯೋಗಿಸಲು ನಿರಾಕರಿಸುತ್ತಿದ್ದಾರೆ. ಬ್ರಿಟಿಷರು ಸ್ಮಾರಕ ಆಥವಾ ಕಟ್ಟಡಗಳನ್ನು ನಿರ್ಮಿಸಲು ಗಾರೇಗಚ್ಚು, ಸ್ಥಳೀಯ ಸೀಮೆಸುಣ್ಣ, ಕಲ್ಲುಗಳನ್ನು ಮಿಶ್ರಣ ಮಾಡಿ ಬ್ರಿಟಿಷರು ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಹಾಗಾಗಿ ಇಂದಿಗೂ ಸಹ ಗಟ್ಟಿಮುಟ್ಟಾಗಿದ್ದು ಜನರಿಗೆ ಒಂದಲ್ಲ ಒಂದು ರೀತಿಯಿಂದ

ಸಹಾಯಕಾರಿ ಯಾಗಿವೆ. ಸುಣ್ಣ ತಯಾರಿಕೆಯ ಮೇಲೆಯೂ ಬ್ರಿಟಿಷರು ತೆರಿಗೆಯನ್ನು ವಿಧಿಸುತ್ತಿದ್ದರು. ಇದರಿಂದ ಬ್ರಿಟಿಷರ ಬೊಕ್ಕಸಕ್ಕೆ ಹಣ ಸೇರುತ್ತಿತ್ತು. ಈ ಭಾಗದ ಜನರಿಗೆ ಸುಣ್ಣ ತಯಾರಿಕೆಯಂತಹ ಉದ್ಯೋಗಗಳು ಸೃಷ್ಟಿಯಾಗಲು ಒಂದು ವಿಧದಲ್ಲಿ ಬ್ರಿಟಿಷರು ಸಹಾಯದ ಹಸ್ತವನ್ನು ಚಾಚಿದರು. ಲೋಕಾಪುರ ಗ್ರಾಮದಲ್ಲಿ ಪಾಟಿ ಕಾರ್ಖಾನೆ ವಸಾಹತು ಕಾಲದ ಸಂದರ್ಭದಲ್ಲಿ ತ್ವರಿತಗತಿಯಲ್ಲಿ ಕಾರ್ಯಚರಿಸುತ್ತಿತ್ತು. ಇಲ್ಲಿಯ ಪಾಟಿಗಳು ಹೊರ ರಾಜ್ಯಗಳಲ್ಲಿಯೂ ಬಾರಿ ಬೇಡಿಕೆಯು ಇತ್ತು. ಇಂದಿನ ಹಾಗೆ ಪೆನ್ನು ಕಾಗದ, ತಂತ್ರಜ್ಞಾನದಂತಹ ಸೌಲಭ್ಯಗಳಿರಲಿಲ್ಲ. ಹಾಗಾಗಿ ಕಲ್ಲಿನ ಪಾಟಿಗಳನ್ನು ಅಳತೆಗನುಗುಣವಾಗಿ ತಯಾರಿಸಿ, ಅದಕ್ಕೆ ಬೇಕಾದಂತಹ ಬಳಪಗಳನ್ನು ತಯಾರಿಸುತ್ತಿದ್ದರಿಂದಲೇ ಅಂದಿನ ಶಿಕ್ಷಣ, ಅಕ್ಷರಾಭ್ಯಾಸ ಈ ಪಾಟಿಗಳ ಮೇಲೆ ಬರೆಯುತ್ತಿದ್ದರು. ಆಧುನಿಕ ಶಿಕ್ಷಣದ ಅಭಿವೃದ್ಧಿಯಾದ ಮೇಲೆ ಲೋಕಾಪುರ ಗ್ರಾಮದ ಪಾಟಿಯ ಕಾರ್ಖಾನೆ ಮುಚ್ಚಲ್ಪಟ್ಟಿತು. ಆದರೂ ಸಹ ಈ ಬಡಾವಣೆಗೆ ಜನರು ಪಾಟಿ ಕಾರ್ಖಾನೆ ಎಂದು ಇಂದಿಗೂ ಕರೆಯುತ್ತಾರೆ.

ಜಿಲ್ಲೆಯಲ್ಲಿರುವ ಸಂಪದ್ಭರಿತವಾದ ಸಂಪನ್ಮೂಲಗಳನ್ನು ಶೋಧಿಸಿ ಅವುಗಳ ಉಪಯೋಗಿಸುವ ವ್ಯವಸ್ಥಿತವಾದ ಕ್ರಮಗಳನ್ನು ತೋರಿಸಿಕೊಟ್ಟವರು ಬ್ರಿಟಿಷರು. ಇದರ ಹಿಂದೆ ಬ್ರಿಟಿಷರ ಸ್ವಾರ್ಥವು ಕೂಡಾ ಇದೆ. ಅಂದರೆ ತೆರಿಗೆ ರೂಪದಲ್ಲಿ ಹಣಕಾಸು ಸಂಗ್ರಹ, ಹಣಕಾಸು ಮತ್ತು ಇಲ್ಲಿರುವಂತಹ ಸಂಪನ್ಮೂಲಗಳನ್ನು ತಮ್ಮ ಯುರೋಪ ಖಂಡಕ್ಕೆ ರಫ್ತು ಮಾಡಿಕೊಂಡು ಬ್ರಿಟಿಷರು ತಮ್ಮ ರಾಷ್ಟ್ರವನ್ನು ಆರ್ಥಿಕವಾಗಿ ಸುಭದ್ರಗೊಳಿಸಿ ಅಭಿವೃದ್ಧಿಯತ್ತ ಸಾಗುವಂತೆ ಮಾಡುವುದು ಮೂಲ ಉದ್ದೇಶವಾಗಿತ್ತು. ಸ್ಥಳೀಯರಿಗೆ ಆರ್ಥಿಕತೆ, ಶೈಕ್ಷಣಿಕ, ರಾಜಕೀಯ ಲೋಕೋಪಯೋಗಿ ಯೋಜನೆ, ಸೌಲಭ್ಯಗಳು ನಾಲ್ಕನೇ(೧/೪)ದೊರೆತರೆ ಬ್ರಿಟಿಷರಿಗೆ ಈ ಮೇಲಿನ ಕೆಲಸಕಾರ್ಯಗಳಿಂದ ಬಾರಾಣೆ(೩/೪)ಲಾಭಾಂಶ ದೊರೆಯುತ್ತಿತ್ತು. ಇದರಿಂದ ಸ್ಥಳೀಯರು ಅಂದರೆ ಭಾರತೀಯರು ರೋಷಿಹೋಗಿ ಈ ತಾರತಮ್ಯ ನಮಗಾಗುತ್ತಿರುವ ಅನ್ಯಾಯದ ವಿರುದ್ಧ ಅಂದರೆ ಬ್ರಿಟಿಷ ಸಾಮ್ರಾಜ್ಯದ ಆಡಳಿತದ ವಿರುದ್ಧ ತಿರುಗಿ ಬಂಡಾಯವೆಳುವುದು ಅನಿವಾರ್ಯವಾಯಿತು. ಹಾಗಾಗಿ ಭಾರತೀಯರು ಸಂಘಟಿತರಾಗಿ ಸ್ವಾತಂತ್ರ್ಯದ ಕೂಗು ಪ್ರಾರಂಭಿಸಿ ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂಬ ಹೋರಾಟ ಗಾಂಧೀಜಿ, ಬಾಲಗಂಗಾಧರ ತಿಲಕ, ಲಾಲಾ ರಜಪತರಾಯ, ಮುಂತಾದ ಮಹಾನ್ ನೇತಾರರ ನೇತೃತ್ವದಲ್ಲಿ ಭಾರತದ ಸ್ವಾತಂತ್ರ್ಯ ರಣಕಹಳೆ ಆರಂಭವಾಯಿತು. ಹಾಗೇ ಉತ್ತರ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಹೋರಾಟದ ಕಿಡಿ ದಕ್ಷಿಣ ಭಾರತಕ್ಕೂ ವಿಸ್ತರಿಸಿತು. ಹಾಗಾಗಿ ಬಾಗಲಕೋಟೆ ಜಿಲ್ಲೆಯ ಮುಧೋಳ ಸಂಸ್ಥಾನಿಕರ ಅಧೀನದ ಗ್ರಾಮ ಹಲಗಲಿಯಲ್ಲಿ ಬೇಡರು ಬಂಡಾಯ ಆರಂಭಿಸಿದರು. ಬ್ರಿಟಿಷರು ಸ್ಥಳೀಯರ ಆಯುಧಗಳು ಅಥವಾ ಶಸ್ತ್ರಗಳನ್ನು ನಿಷೇಧಿಸಿ ಬ್ರಿಟಿಷ ಸರಕಾರಕ್ಕೆ ತಂದು ಒಪ್ಪಿಸಬೇಕು ಇಲ್ಲವೇ ಅನುಮತಿ

ಪಡೆಯಬೇಕು ಎಂಬ ನಿಶಸ್ತ್ರೀಕರಣ ಕಾಯ್ದೆಯನ್ನು ೧೮೫೭ರಲ್ಲಿ ಹೊರಡಿಸಿದರು. ಇದು ಮುಧೋಳ ಸಂಸ್ಥಾನದ ಮೂಲಕ ಹಲಗಲಿಗೆ ಬಂದು ತಲುಪಿತು. ಇಂತಹ ಕಾಯ್ದೆಯು ನಮ್ಮ ಸ್ವಾಭಿಮಾನ ಸ್ವಾತಂತ್ರ್ಯ ಹತ್ತಿಕ್ಕುವ ಕುಮ್ಮಕ್ಕು ಎಂದು ಭಾವಿಸಿ ಹಲಗಲಿ ಬೇಡರು ತಮ್ಮ ಶಸ್ತ್ರಗಳು ನಮ್ಮ ಪರಂಪರೆ, ಸಂಸ್ಕೃತಿ, ಗೌರವ, ಪ್ರತಿಷ್ಠೆಯ ಹೆಗ್ಗುರುತು, ಸಂಕೇತಗಳಾಗಿವೆ. ಯಾವುದೇ ಕಾರಣಕ್ಕೂ ಆಯುಧಗಳನ್ನು ಬ್ರಿಟಿಷರಿಗೆ ಕೊಡುವುದಿಲ್ಲವೆಂದಾಗ ಕೊನೆಗೆ ಒಳಸಂಚು ರೂಪಿಸಿದ ಬ್ರಿಟಿಷ ಸೈನ್ಯ ಪಡೆ ಹಲಗಲಿಗೆ ಮುತ್ತಿಗೆ ಹಾಕಿ ಬೇಡರನ್ನು ಸದೆ ಬಡಿದು ಕೆಲವರಿಗೆ ಕಠಿಣ ಕಾರಗೃಹ ವಾಸ, ಕೆಲವರನ್ನು ಗಲ್ಲು ಶಿಕ್ಷೆ ವಿಧಿಸಿತು. ಈ ಸಂದರ್ಭದಲ್ಲಿಯೂ ಸಹ ಬ್ರಿಟಿಷರು ಮುಧೋಳ ಸಂಸ್ಥಾನಿಕರ ಜೊತೆಗೆ ಕೈಜೋಡಿಸಿ ತಮ್ಮ ಸ್ವಾರ್ಥ ಸಾಧಿಸಲು ಯಶಸ್ವಿಯಾದರು. ಇದಕ್ಕೆ ಮುಖ್ಯ ಕಾರಣ ಈ ಪ್ರದೇಶವು ಕೂಡಾ ಸಂಪದ್ಭರಿತವಾಗಿರುವಂತಹದು. ಹಾಗಾಗಿ ಬ್ರಿಟಿಷರಿಗೆ ಮುಧೋಳ ಹಾಗೂ ಹಲಗಲಿ ಪ್ರದೇಶಗಳ ಮೇಲೆ ತಮ್ಮ ರಾಜಕೀಯ ಆರ್ಥಿಕ ಹಿಡಿತವನ್ನು ಸಾಧಿಸುವಲ್ಲಿ ಯಶಸ್ವಿಯಾದರು

**ಕೊನೆ ಟಿಪ್ಪಣಿಗಳು**

೧. ತಲ್ವಾಡಿ ಬಿ.ಎಸ್., ೨೦೦೬, ಕಥೋಲಿಕ್ ಕ್ರೈಸ್ತರ ಶಿಕ್ಷಣ ಮತ್ತು ವೈದ್ಯಕೀಯ ಸೇವೆ, ಪು.೧

೨. ಅದೇ, ಪು.೨

೩. ಅದೇ, ಪು.೩

೪. ಅದೇ, ಪು.೫

೫. ಅದೇ, ಪು.೬

೬. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ವಿಜಾಪುರ ಜಿಲ್ಲಾ ಗ್ಯಾಸೆಟಿಯರ್, ಪು.೮೦೨

೭. ಸೂರ್ಯನಾಥ ಯು. ಕಾಮಥ್, ೧೯೮೬, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೩, ಪು.೬

೮. ಅದೇ, ಪು.೬

೯. ಅದೇ, ಪು.೬

೧೦. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ಪೂರ್ವೋಕ್ತ, ಪು.೯೫೪

೧೧. ಅದೇ, ಪು.೯೫೪

೧೨. ಜಗದೀಶ ಕೆ., ೨೦೧೧, ಆಧುನಿಕ ಭಾರತದ ಇತಿಹಾಸ, ಪು.೨೮೩

೧೩. ಅದೇ, ಪು.೨೮೪

೧೪. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ಪೂರ್ವೋಕ್ತ, ಪು.೮೦೨

೧೫. ಅದೇ, ಪು.೮೦೨

೧೬. ಅದೇ, ಪು.೮೦೫

೧೭. ಅದೇ, ಪು.೮೧೩

೧೮. ಅದೇ, ಪು.೮೧೫

೧೯. ಅದೇ, ಪು.೮೨೦

೨೦. ತಲ್ವಾಡಿ ಬಿ.ಎಸ್., ೨೦೦೬, ಪೂರ್ವೋಕ್ತ, ಪು.೭

೨೧. Joseph Thekkadath(Ed), History of Church in India, Vol.II, Pp.290

೨೨. Ibid, Pp.420

೨೩. ಸ್ವಾಮಿ ಡಾ.ಐ.ಅಂತಪ್ಪ, ೨೦೦೧, ಉತ್ತರ ಕರ್ನಾಟಕದಲ್ಲಿ ಕ್ರೈಸ್ತಧರ್ಮದ ಉಗಮ(೧೮೦೦ಕ್ಕೂ ಹಿಂದೆ), ಪು.೧೭೭

೨೪. ತಲ್ವಾಡಿ ಬಿ.ಎಸ್., ೨೦೦೬, ಪೂರ್ವೋಕ್ತ, ಪು.೭

೨೫. ಅದೇ, ಪು.೮

೨೬. ಅದೇ, ಪು.೮

೨೭. ಅದೇ, ಪು.೮

೨೮. ಅದೇ, ಪು.೮

೨೯. Hull Earnest R., Bombay Mission History, Vol.Ii, Pp.443-445

೩೦. ಗಿರಿರಾಜ ಎಂ.ಆರ್., ರಾಜಶೇಖರ ಮಠಪತಿ, ೨೦೧೧, ಕನ್ನಡ ಕರ್ನಾಟಕ ಅಂದು-ಇಂದು, ಪು.೧೪೨-೧೪೩

೩೧. ಅದೇ, ಪು.೧೫೪

೩೨. ಗೌತಮ್ ಚಟರ್ಜಿ, ಪಾಲಿಸಿಸ್ ಅಂಡ್ ಪಾಲಿಟಿಕ್ಸ್ ಆಫ್ ಇಂಡಿಯನ್ ರೈಲ್ವೆಸ್(೧೮೫೩-೧೯೪೭), ಪು.೬೬

೩೩. ಅದೇ, ಪು.೬೬–೬೭

೩೪. ಫ್ರಾನ್ಸಿಸ್ ಬುಕಾನನ್, ೧೮೦೭, ಎ ಜರ್ನಿ ಫ್ರಂ ಮದ್ರಾಸ್ ದ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್, ಸಂ.೧, ಲಂಡನ್(ಮರು ಮುದ್ರಣ ೨೦೧೦), ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು, ಪು.೧

೩೫. ಮುನಿಸ್ವಾಮಿ ಆರ್.(ಮು.ಸಂ.), ೧೯೯೯, ಪೂರ್ವೋಕ್ತ, ಪು.೫೬೫

೩೬. ಅದೇ, ಪು.೫೮೮

೩೭. ಅದೇ, ಪು.೫೬೪

೩೮. ಅದೇ, ಪು.೫೬೫

೩೯. ಅದೇ, ಪು.೫೬೫

೪೦. ಅದೇ, ಪು.೬೬

೪೧. ಅದೇ, ಪು.೫೬೬

೪೨. ಅದೇ, ಪು.೫೬೬

೪೩. ಪಾರ್ಥಸಾರಥಿ ಕೆ.ಎಸ್., ೨೦೦೬, ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಒಂದು ಚಾರಿತ್ರಿಕ ನೋಟ, ಪು.೨೮–೨೯

೪೪. ಅದೇ, ಪು.೨೯

೪೫. ಅದೇ, ಪು.೨೯–೩೦

೪೬. ನರಸಿಂಹಮೂರ್ತಿ ಎ.ವಿ., ೨೦೦೯, ಕರ್ನಾಟಕದ ನಾಣ್ಯಗಳು, ಪು.೫೪–೫೫

೪೭. ಮುನಿಸ್ವಾಮಿ ಆರ್., ೧೯೯೯, ಪೂರ್ವೋಕ್ತ, ಪು.೪೯೦–೪೯೧

೪೮. ಅದೇ, ಪು.೪೯೧

೪೯. ಅದೇ, ಪು.೪೯೨

೫೦. ನರಸಿಂಹಮೂರ್ತಿ ಎ.ವಿ., ೨೦೦೯, ಪೂರ್ವೋಕ್ತ, ಪು.೬೧

## ಅಧ್ಯಾಯ: ಆರು

# ಸಮಾರೋಪ

ಬ್ರಿಟಿಷರು ಕ್ರಿ.ಶ.೧೬೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರೊಂದಿಗೆ ಭಾರತ ದೇಶಕ್ಕೆ ವ್ಯಾಪಾರಕ್ಕಾಗಿ ಬಂದರು. ಕ್ರಿ.ಶ.೧೭೫೭ರಲ್ಲಿ ಪ್ಲಾಸಿ ಕದನದ ಮೂಲಕ ಭಾರತದಲ್ಲಿ ರಾಜ್ಯಾಡಳಿತವನ್ನು ಅಥವಾ ರಾಜ್ಯಸತ್ತೆಯ ಭದ್ರವಾದ ತಳಪಾಯ ಹಾಕಿದರು. ಹೀಗೆ ೧೭೫೭ರಿಂದ ೧೮೫೭ರ ವರೆಗೆ ಭಾರತದಲ್ಲಿ ೧/೩ ಭಾಗ ಪ್ರದೇಶವನ್ನು ವಶಪಡಿಸಿ ಕೊಳ್ಳುವುದರ ಮುಖಾಂತರ ತಮ್ಮ ವಸಾಹತುಶಾಹಿ ನೀತಿಗಳಿಂದ ಭಾರತೀಯರನ್ನು ಸಾಮಾಜಿಕ ವಾಗಿ ಶೋಷಣೆ ಹಾಗೂ ದಬ್ಬಾಳಿಕೆ ಮಾಡಿ ಆರ್ಥಿಕವಾಗಿ ಸಂಪತ್ತಿನ ದುರ್ಬಳಕೆ ಹಾಗೂ ಲೂಟಿಯನ್ನು ಮಾಡಿದರು. ಇದರಿಂದ ಬ್ರಿಟಿಷರ ವಿರೋಧಿ ಆನೇಕರು ಸಶಸ್ತ್ರ ಬಂಡಾಯಗಳು ಹಾಗೂ ನಂತರ ಸಂಘಟಿತ ಹೋರಾಟಗಳು ಆರಂಭಗೊಂಡವು ೧೯೪೭ರ ವರೆಗೆ ಸರ್ವಾಧಿಕಾರಿಗಳಂತೆ ಆಡಳಿತವನ್ನು ಮಾಡಿದ ಬ್ರಿಟಿಷರು ಭಾರತದಲ್ಲಿ ಹಲವಾರು ರೀತಿಯಾದ ತಮ್ಮದೇಯಾದಂತಹ ಕುಟೀಲ ನೀತಿ, ಒಳಸಂಚು ಹಾಗೂ ವಿವಿಧ ಯೋಜನೆಗಳನ್ನು ಜಾರಿಯಲ್ಲಿ ತಂದರು. ಹೀಗಾಗಿ ಬ್ರಿಟಿಷರ ಆಡಳಿತದಿಂದ ಭಾರತ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ, ಸಾಂಸ್ಕೃತಿಕ, ಮುದ್ರಣ ಕ್ಷೇತ್ರ, ಸಂಶೋಧನ ಕ್ಷೇತ್ರ ಹಾಗೂ ಇತ್ಯಾದಿ ಕ್ಷೇತ್ರಗಳ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದವು. ಭಾರತದಲ್ಲಿ ಬ್ರಿಟಿಷರು ಸುಮಾರು ಎರಡುನೂರು ವರ್ಷಗಳ ಕಾಲ(೧೭೫೭-೧೯೪೭) ಆಳ್ವಿಕೆಯನ್ನು ನಡೆಸಿದರು. ಇವರ ಆಳ್ವಿಕೆಯಿಂದ ಭಾರತದ ಸಾಮಾಜಿಕ ವ್ಯವಸ್ಥೆಯ ಮೇಲೆ ಸಕಾರಾತ್ಮಕ ಹಾಗೂ ನಕಾರಾತ್ಮಕವಾದ ಎರಡೂ ರೀತಿಯಲ್ಲಿ ಪರಿಣಾಮ ಅಥವಾ ಪ್ರಭಾವವನ್ನು ಬೀರಿದ್ದನ್ನು ಕಾಣುತ್ತೇವೆ. ಹಲವಾರು ಪ್ರಯೋಜನೆಗಳಾದರೂ ಸಮಾಜದ ವಿವಿಧ ಕ್ಷೇತ್ರಗಳ ಮೇಲೆ ವ್ಯತಿರಿಕ್ತ ಪರಿಣಾಮಗಳುಂಟಾದವು. ಅವುಗಳಲ್ಲಿ ಮುಖ್ಯವಾಗಿ ಭಾಷೆ, ಸಂಸ್ಕೃತಿ, ಸಾಹಿತ್ಯ, ಧರ್ಮ, ಸಮಾಜ, ಆರ್ಥಿಕತೆ, ಧಾರ್ಮಿಕತೆ ಹಾಗೂ ಹೆಚ್ಚಾಗಿ ನಂಬಿಕೆ, ಆಚರಣೆ, ಸಮಾಜದ ಆಚಾರ-ವಿಚಾರಗಳ ಮೇಲೆ ಮಹತ್ವದ ಪರಿಣಾಮಗಳು ಉಂಟಾದವು. ಭಾರತದಲ್ಲಿ

